# ಜಿ. ಕೃಷ್ಣಪ್ಪ

ಜಿ. ಕೃಷ್ಣಪ್ಪ ಕನ್ನಡದ ಅಪರೂಪದ ವಿಮರ್ಶಕರು. ಕವಿ ದ.ರಾ. ಬೇಂದ್ರೆಯವರ ಸಾಹಿತ್ಯವನ್ನು ಅವರು ತಲಸ್ಪರ್ಶಿಯಾಗಿ ಅಧ್ಯಯನ ಮಾಡಿದ್ದಾರೆ. 'ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ – ಒಂದು ಅಧ್ಯಯನ' ವಿಷಯದ ಕುರಿತು ಮಹಾಪ್ರಬಂಧ ರಚಿಸಿ ಡಾಕ್ಟರ್‌ಆಗಿರುವ ಕೃಷ್ಣಪ್ಪನವರು, ಬೇಂದ್ರೆಮಹಾಕವಿಯ ಅಧ್ಯಯನಕ್ಕೆ ತಮ್ಮ ಬದುಕಿನ ಬಹುಭಾಗ ಸಮರ್ಪಿಸಿಕೊಂಡಿದ್ದಾರೆ. ಬೇಂದ್ರೆಕುರಿತು ಅಧಿಕೃತವಾಗಿ ಮಾತನಾಡಬಲ್ಲ ಕೃಷ್ಣಪ್ಪ ವಿದ್ಯಾರ್ಥಿಗಳಿಗೆ ಬೇಂದ್ರೆ ಕಾವ್ಯಗಾಯನ ಏರ್ಪಡಿಸಿದ್ದಾರೆ. ರಾಜ್ಯದಹಲವೆಡೆ ಬೇಂದ್ರೆಕುರಿತು ಕಾರ್ಯಕ್ರಮ ಸಂಘಟಿಸಿದ್ದಾರೆ. ಅದರಲ್ಲಿ ಭಾಗಿಯಾದ ಎಲ್ಲರಿಗೂ ಬೇಂದ್ರೆರಚಿಸಿದ ಕಾವ್ಯಕೃತಿಗಳನ್ನು ಉಚಿತವಾಗಿ ಹಂಚಿದ್ದಾರೆ. 'ನಾಕು ತಂತಿ–ಒಂದು ಟಿಪ್ಪಣಿ', 'ಬರೆಹದಲ್ಲಿ ಬೇಂದ್ರೆಯವರ ಬದುಕು', 'ಹೂತದ ಹುಣಸಿ', 'ಅಂತರಂಗದತ್ತ ನಯನ' ಸೇರಿದಂತೆ ಒಟ್ಟು ಎಂಟು ವಿಮರ್ಶಾ ಸಂಕಲನಗಳನ್ನು ಪ್ರಕಟಿಸಿದ್ದಾರೆ.

ಬೆಂಗಳೂರಿನಲ್ಲಿ ಹುಟ್ಟಿಬೆಳೆದ ಕೃಷ್ಣಪ್ಪನವರಿಗೆ ಲಕ್ಷ್ಮೀಶನ 'ಜೈಮಿನಿ ಭಾರತ' ಓದುವಗೀಳು ತಂದೆ ಎಚ್.ಗಂಗಯ್ಯನವರಿಂದ ಬಂದ ಬಳುವಳಿ. ಮೋಟಾರು ವಾಹನ ಇಲಾಖೆಯಲ್ಲಿ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಯಾಗಿದ್ದ ಕೃಷ್ಣಪ್ಪನವರು ಬದುಕಿದ್ದು–ಆರಾಧಿಸಿದ್ದು ಎಲ್ಲವೂ ಸಾಹಿತ್ಯವೆ. ಬದುಕು–ಬರಹ ಅವರಿಗೆ ಬೇರೆಬೇರೆಯಲ್ಲ.

ಲಕ್ಷ್ಮೀಶನ 'ಜೈಮಿನಿ ಭಾರತ' ಶ್ರೀಕೃಷ್ಣನ ಭಕ್ತಿಸಾರುವ ಕಥಾಗುಚ್ಛ. ಇದು ಶ್ರೀಕೃಷ್ಣನ ಮಾನವಲೀಲೆಯಾದ್ದರಿಂದ, ಕೃಷ್ಣಲೀಲೆಗಿಂತ ಮಿಗಿಲಾದದ್ದು. ಅರ್ಜುನನ ಅಹಂಕಾರವನ್ನು ತಗ್ಗಿಸುವ ಇಲ್ಲಿನ ಯುವರಾಜರು ಶುದ್ಧ, ಸಾತ್ವಿಕ, ನೈತಿಕ ಶೂರರು. ಮೂಲದಲ್ಲಿನ ಅನವಶ್ಯಕವಾದುದನ್ನು ತೆಗೆದು ಹಾಕಿದರೂ, ಅದರ ರುಚಿಕೆಡದಂತೆ ಸರಳಗದ್ಯದಲ್ಲಿ ಇಲ್ಲಿ ಕಟ್ಟಿಕೊಟ್ಟಿದ್ದಾರೆ.

**ಗುಡಿಹಳ್ಳಿ ನಾಗರಾಜ**

ಮಹಾಕವಿ ಲಕ್ಷ್ಮೀಶನ

# ವಚನ ಜೈಮಿನಿ ಭಾರತ

ಡಾ. ಜಿ. ಕೃಷ್ಣಪ್ಪ



ಕಾಮಧೇನು
ಪುಸ್ತಕ ಭವನ

ನಂ. ೫/೧, ನಾಗಪ್ಪ ಸ್ಟ್ರೀಟ್, ಶೇಷಾದ್ರಿಪುರ, ಬೆಂಗಳೂರು-೫೬೦ ೦೨೦

**VACHANA JAIMINI BHARATHA :** A Jaimini Bharata in prose by Dr. G. Krishnappa, # 22, Sri Gurudatta Nilaya, 1st Cross, Netaji Nagara, Mattikere, Bengaluru - 560 054, Mobile : 99721 09209

Published by : Prof. D.K. Shyamasundara Rao for
Kamadhenu Pustaka Bhavana,
# 5/1, Nagappa Street, Sheshadripura, Bengaluru - 560 020

| | | |
|---|---|---|
| First Edition | : | 2012 |
| Pages | : | xix + 193 = 212 |
| Copies | : | 1000 |
| Copy Right | : | Author |
| Paper | : | 80 gsm Maplitho |
| Price | : | ₹ 150/- |

**ವಚನ ಜೈಮಿನಿ ಭಾರತ**

ಲೇಖಕರು : ಡಾ. ಜಿ. ಕೃಷ್ಣಪ್ಪ, # 22, ಶ್ರೀ ಗುರುದತ್ತ ನಿಲಯ,
ಮೊದಲನೇ ಅಡ್ಡರಸ್ತೆ, ನೇತಾಜಿನಗರ, ಮತ್ತಿಕೆರೆ, ಬೆಂಗಳೂರು-560 054,
ಜಂಗಮವಾಣಿ : 99721 09209

ಪ್ರಕಾಶಕರು : ಪ್ರೊ. ಡಿ.ಕೆ. ಶ್ಯಾಮಸುಂದರರಾವ್, ಕಾಮಧೇನು ಪುಸ್ತಕ ಭವನ,
ನಂ. 5/1, ನಾಗಪ್ಪ ಸ್ಟ್ರೀಟ್, ಶೇಷಾದ್ರಿಪುರ, ಬೆಂಗಳೂರು-560020

| | | |
|---|---|---|
| ಕೃತಿಸ್ವಾಮ್ಯ | : | ಲೇಖಕರದು |
| ಮೊದಲ ಮುದ್ರಣ | : | 2012 |
| ಬೆಲೆ | : | ₹ 150/- |

ಮುದ್ರಣ : ಪರಿಶ್ರೀ ಪ್ರಿಂಟರ್ಸ್, ನಂ.9, 4ನೇ ಅಡ್ಡರಸ್ತೆ, ನಾಗಪ್ಪ ಬ್ಲಾಕ್, ಶ್ರೀರಾಮಪುರಂ,
ಬೆಂಗಳೂರು - 560 021, ✆ 2312 8286,
email: info@parishree.com; www.parishree.com



# ಸಮರ್ಪಣೆ

ನನ್ನಲ್ಲಿ ಕಾವ್ಯ ಕುತೂಹಲವನ್ನು ಮೂಡಿಸಿದ

**ನನ್ನ ಪೂಜ್ಯ ತಂದೆ ಎಚ್. ಗಂಗಯ್ಯ**

**ನನ್ನ ಪೂಜ್ಯ ಮಾತೆ ಸಾವಿತ್ರಮ್ಮ**

ಅವರಿಗೆ

ನಲ್ಮೆಯಿಂದ ಸಮರ್ಪಣೆ



# ಮುನ್ನುಡಿ

ಡಾ॥ ಜಿ. ಕೃಷ್ಣಪ್ಪನವರ 'ವಚನ ಜೈಮಿನಿ ಭಾರತ'ಕ್ಕೆ ಮುನ್ನುಡಿಯ ರೂಪದಲ್ಲಿ ನಾಲ್ಕುಮಾತು ಬರೆಯುವುದು ನನಗೆ ಸಂಭ್ರಮದ ಸಂಗತಿಯಾಗಿದೆ. ಅದಕ್ಕೂ ಮುನ್ನ ಕೃಷ್ಣಪ್ಪನವರ ಸಾಹಿತ್ಯ ಪ್ರೇಮ ಹಾಗೂ ಸಮರ್ಪಣಭಾವಗಳನ್ನು ಕುರಿತು ನಾಲ್ಕುಮಾತು ಹೇಳಿ ಮುಂದುವರಿಯುತ್ತೇನೆ. ಕೃಷ್ಣಪ್ಪನವರು ಮೂಲತಃ ಆಟೋಮೊಬೈಲ್ ಇಂಜಿನಿಯರ್. ರೀಜನಲ್ ಟ್ರಾನ್ಸ್‌ಪೋರ್ಟ್ ಕಛೇರಿಯ ಅಧಿಕಾರಿಗಳಾಗಿ ಪ್ರಾಮಾಣಿಕತೆಯಿಂದ ಸೇವೆಸಲ್ಲಿಸಿ ಈಗ ನಿವೃತ್ತರಾಗಿದ್ದಾರೆ. ಹಲವು ವರ್ಷಗಳಿಂದ ಸಾಹಿತ್ಯ ರಚನೆಯನ್ನು ತೀವ್ರವಾಗಿ ಹಚ್ಚಿಕೊಂಡು ಹಲವಾರು ಗಣ್ಯಕೃತಿಗಳನ್ನು ಅವರು ಪ್ರಕಾಶಪಡಿಸಿದ್ದಾರೆ. ಕನ್ನಡದಲ್ಲಿ ಮಾಸ್ಟರ್ ಪದವೀಧರರಾಗಿ, ತರುವಾಯ 'ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ' ಎಂಬ ವಿಷಯವನ್ನು ಕೈಗೆತ್ತಿಕೊಂಡು ಸಂಶೋಧನೆ ನಡೆಸಿ ಮೈಸೂರು ವಿಶ್ವವಿದ್ಯಾನಿಲಯದಿಂದ ಡಾಕ್ಟರೇಟ್ ಪದವಿಪಡೆದಿದ್ದಾರೆ. ಆಟೋಮೊಬೈಲ್ ಇಂಜಿನಿಯರೊಬ್ಬರು ಕನ್ನಡದಲ್ಲಿ ಡಾಕ್ಟರೇಟ್ ಪಡೆದು ಸಾಹಿತ್ಯ ರಚನೆಗೆ ತೊಡಗಿಸಿಕೊಂಡಿರುವಲ್ಲಿ ಕೃಷ್ಣಪ್ಪನವರೇ ಮೊತ್ತಮೊದಲಿಗರೆಂದು ನಾನು ಭಾವಿಸುತ್ತೇನೆ. ಅಂತಹ ಅಪೂರ್ವಪುರುಷರ ಗುಂಪಿಗೆ ಕೃಷ್ಣಪ್ಪನವರು ಸೇರಿದ್ದಾರೆ. ಕನ್ನಡಾಂಬೆಯ ಸುಪುತ್ರರಲ್ಲೊಬ್ಬರಾಗಿ ಎಣಿಕೆಗೊಂಡಿದ್ದಾರೆ.

ಸಾಹಿತ್ಯರಂಗದಲ್ಲಿಯೂ ಕೃಷ್ಣಪ್ಪನವರಿಗೆ ಅಂಬಿಕಾತನಯದತ್ತರೆನಿಸಿದ ಬೇಂದ್ರೆಯವರ ಕಾವ್ಯಜಗತ್ತೆಂದರೆ ಪಂಚಪ್ರಾಣ. ಬೇಂದ್ರೆಯವರನ್ನು ಕುರಿತ ತಮ್ಮ ಮಹಾಪ್ರಬಂಧವನ್ನು ಪ್ರಕಟಿಸಿರುವುದಲ್ಲದೆ ಕೃಷ್ಣಪ್ಪನವರು ಬೇಂದ್ರೆಯವರನ್ನು ಕುರಿತಂತೆ ಹಾಡುಹಕ್ಕಿ ಅಂಬಿಕಾತನಯದತ್ತ, ಹೂತದ ಹುಣಸಿ, ನಾಕುತುಂತಿ – ಒಂದು ಟಿಪ್ಪಣಿ, ಬರೆಹದಲ್ಲಿ ಬೇಂದ್ರೆಯವರ ಬದುಕು, ಅಂತರಂಗದತ್ತ ನಯನ ಎಂಬಿತ್ಯಾದಿ ಕೃತಿಗಳನ್ನು ಪ್ರಕಟಿಸಿ, ಬೇಂದ್ರೆ ತಜ್ಞರೆನಿಸಿಕೊಂಡು, ವಿಶೇಷವಾದ ಕೀರ್ತಿಗೆ ಭಾಜನರಾಗಿದ್ದಾರೆ. D.R. Bendre ಎಂಬ ಶೀರ್ಷಿಕೆಯಲ್ಲಿ ಅವರ ಒಂದು ಆಂಗ್ಲಕೃತಿಯೂ ಇದೆ. ಬೇಂದ್ರೆಯವರ ಕಾವ್ಯ ಜಗತ್ತಿಗೇ ತಮ್ಮನ್ನು ಸಮರ್ಪಿಸಿಕೊಂಡು, ಅದನ್ನೇ ತಲಸ್ಪರ್ಶಿಯಾಗಿ ಅಧ್ಯಯನಮಾಡಿ, ಇಷ್ಟು ವಿಪುಲವಾಗಿ ಕೃತಿರಚನೆ ಮಾಡಿದವರು ಕನ್ನಡದಲ್ಲಿ ಕೃಷ್ಣಪ್ಪನವರ ಹೊರತಾಗಿ ಮತ್ತೊಬ್ಬರಿಲ್ಲ ಎಂದು ಹೇಳಿದರೆ ಅದು ಅತಿಶಯೋಕ್ತಿಯಲ್ಲ. ಬೇಂದ್ರೆಯವರ ಸಾಹಿತ್ಯದ ಅಧ್ಯಯನಕ್ಕಾಗಿ ಮತ್ತು ಪ್ರಚಾರಕ್ಕಾಗಿ 'ದ.ರಾ. ಬೇಂದ್ರೆ ಕಾವ್ಯ ಕೂಟ' ಎಂಬೊಂದು ಸಂಸ್ಥೆಯನ್ನೇ ಅವರು ಕಟ್ಟಿದ್ದಾರೆ. ವಿಶ್ವವಿದ್ಯಾನಿಲಯಗಳಿಗಾಗಲಿ, ಶಾಲೆಕಾಲೇಜುಗಳಿಗಾಗಲಿ, ಸಾಹಿತ್ಯಾಸಕ್ತರಿಗಾಗಲಿ ಬೇಂದ್ರೆಯವರನ್ನು ತಲಪಿಸುವ ಸಲುವಾಗಿ ಕೃಷ್ಣಪ್ಪನವರು ಹಲವು ಬಗೆಯ ಕಾರ್ಯಕ್ರಮಗಳನ್ನು ನಿರಂತರವಾಗಿ ನಡೆಸುತ್ತಿದ್ದಾರೆ. ಅದೊಂದು ಪ್ರಚಾರ ಪ್ರಿಯತೆಯಿಲ್ಲದ ಆಂದೋಳನವಾಗಿ ನಡೆಯುತ್ತಿದೆ ಎಂದೇ ಹೇಳಬೇಕಾಗಿದೆ.

ಈಗ ಪ್ರಸ್ತುತ ವಚನ ಜೈಮಿನಿಗೆ ಬರೋಣ. ಕೃಷ್ಣಪ್ಪನವರು ಜೈಮಿನಿಭಾರತವನ್ನು ಕೈಗೆತ್ತಿಕೊಂಡು ಅದರ ಸಾರಪೂರ್ಣವಾದ ವಚನಚಂದ್ರಿಕೆಯೊಂದನ್ನು ನಿರ್ಮಾಣಮಾಡಿರುವಲ್ಲಿ ಮುಖ್ಯವಾಗಿ ಎರಡು ಕಾರಣಗಳಿವೆ. ಕೃಷ್ಣಪ್ಪನವರ ತಂದೆ

ಗಂಗಯ್ಯನರಿಗೆ ಲಕ್ಷ್ಮೀಶನು ಅತ್ಯಂತ ಪ್ರಿಯನಾದ ಕವಿಯಾಗಿದ್ದನು. ಅವರು ತಮ್ಮದೇ ಆದ ಧಾಟಿಯಲ್ಲಿ ಜೈಮಿನೀಭಾರತವನ್ನು ಓದಿಕೊಳ್ಳುತ್ತ, ಅದರ ಸೊಬಗನ್ನು ಸವಿಯುತ್ತ ಸುಖಿಸುತ್ತಿದ್ದರು. ನಮ್ಮ ಹಿಂದಿನ ತಲೆಮಾರಿನವರ ಲಕ್ಷ್ಮೀಶ ಕಾವ್ಯಪ್ರೇಮಕ್ಕೆ ಇದೊಂದು ಉಜ್ವಲ ಉದಾಹರಣೆ. ಆ ಲಕ್ಷ್ಮೀಶಪ್ರಿಯತೆ ತಂದೆಯವರಿಂದ ಕೃಷ್ಣಪ್ಪನವರಿಗೂ ಬಳುವಳಿಯಾಗಿ ಬಂದಿತು. ಕವಿವರ್ಯಬೇಂದ್ರೆಯವರೂ ಲಕ್ಷ್ಮೀಶನನ್ನು ತುಂಬಾ ಮೆಚ್ಚಿಕೊಂಡಿದ್ದರು. ಅವನನ್ನು 'ನಾದಲೋಲ' ಎಂದು ಅವರು ಕೊಂಡಾಡಿದ್ದಾರೆ. ಬೇಂದ್ರೆಯವರಿಗೆ ಪ್ರಿಯನಾದ ಕವಿ, ಬೇಂದ್ರೆ ಪ್ರೇಮಿಗೂ ಪ್ರಿಯನಾಗಲೇಬೇಕಲ್ಲವೆ! ಹೀಗೆ ಎರಡು ದಿಕ್ಕುಗಳಿಂದ ಕೃಷ್ಣಪ್ಪನವರು ಲಕ್ಷ್ಮೀಶನನ್ನು ತಮ್ಮವನನ್ನಾಗಿ ಮಾಡಿಕೊಂಡಿದ್ದಾರೆ. ಈ ಗದ್ಯಾನುವಾದವನ್ನು ಲೋಕಾರ್ಪಣಮಾಡಿದ್ದಾರೆ.

ಕೃಷ್ಣಪ್ಪನವರು ಈಗಾಗಲೇ ಜೈಮಿನೀ ಭಾರತವನ್ನು ಲಕ್ಷಲಕ್ಷ ಸಾಹಿತ್ಯಾಸಕ್ತರಿಗೆ ಮುಟ್ಟಿಸುವ ಕೈಂಕರ್ಯವನ್ನು 'ಮತ್ತೆ ಮಹಾಭಾರತ' ಎಂಬ ಶೀರ್ಷಿಕೆಯಲ್ಲಿ 'ಸುಧಾ' ವಾರಪತ್ರಿಕೆಯ ಮೂಲಕ ನೆರವೇರಿಸಿ, ಪರಿಪೂರ್ಣವಾದ ಯಶಸ್ಸನ್ನು ಗಳಿಸಿದ್ದಾರೆ. ಚೇತೋಹಾರಿಯಾದ ಗದ್ಯಾನುವಾದದ ಮೂಲಕ ವಿದ್ವಾಂಸರ ವಿಶ್ವಾಸಕ್ಕೆ ಮಾತ್ರವಲ್ಲದೆ, ಶ್ರೀಸಾಮಾನ್ಯರ ವಿಶ್ವಾಸಕ್ಕೂ ಅವರು ಪಾತ್ರರಾಗಿದ್ದಾರೆ.

'ಸುಧಾ' ಪತ್ರಿಕೆಯಲ್ಲಿ ಸಂಕ್ಷಿಪ್ತವಾಗಿ ಪ್ರಕಟವಾಗಿದ್ದ ಕಥಾನಕವನ್ನು ಕೃಷ್ಣಪ್ಪನವರು, ಮೂಲವನ್ನು ಅನುಸರಿಸಿ ಮತ್ತಷ್ಟು ವಿಸ್ತರಿಸಿ 'ವಚನ ಜೈಮಿನಿಭಾರತ' ಎಂಬ ಹೊಸ ಶೀರ್ಷಿಕೆಯಲ್ಲೀಗ ಪ್ರಕಟಿಸಿದ್ದಾರೆ. ಅದು ಎ.ಆರ್. ಕೃಷ್ಣಶಾಸ್ತ್ರಿಗಳ 'ವಚನಭಾರತ' ಎಂಬ ಶೀರ್ಷಿಕೆಯನ್ನು ನೆನಪಿಗೆ ತರುವಂತಿದೆ. ಅಷ್ಟು ಮಾತ್ರವಲ್ಲ, ಕಥೆಯ ನಿರೂಪಣೆಯಲ್ಲಾಗಲಿ, ಸಂಗ್ರಹಕೌಶಲದಲ್ಲಾಗಲಿ, ಗದ್ಯಶೈಲಿಯ ಸರಸತೆಯಲ್ಲಾಗಲಿ, ಲವಲವಿಕೆಯಿಂದ ಕೂಡಿದ ಮುನ್ನಡೆಯಲ್ಲಾಗಲಿ ಆ ಗ್ರಂಥದ ಆದರ್ಶಗಳೇ ಇಲ್ಲಿಯೂ ಕೆಲಸ ಮಾಡಿ, ಕೃಷ್ಣಪ್ಪನವರನ್ನು ವಿಜಯದ ಹಾದಿಯಲ್ಲಿ ಮುನ್ನಡೆಸಿವೆ. ಅವರು ಕೃಷ್ಣಶಾಸ್ತ್ರಿಗಳಾದರೆ, ಇವರು ಕೃಷ್ಣಪ್ಪನವರು; ಅದೂ ಕೃಷ್ಣಕಥೆಯೇ, ಇದೂ ಕೃಷ್ಣಕಥೆಯೇ! ಅದೂ ಸಚಿತ್ರ, ಇದೂ ಸಚಿತ್ರ !

ಕೃಷ್ಣಪ್ಪನವರು ತಾವು ಬಾಲ್ಯದಿಂದಲೂ ಮೆಚ್ಚಿಕೊಂಡಿದ್ದ ಜೈಮಿನೀ ಭಾರತದ ಸಮಗ್ರ ವಸ್ತುವನ್ನು ಮೊದಲಿಗೆ ತಮ್ಮಹೃದಯಕ್ಕೆ ತುಂಬಿಕೊಂಡಿದ್ದಾರೆ. ಅದನ್ನೆಲ್ಲ ಮೆಲುಕು ಹಾಕಿ ಹಾಕಿ, ಅದರ ನಾಟಕೀಯ ಗುಣಗಳಿಗೆ ಮಾರುಹೋಗಿದ್ದಾರೆ, ಆ ಕಥೆಯ ಸಾಂದ್ರತೆಗೆ ಬೆರಗಾಗಿದ್ದಾರೆ. ಆ ನಾಟಕೀಯತೆ, ಆ ಕಥಾ ಸಾಂದ್ರತೆಗಳು ಕಳಚಿಹೋಗದಂತೆ ತಮ್ಮದೇ ಆದ ನಡೆಯಲ್ಲಿ ಎಲ್ಲವನ್ನೂ ಮನೋಜ್ಞವಾಗುವಂತೆ ಬಿತ್ತರಿಸಿದ್ದಾರೆ. ಪ್ರತಿಯೊಂದು ಕಥೆಯಲ್ಲೂ ಇರುವ ಮರ್ಮಸ್ಥಾನಗಳನ್ನು ಕೃಷ್ಣಪ್ಪನವರು ಪತ್ತೆಮಾಡಿ, ಅವುಗಳನ್ನೇ ಅಧಿಕೃತವಾಗಿ ಬಿಂಬಿಸುತ್ತ, ಮಿಕ್ಕ ವಿವರಗಳನ್ನು ಉಚಿತಕ್ಕೆ ತಕ್ಕಷ್ಟು ಮಾತ್ರವೇ ಜೋಡಿಸಿಕೊಟ್ಟಿದ್ದಾರೆ. ರಸಸ್ಥಾನಗಳನ್ನು ಗುರುತಿಸುವಲ್ಲಾಗಲಿ, ಮಿಕ್ಕ ವಿವರಗಳ ಅಳವಡಿಕೆಯಲ್ಲಾಗಲಿ ಕೃಷ್ಣಪ್ಪನವರ ಪ್ರತಿಭಾವಿಲಾಸವು ಕಡಿವಡೆಯದೆ ಕಾರ್ಯೋನ್ಮುಖವಾಗಿದೆ.

ಇದು ಜೈಮಿನೀಭಾರತದ ಪದ್ಯಪದ್ಯಗಳ ಭಾಷಾಂತರವಲ್ಲ, ಹಾಗೆ ಭಾಷಾಂತರಿ

ಸುವುದು ಕೂಡ ಕೃಷ್ಣಪ್ಪನವರ ಉದ್ದೇಶವಲ್ಲ. ಮೂಲಕೃತಿಯ ಕಥಾವಸ್ತುವಿನ ಶರೀರವು ಮುಕ್ಕಾಗದಂತೆ, ಸಾಮಾನ್ಯ ಓದುಗನಿಗೂ ಅದರಲ್ಲಿ ಅಭಿರುಚಿ ಹುಟ್ಟುವಂತೆ ಅದು ಮೂಡಿಬರಬೇಕು ಎಂಬ ಉನ್ನತ ಧ್ಯೇಯವನ್ನಿಟ್ಟುಕೊಂಡು ಹೊರಟ ಕೃಷ್ಣಪ್ಪನವರು ತಮ್ಮ ಕಾರ್ಯದಲ್ಲಿ ವಿಶೇಷವಾದ ಯಶಸ್ಸನ್ನೂ ಗೆಲುವನ್ನೂ ಸಾಧಿಸಿದ್ದಾರೆ ಎಂದು ಮನಃಪೂರ್ವಕವಾಗಿ ಹೇಳಬಯಸುತ್ತೇನೆ.

ಅಶ್ವಮೇಧದ ಕುದುರೆಯ ಓಟದಂತೆಯೇ ಕೃಷ್ಣಪ್ಪನವರ ನಿರೂಪಣೆಯೂ ನೆಮ್ಮದಿಯಿಂದ ಓಡುತ್ತದೆ. ಹೆಚ್ಚಿನ ವರ್ಣನೆಗಳಿಂದಲಾಗಲಿ, ಹೆಚ್ಚಿನ ವಸ್ತುವಿವರಗಳಿಂದಾಗಲಿ, ಕಥೆಯ ಓಟಕ್ಕೆ ಭಂಗಬಾರದಂತೆ ತಮ್ಮ ನಿರೂಪಣೆಯನ್ನು ಬಹಳ ಎಚ್ಚರದಿಂದ ಮುನ್ನಡೆಸಿದ್ದಾರೆ. ಅದರ ಫಲವಾಗಿ ಜೈಮಿನೀಭಾರತದ ಅಂತರಂಗದಲ್ಲಿ ಅಡಕವಾಗಿರುವ ನಾಟಕೀಯಗುಣಕ್ಕೆ ಹೆಚ್ಚಿನ ಉಜ್ವಲತೆ ಸಂದಾಯವಾಗಿದೆ. ಅಷ್ಟು ಮಾತ್ರವಲ್ಲ, ಆಧುನಿಕ ಸಾಹಿತ್ಯಪ್ರಕಾರವೆನಿಸಿದ 'ಸಣ್ಣಕತೆ'ಗಳ ಸತ್ವವೂ ಇಲ್ಲಿ ಸಮರಸವಾಗಿ ಬೆಸೆದುಕೊಳ್ಳುವಂತಾಗಿದೆ.

ಜೈಮಿನೀ ಭಾರತವು ಕನ್ನಡ ಸಾಹಿತ್ಯದ ಜನಪ್ರಿಯ ಗ್ರಂಥಗಲ್ಲೊಂದು. ವಾರ್ಧಕಷಟ್ಪದಿಯ ಆ ಕೃತಿಯನ್ನು ಗಮಕಿಗಳು ಕೂಡ ತಮ್ಮದನ್ನಾಗಿಸಿಕೊಳ್ಳುತ್ತ ಬಂದಿದ್ದಾರೆ. ವಾಚನ ವ್ಯಾಖ್ಯಾನಗಳು ನಿರಂತರವಾಗಿ ನಡೆಯುತ್ತ ಬಂದಿವೆ. ಅದರ ರಸಗ್ರಹಣಕ್ಕೆ ಅನುಕೂಲವಾಗುವಂತೆ ಪ್ರತಿ ಪದಾರ್ಥಸಹಿತವಾದ ಕೆಲವು ತಾತ್ಪರ್ಯ ಗ್ರಂಥಗಳು ಈಗಾಗಲೇ ಪ್ರಕಟಗೊಂಡಿವೆ. ಆದರೆ ಕಥಾ ವಸ್ತುವನ್ನೇ ನೇರವಾಗಿ ಲಕ್ಷ್ಯದಲ್ಲಿಟ್ಟುಕೊಂಡು ಹೀಗೆ ಗದ್ಯಶೈಲಿಗೆ ಸಮಗ್ರವಾಗಿ ತಂದು ಕೊಟ್ಟಿರುವ ಕೀರ್ತಿ ಕೃಷ್ಣಪ್ಪನವರಿಗೆ ಸಲ್ಲುತ್ತದೆ. ನಾಟಕ, ಸಣ್ಣಕತೆ, ಕಾದಂಬರಿ ಎಂಬೀ ಮೂರೂ ಸಾಹಿತ್ಯ ಪ್ರಕಾರಗಳ ಸಲ್ಲಕ್ಷಣಗಳು ತಮ್ಮ ನಿರೂಪಣೆಯಲ್ಲಿ ಸಮರಸಗೊಳ್ಳುವಂತೆ ಮಾಡಿದ್ದಾರೆ ಕೃಷ್ಣಪ್ಪನವರು. ಇಂತಹ ಸತ್ಕೃತಿಯೊಂದನ್ನು ಕನ್ನಡಾಂಬೆಯ ಮಡಿಲಿಗಿತ್ತ ಕೃಷ್ಣಪ್ಪನವರನ್ನು ನಾನು ಈ ಮೂಲಕ ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಈ ಕೃತಿಯ ಮೂಲಕ ಕನ್ನಡಿಗರು ಲಕ್ಷ್ಮೀಶನ ಜೈಮಿನೀ ಭಾರತವನ್ನು ಮತ್ತಷ್ಟು ಆತ್ಮೀಯತೆಯಿಂದ ಕಾಣುವಂತಾಗುತ್ತದೆಯೆಂಬುದರಲ್ಲಿ ಸಂಶಯವಿಲ್ಲ. ಏಕೆಂದರೆ ಈಗಾಗಲೇ ಲಕ್ಷಲಕ್ಷ ಓದುಗರು ಸುಧಾಪತ್ರಿಕೆಯ ಮೂಲಕ ಅದರ ಸೊಬಗನ್ನು ಸವಿದಿದ್ದಾರೆ. ಇನ್ನೂ ಅದರ ಸವಿಯನ್ನು ಕಾಣದವರಿಗೆ ಹಾಗೂ ಮೇಲಿಂದಮೇಲೆ ಆ ಸೊಗಸನ್ನು ಅನುಭವಿಸಬೇಕೆಂದು ಇಷ್ಟ ಪಡುವವರಿಗೆ ಕೃಷ್ಣಪ್ಪನವರು ಅದೇ ವಸ್ತುವನ್ನು ಪ್ರಸ್ತುತ ಗ್ರಂಥದ ಮೂಲಕ ಶಾಶ್ವತಗೊಳಿಸಿ ಸಮರ್ಪಿಸಿಬಿಟ್ಟಿದ್ದಾರೆ. ಈ ಕೃತಿಯು ಸರ್ವಜನಾದರಣೀಯವಾಗಿ ಬಹುಕಾಲ ನಿಲ್ಲುವುದರಲ್ಲಿ ಸಂಶಯವಿಲ್ಲ.

ಪೌರಾಣಿಕ ಕಥಾನಕಗಳಿಗೆ ಚಿತ್ರಗಳಿದ್ದರೆ ಅವು ಹೆಚ್ಚು ಪರಿಣಾಮವನ್ನು ಬೀರುತ್ತವೆ. ಅಂತೆಯೇ ಈ ಕೃತಿಯಲ್ಲಿಯೂ ಮನಮೋಹಕವಾದ ಹತ್ತಾರು ಚಿತ್ರಗಳಿವೆ. ಹಿರಿಯರನ್ನೂ ಕಿರಿಯರನ್ನು ಆ ಚಿತ್ರಗಳು ಸಮಾನವಾಗಿ ರಂಜಿಸುತ್ತವೆ.

ಮೂಲ ಕಾವ್ಯದ ಸ್ವಾರಸ್ಯವನ್ನು ಕೃಷ್ಣಪ್ಪನವರು ಹೇಗೆ ಭಟ್ಟಿಯಿಳಿಸುತ್ತಾರೆ. ಹೇಗೆ ಸಂಗ್ರಹಿಸುತ್ತಾರೆ. ಹೇಗೆ ನಾಟಕೀಯವಾಗುವಂತೆ ಸಂಯೋಜಿಸುತ್ತಾರೆ ಎನ್ನುವುದಕ್ಕೆ ಒಂದು ಉದಾಹರಣೆ ಕೊಡಲೇಬೇಕು. ಶ್ರೀರಾಮನ ಅಶ್ವಮೇಧದ ಕುದುರೆಯನ್ನು

ಲವಕುಮಾರನು ಕಟ್ಟಿಹಾಕಿದ ಪ್ರಸಂಗ, ಅದು ಮೂಲ ಕಾವ್ಯದಲ್ಲಿ ಇಪ್ಪತ್ತನೆಯ ಸಂಧಿ. ಅಲ್ಲಿಂದ ಮೂರು ಪದ್ಯಗಳನ್ನು ಎತ್ತಿಬರೆದು ತರುವಾಯ ಕೃಷ್ಣಪ್ಪನವರ ಸಾರಗ್ರಾಹಿಯಾದ ಗದ್ಯದ ವಾಕ್ಯಗಳನ್ನು ಬರೆಯುತ್ತೇನೆ:

ತೆಗೆದುತ್ತರೀಯಮಂ ಮುರಿದು ಕುದುರೆಯ ಗಳಕೆ
ಬಿಗಿದು ಕದಳೀದ್ರುಮಕೆ ಕಟ್ಟಲ್ಕೆ ಮುನಿಸುತರ್
ಮಿಗೆ ನಡುಗಿ ಬೇಡಬೇಡರಸುಗಳ ವಾಜಿಯಂ ಬಿಡು ಬಡಿವರೆಮ್ಮನೆನಲು ।
ನಗುತೆ ಪಾರ್ವರ ಮಕ್ಕಳಂಜಿದೊಡೆ ಜಾನಕಿಯ
ಮಗನಿದಕೆ ಬೆದರುವನೆ ಪೋಗಿ ನೀವೆಂದು ಲವ
ನಗಡುತನದಿಂದೆ ಬಲ್ದಿರುವನೇರಿಸಿ ತೀಡಿ ಜೇಗೈದು ನಿಂದಿರ್ದನು ॥

ಕುದುರೆಗಾವಲ ಸುಭಟರನಿತರೊಳೊದಗಿ ಬಂದು
ಕದಳೀದ್ರುಮಕೆ ಕಟ್ಟಿದ ತುರಂಗಮಂ ಕಂಡು
ಸದಮಲ ಬ್ರಹ್ಮಚಾರಿಗಳನಾರ್ಭಟಿಸಿ ವಾಜಿಯನೇಕೆ ಬಿಗಿದಿರೆನಲು ।
ಬೆದರಿ ನಾವಲ್ಲಿವಂ ಬೇಡಬೇಡೆನೆ ಬಂಧಿ
ಸಿದನೆಂದು ಲವನಂ ಕರಾಗ್ರದಿಂ ತೋರಿಸಿದ
ರದಟರೀತಂ ತರಳನರಿಯದೆಸಗಿದನೆಂದು ಬಿಡಹೇಳಿ ಗರ್ಜಿಸಿದರು ॥

ವಿಕ್ರಮವಿದೇಕೆ ಬಿಡೆನಶ್ವವಂ ಮೇಣ್ಬಿಡಲು
ಪಕ್ರಮಿಸಿದವರ್ಗಳ ಕರಮನರಿವೆನಲವರ
ತಿಕ್ರಮಿಸಿ ವಾಜಿಯಂ ಬಿಡುವೊಡ್ಡೈತರಲವರ ಕೈಗಳಂ ಕೋಪದಿಂ ।
ವಕ್ರಮಿಲ್ಲದೆ ಕೋಲ್ಗಳಿಂದೆಚ್ಚು ಕಡಿದೊಡನೆ
ಶಕ್ರನದ್ರಿಯ ಮೇಲೆ ಮಳೆಗರೆವೊಲಾ ಸೈನ್ಯ
ಚಕ್ರಮಂ ಮುಸುಕಿದಂ ವೀರ ಲವನಾಕ್ಷಣದೊಳೇನೆಂಬೆನದ್ಭುತವನು ॥

ಕೃಷ್ಣಪ್ಪನವರ ಗದ್ಯಚಂದ್ರಿಕೆ:

ಮೇಲು ವಸ್ತ್ರವನ್ನು ತೆಗೆದು ಹುರಿಯಾಗಿ ಹೊಸೆದನು. ಕುದುರೆಯ ಕತ್ತಿಗೆ ಕಟ್ಟಿ ಬಾಳೆಯಗಿಡಕ್ಕೆ ಕಟ್ಟಿಹಾಕಿದನು. ಅದನ್ನು ಕಂಡ ಋಷಿಕುಮಾರರು ನಡುಗಿ,

'ಎಲೈ ಲವನೇ, ಕುದುರೆಯನ್ನು ಕಟ್ಟಬೇಡ. ಅದು ರಾಜರದು. ಬಿಟ್ಟುಬಿಡು. ರಾಜಭಟರು ಬಂದು ನಮ್ಮನ್ನು ಹೊಡೆಯುವರು'.

'ಪಾರ್ವರಮಕ್ಕಳಾದ ನೀವು ಹೆದರಿಕೊಂಡರೆ, ಜಾನಕಿಯ ಮಗನಾದ ನಾನು ಇದಕ್ಕೆ ಹೆದರುವೆನೆ? ನೀವು ಹೋಗಿ' ಎಂದು ಧೈರ್ಯದಿಂದ ಬಿಲ್ಲಿಗೆ ಹೆದೆ ಏರಿಸಿ, ತೀಡಿ, ಜೇಗೈದು ನಿಂತುಕೊಂಡನು. ಕುದುರೆಗಾವಲಿಗಾಗಿ ಬಂದಿದ್ದ ಸುಭಟರು ಓಡಿ ಬಂದರು. ಬಾಳೆಯಗಿಡಕ್ಕೆ ಕಟ್ಟಿದ್ದ ಕುದುರೆಯನ್ನು ಕಂಡರು. ಮುನಿವಟುಗಳನ್ನು ಗದರಿಸಿ ಕೇಳಿದರು : 'ಕುದುರೆಯನ್ನು ಏತಕ್ಕೆ ಕಟ್ಟಿಹಾಕಿದಿರಿ?'

'ನಾವಲ್ಲ, ಬೇಡಬೇಡವೆಂದರೂ ಲವ ಕಟ್ಟಿಹಾಕಿದ'.

ತಿಳಿಯದೆ ಅವನು ಕಟ್ಟಿಹಾಕಿರಬೇಕೆಂದು ಆಲೋಚಿಸಿದ ಆ ವೀರರು ಲವನನ್ನು ಗದರಿಸಿದರು. ಆಗ ಲವನು ಧೈರ್ಯದಿಂದ ನುಡಿದನು.

'ಓಹ್ ! ಜೋರುಮಾಡುವಿರೇಕೆ? ಈ ಕುದುರೆಯನ್ನು ನಾನು ಬಿಡುವುದಿಲ್ಲ. ಯಾರಾದರೂ ಬಿಡಿಸಲು ಪ್ರಯತ್ನಿಸಿದರೆ, ಅವರ ಕೈಗಳನ್ನು ಕಡಿದುಹಾಕುತ್ತೇನೆ'.

ಭಟರು ಬಲಾತ್ಕಾರದಿಂದ ಕುದುರೆಯನ್ನು ಬಿಡಿಸುವುದಕ್ಕೆ ಬಂದರು. ಆಗ ಲವನು ಗುರಿತಪ್ಪದ ಬಾಣಗಳಿಂದ ಅವರ ಕೈಗಳನ್ನು ತುಂಡು ಮಾಡಿದನು. ಜನಮೇಜಯರಾಯನೇ, ದೇವೇಂದ್ರನು ಬೆಟ್ಟಗಳ ಮೇಲೆ ಮಳೆಗರೆದಂತೆ, ಆ ಸೈನ್ಯವನ್ನು ಲವನು ತನ್ನ ಬಾಣಗಳಿಂದ ಮುಸುಕಿದನು.

ಲಕ್ಷ್ಮೀಶ ಕವಿಯ ಆ ಮೂರು ಪದ್ಯಗಳನ್ನು ಸಾವಧಾನವಾಗಿ ಓದಿದ ಬಳಿಕ, ಕೃಷ್ಣಪ್ಪನವರ ಗದ್ಯವನ್ನು ಪರಿಶೀಲಿಸಿದರೆ, ಅವರು ತಮ್ಮ ಕಥನಕೌಶಲದಲ್ಲಿ ಯಶಸ್ಸು ಗಳಿಸಿರುವ ಪರಿ ಮನವರಿಕೆಯಾಗುತ್ತದೆ.

ತಮ್ಮ ತಂದೆ ಗಂಗಯ್ಯನವರು ಪ್ರೀತಿಸುತ್ತಿದ್ದ ಸತ್ಕೃತಿಯೊಂದು ಲೋಕಪ್ರಿಯವಾಗುವಂತೆ ಮಾಡುವುದರ ಮೂಲಕ ಕೃಷ್ಣಪ್ಪನವರು ತಮ್ಮ ಪಿತೃಋಣವನ್ನು ಸಾರ್ಥಕವಾಗಿ ತೀರಿಸಿದ್ದಾರೆ ಎನ್ನಬಹುದು. ಅಷ್ಟು ಮಾತ್ರವಲ್ಲ, 'ರಸ್ತೆ ನಿಯಮಗಳು' ಎಂಬೊಂದು ಕೃತಿಯನ್ನು ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಮೂಲಕ ಪ್ರಕಟಿಸಿ ತಮ್ಮ ವೃತ್ತಿಋಣವನ್ನೂ ಸಮರ್ಪಕವಾಗಿ ತೀರಿಸಿದ್ದಾರೆ ಎಂದು ಹೆಮ್ಮೆ ಪಡಬಹುದು.

ಲಕ್ಷ್ಮೀಶ ಕವಿಯ ಜೈಮಿನಿ ಭಾರತದ ಹೆಚ್ಚಿನ ಅಧ್ಯಯನಕ್ಕೆ, ವಿಮರ್ಶೆಗೆ ಮತ್ತು ಸಂಸ್ಕೃತದಲ್ಲಿರುವ ಜೈಮಿನಿ ಭಾರತ ಮತ್ತು ಮಹಾಭಾರತದ ಅಶ್ವಮೇಧಪರ್ವ – ಈ ಮುಂತಾದುವುಗಳೊಡನೆ ತೌಲನಿಕ ಅಧ್ಯಯನಕ್ಕೆ ಕೃಷ್ಣಪ್ಪನವರ ಈ ವಚನ ಜೈಮಿನಿ ಭಾರತವು ಪ್ರೇರಣೆ ನೀಡುತ್ತದೆಯೆಂದು ನಾನು ಆಸೆಯಿಟ್ಟುಕೊಂಡಿದ್ದೇನೆ. ಕೃಷ್ಣಪ್ಪನವರಿಂದ ಬಹುಪರಿಯ ಸತ್ಕೃತಿಗಳನ್ನು ಕನ್ನಡಿಗರು ನಿರೀಕ್ಷಿಸುತ್ತಲೇ ಇರುತ್ತಾರೆ ಎಂದು ಹೇಳುತ್ತ, ಅವರಿಗೆ ಶುಭವನ್ನು ಹಾರೈಸುತ್ತ ವಿರಮಿಸುತ್ತೇನೆ.

**ಮೈಸೂರು**
10–10–2012

**ಡಾ॥ ಕೆ. ಅನಂತರಾಮು**
ನಿವೃತ್ತ ಕನ್ನಡಪ್ರಾಧ್ಯಾಪಕ

# ಅರಿಕೆ

'ಜೈಮಿನಿ ಭಾರತದಲ್ಲಿ ಕ್ಷಾತ್ರ ಮತ್ತು ಭಕ್ತಿ ಇವುಗಳ ಸಮನ್ವಯವಾಗಿದೆ. ಶ್ರೀಕೃಷ್ಣನಿಗೆ ಎದುರಾಗುವ ಎಲ್ಲ ರಾಜರು ಕ್ಷತ್ರಿಯರಾಗಿದ್ದು ಅವರು ಶ್ರೀಕೃಷ್ಣನ ಶ್ರೇಷ್ಠ ಭಕ್ತರಾಗಿದ್ದಾರೆ. ಇದು ಈ ಕಾವ್ಯದ ಹಿರಿಮೆ'. ಎಂದು ವರಕವಿ ದ.ರಾ. ಬೇಂದ್ರೆಯವರು ಈ ಕಾವ್ಯ ಕುರಿತು ಹೇಳಿದ್ದಾರೆ.

ಭಾಗವತ ಪರಂಪರೆಯ ಮಹಾಕವಿ ಲಕ್ಷ್ಮೀಶನು ತನ್ನ 'ಕೃತಿಗೆ ನಾಯಕನಾದ ನಮರಪುರದೊಡೆಯ ಲಕ್ಷ್ಮೀಕಾಂತನು' ಎಂದು ತಿಳಿಸಿದ್ದಾನೆ. 'ಲಕ್ಷ್ಮೀಪತಿಯ ಮುಖದಿಂದ ರಚಿಸಿದಂ ಕೃತಿಯಾಗಿ ಸುರಪುರದ ಲಕ್ಷ್ಮೀಕಾಂತನು' ಎಂದು ಕವಿಯು ತಾನು ನೆಪ ಮಾತ್ರವಾಗಿದ್ದು ಈ ಕೃತಿಯನ್ನು ರಚಿಸಿದವನು ಲಕ್ಷ್ಮೀಕಾಂತನೇ ಎಂದು ವಿನಮ್ರವಾಗಿ ನುಡಿದಿದ್ದಾನೆ. ಭಾಗವತ ಶಿರೋಮಣಿ ಲಕ್ಷ್ಮೀಶನು 'ವೀಣೆಯಿಂ ಗಾನಮಂ ನುಡಿಸುವಂದದೊಳೆನ್ನ ವಾಣಿಯಿಂ ಕವಿತೆಯಂ ಪೇಳಿಸಿದ' ಎಂದು ಹೇಳಿ ರಚಿಸಿರುವ ವಾರ್ಧಕಷಟ್ಪದಿಯಲ್ಲಿರುವ ಈ ಕಾವ್ಯವು ವೀಣೆಯ ಗಾನದಂತೆ ಮಧುರವಾಗಿದೆ. 'ಲಕ್ಷ್ಮೀಶನು ನಾದಧ್ವನಿ ಮಾರ್ಗದವನು. ಅವನ ಪ್ರಾಸಾನುಪ್ರಾಸಗಳು ಅವನ ಭಾವಾರ್ಥದ ಭಂಡಾರವನ್ನು ತೆಗೆಯುವ ಬೀಗದ ಕೈಗಳು. ಅವನ ಯಮಕಗಳು ಕವಿ ಹೃದಯದ ಗಮಕಗಳು' ಎಂದು ಈ ಕಾವ್ಯವನ್ನು ವಿಮರ್ಶಿಸಿರುವ ದ.ರಾ. ಬೇಂದ್ರೆಯವರು ಲಕ್ಷ್ಮೀಶನನ್ನು 'ನಾದಲೋಲ' ಎಂದು ಕರೆದಿದ್ದಾರೆ.

ಲಕ್ಷ್ಮೀಶನಿಗೆ 'ಕರ್ಣಾಟಕ ವಿಚೈತ್ರವನಚೂತ' ಹಾಗೂ 'ಕವಿಚೂತವನಚೈತ್ರ' ಎಂಬ ಬಿರುದಿತ್ತು. ಅವನು 'ದೇವಪುರ ಲಕ್ಷ್ಮೀರಮಣನಾಸ್ಯ ಚಂದ್ರಾನಂದ ನೆಮಗೀಯಲಿ' ಎಂದು ಪ್ರಾರ್ಥಿಸಿದ್ದು, ಅವನ ಸ್ಥಳ ಚಿಕ್ಕಮಗಳೂರು ಜಿಲ್ಲೆಯ ದೇವನೂರು ಎಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಅವನ ತಂದೆ ಅಣ್ಣಮಾಂಕ. ನಾನು ನನ್ನ ಮಗ ಶ್ರೀಗಂಗನೊಂದಿಗೆ ದೇವನೂರಿಗೆ ಹೋಗಿ ಶ್ರೀಲಕ್ಷ್ಮೀಕಾಂತ ಸ್ವಾಮಿಯ ದರ್ಶನ ಪಡೆದು ಬಂದೆನು. ಅದೇ ಆತನ ಸ್ಥಳ ಎಂಬುದು ನನ್ನ ಅಭಿಪ್ರಾಯ. ಆತನ ಕಾಲ ಕ್ರಿ.ಶ. 1550 ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.

ಪಂಪನ 'ವಿಕ್ರಮಾರ್ಜುನ ವಿಜಯ' ಮತ್ತು ಗದುಗಿನ ನಾರಣಪ್ಪನ 'ಕುಮಾರವ್ಯಾಸ ಭಾರತ'ಗಳಲ್ಲಿ ಒಮ್ಮುಖವಾದ ಕಥೆ ಇದೆ. ಆದರೆ ಲಕ್ಷ್ಮೀಶನ ಜೈಮನಿ ಭಾರತವು ಹಲವು ಕಥೆಗಳ ಗುಚ್ಛವಾಗಿದೆ. ಅಶ್ವಮೇಧದ ಕುದುರೆಯಂತೆ ಅದು ಮನಬಂದಂತೆ ಓಡಿದೆ. ಆ ಓಟದಲ್ಲಿ ಕುದುರೆಯ ಶಕ್ತಿ, ವೇಗ, ಸೌಂದರ್ಯ, ಸಾಹಸ ಮೇಳೈಸುವಂತೆ ಅನೇಕ ವೀರರ ಕಥೆಗಳನ್ನು ಹೆಣೆದಿರುವ ಲಕ್ಷ್ಮೀಶನ ಕಥಾನಿರೂಪಣಾತಂತ್ರ ವಿಶಿಷ್ಟವಾಗಿದೆ.

ಲಕ್ಷ್ಮೀಶಕವಿಯ ಜೈಮನಿ ಭಾರತವು ಸಂಸ್ಕೃತ ಜೈಮಿನಿ ಭಾರತದ ಕನ್ನಡ ಅವತರಣಿಕೆಯಾಗಿದೆ. ಸಂಸ್ಕೃತದಲ್ಲಿ ಅರವತ್ತೆಂಟು ಅಧ್ಯಾಯಗಳಲ್ಲಿ ವರ್ಣಿತವಾದ ಕಥೆಯನ್ನು ಲಕ್ಷ್ಮೀಶನು ಮೂವತ್ತನಾಲ್ಕು ಅಧ್ಯಾಯಗಳಲ್ಲಿ ಸಂಗ್ರಹಿಸಿ ಹೇಳಿದ್ದಾನೆ. ಜೈಮನಿ ಭಾರತವನ್ನು ಮೊತ್ತ ಮೊದಲು ಸಂಪಾದಿಸಿ ಕಲ್ಲಚ್ಚಿನಲ್ಲಿ 1848ರಲ್ಲಿ ಮುದ್ರಿಸಿದ ಕೀರ್ತಿಯು ಹರ್ಮನ್ ಮ್ಯೋಗ್ಲಿಂಗ್ (1811–1881) ಅವರಿಗೆ ಸಲ್ಲುತ್ತದೆ. ಅವರು

ಜರ್ಮನ್ ಭಾಷೆಗೂ ಇದನ್ನು ಅನುವಾದಿಸಿರುವುದು ಕನ್ನಡ ಕಾವ್ಯಕ್ಕೆ ವಿಶ್ವದ ನೆಲೆಯಲ್ಲಿ ಸಂದಗೌರವವಾಗಿದೆ.

ಅಶ್ವಮೇಧಯಾಗ ಕಥೆಯು ಸಾಹಸಕ್ಕೆ ಸಂಕೇತವಾಗಿ ಯುದ್ಧದಿಂದ ರಾಜ್ಯಗಳನ್ನು ಗೆದ್ದು ಮುಂದೆ ಸಾಗುತ್ತಿದ್ದರೂ ತನ್ನ ಆಂತರ್ಯದಲ್ಲಿ ಶಾಂತಿಯನ್ನು ಆಶಿಸಿ, ಸೋತವರನ್ನು ಪ್ರೀತಿಯಿಂದ ಆಲಂಗಿಸಿಕೊಳ್ಳುತ್ತದೆ. ಅದು ಈ ಕಾವ್ಯ ಒಳಗೊಂಡ ಶಾಂತಿ, ಪ್ರೀತಿ, ಕರುಣೆ. ಈ ಕಾವ್ಯದ ಪ್ರತಿಯುದ್ಧವೂ, ಸಾಹಸಿಗಳಾದ ವೀರ, ಭಕ್ತ, ಛಲಗಾರರಾಜರ ಮತ್ತು ರಾಜಕುಮಾರರ ಪರಿಚಯ ಮಾಡಿಕೊಡುತ್ತ ಈ ಪೃಥ್ವಿ ಸಾಹಸಿಗಳ ಅಕ್ಷಯಗಣಿ ಎಂಬುದನ್ನು ಓದುಗರಿಗೆ ಮನನ ಮಾಡುತ್ತದೆ.

ಇದು 16ನೇಯ ಶತಮಾನದ ಕಾವ್ಯವಾಗಿದ್ದರೂ ಸರ್ವಕಾಲೀನ ಪ್ರಜ್ಞೆಯನ್ನು ಒಳಗೊಂಡ ವಿಶಿಷ್ಟ ಕೃತಿಯಾಗಿದೆ. ಇಂದಿನ ಜಾಗತಿಕ ಸ್ಪರ್ಧಾಯುಗದಲ್ಲಿ ಈ ಕಾವ್ಯವು ತುಂಬಾ ಪ್ರಸ್ತುತವಾಗಿದೆ. ಈ ಜಗತ್ತಿನಲ್ಲಿ ವಿದ್ಯಾವಂತರಿಗೆ, ಪ್ರತಿಭಾಶಾಲಿ ಸಾಹಸಿ ಯುವಕರಿಗೆ ಕೊರತೆಯಿಲ್ಲ. ಇಲ್ಲಿ ಯಾರೂ ನಾನೇ ಪರಿಣತ, ಶ್ರೇಷ್ಠ ಎಂಬ ಅಹಮಿಕೆಗೆ ಒಳಗಾಗುವುದು ಅರ್ಥಹೀನ. ಅಶ್ವಮೇಧದ ಕುದುರೆಯ ಕಾವಲಿನ ಮುಖ್ಯಸ್ಥನಾಗಿ ಹೊರಟ ಅರ್ಜುನನು ತಾನು ಪರಮವೀರ ಎಂದುಕೊಂಡಿದ್ದು ಅವನ ತಪ್ಪು ಎಂಬುದನ್ನು ಸುಧನ್ವ, ಬಭ್ರುವಾಹನ, ವೀರವರ್ಮ, ಚಂದ್ರಹಾಸ ಮುಂತಾದವರ ಸಾಹಸ ಕಥೆಗಳು ಸಾರಿ ಹೇಳುತ್ತಿವೆ. ಶುದ್ಧ ಚಾರಿತ್ರ್ಯದ, ಯುದ್ಧ ಪರಿಣತಿಯ ವೀರ ಸಾಹಸಿ ಭಕ್ತರ ಮುಂದೆ ಭಗವಂತ ಶ್ರೀಕೃಷ್ಣನೂ ನಿಸ್ಸಹಾಯಕನಾಗುತ್ತಾನೆ ಎಂಬ ಸತ್ಯವನ್ನು ತಾಮ್ರಧ್ವಜ, ವೀರವರ್ಮನ ಕಥೆಗಳು ತಿಳಿಸಿವೆ. ಈ ಇಳೆಯಲ್ಲಿ ಜನಿಸಿದ ಮೇಲೆ ಪ್ರತಿಯೊಬ್ಬ ವ್ಯಕ್ತಿಯು ಉತ್ತಮ ವಿದ್ಯಾಭ್ಯಾಸ ಪಡೆದು ಉತ್ತಮ ಚಾರಿತ್ರವನ್ನು ರೂಢಿಸಿಕೊಂಡು, ತಂದೆತಾಯಿ ಗುರು ಹಿರಿಯರನ್ನು ಗೌರವಿಸಬೇಕು. ಏಕಪತಿ ವ್ರತರಾಗಿರಬೇಕು. ಉದಾರವೂ ಉಜ್ವಲವೂ ಆದ ಮಾನವೀಯ ಮೌಲ್ಯಗಳನ್ನು ಜೀವನ ತತ್ವವಾಗಿಸಿಕೊಳ್ಳಬೇಕು. ಗಂಭೀರ ಅಧ್ಯಯನ ಶೀಲರಾಗಿ ವಿದ್ಯೆ, ವಿನಯ, ಶೌರ್ಯಸಾಹಸಗಳನ್ನು ಕೈವಶಮಾಡಿಕೊಂಡು, ಯಾರನ್ನಾದರೂ ಆಗಲಿ ನ್ಯಾಯಮಾರ್ಗದಲ್ಲಿ ಸತ್ಯದನಡೆಯಿಂದ ಜಯಿಸೇ ಜಯಿಸುವೆವು ಎಂಬ ಆತ್ಮವಿಶ್ವಾಸದೊಡನೆ ಬದುಕಬೇಕು ಎಂಬುದನ್ನು ಈ ಜೈಮಿನಿ ಭಾರತವು ಮನನ ಮಾಡುತ್ತಿದೆ. ಕವಿಯೇ ಹೇಳಿರುವಂತೆ ಇದು 'ಸುಮಾರ್ಗದೊಳ್ ನಡೆವ ಸತ್ಪುರುಷನ ಗಂಭೀರದೆಸಕವ ಪೋಲ್ವ ಕಾವ್ಯಪ್ರಬಂಧ'ವಾಗಿದೆ. ಇದು ಸತ್ಪುರುಷರನ್ನು ರೂಪಿಸುವ ಕಾವ್ಯ.

ಈ ಜೈಮಿನಿ ಭಾರತವು ಈಗಿನ ಜಾಗತಿಕರಣದ ಸಂದರ್ಭದಲ್ಲಿ ಕನ್ನಡದ ಹಾಗೂ ಭಾರತೀಯ ಯುವಕರನ್ನು ಸಜ್ಜುಗೊಳಿಸಿ ವಿಶ್ವ ಸ್ಪರ್ಧೆಯಲ್ಲಿ – ಅಶ್ವಮೇಧದ ಕುದುರೆಯನ್ನು ಕಟ್ಟಿಹಾಕಿ ಸಾಹಸ ಮೆರೆದ ವೀರರರಂತೆ–ಜಯಶೀಲರನ್ನಾಗಿಸುವ ಆಂತರಿಕ ಚೈತನ್ಯವನ್ನು ಹೊಂದಿದೆ ಎನಿಸುತ್ತದೆ. ಒಂದು ಪೌರಣಿಕ ಕಥೆ ಮಾಡಬಹುದಾದ ಯುವಶಕ್ತಿಯ ಜಾಗೃತ ಕೆಲಸವನ್ನು ಈ ಕಾವ್ಯ ಮಾಡುತ್ತಿದೆ ಎಂಬ ಭಾವ ಉಂಟಾಗುತ್ತದೆ. ಅದು ಸಾಧಿತವಾದ ರೀತಿ ದೈವಿಕ ಭಾವದ ಕೃಷ್ಣಭಕ್ತಿಯ ಹಿನ್ನೆಲೆ ಎಂಬುದು – ಇಂದಿನ ಆಲೋಚನಾ ದೃಷ್ಟಿಯ ವಿಶ್ಲೇಷಣೆಯಲ್ಲಿ ಚರ್ಚೆಗೆ ಅವಕಾಶವನ್ನೀಯುತ್ತದೆ.

ನನ್ನ ಪೂಜ್ಯ ತಂದೆ ಶ್ರೀಮಾನ್ ಎಚ್. ಗಂಗಯ್ಯ ಅವರು ಅಧ್ಯಾತ್ಮಿಕ ಜೀವಿ. ಅವರು ಪ್ರತಿದಿನ ಸಂಜೆ ಲಕ್ಷ್ಮೀಶನ ಜೈಮಿನಿ ಭಾರತ, ಕನಕದಾಸರ ನಳಚರಿತ್ರೆ, ಮಹಾಭಕ್ತಿ ವಿಜಯಗಳನ್ನು ಓದುತ್ತಿದ್ದರು. ಅಕ್ಕಪಕ್ಕದ ಮನೆಯವರು ಬಂದು ಕುಳಿತು ಕೇಳುತ್ತಿದ್ದರು. ಅದನ್ನು ಆಲಿಸುತ್ತಿದ್ದ ನನಗೆ ಚಂಡಿಯ ಕಥೆ ಕೇಳುವಾಗ ನಗೆ ಹೊಮ್ಮುತ್ತಿತ್ತು. ಚಂದ್ರಹಾಸನ ಕಥೆ ಕೇಳುವಾಗ ಅಳುಬರುತ್ತಿತ್ತು. 'ಕರುಬರಿದ್ದೂರಿಗಿಂತ ಕಾಡೊಳಿತು' ಎಂದು ಬಾಲ್ಯದಲ್ಲಿ ಕೇಳಿದ ನುಡಿ ಇಂದೂ ನನ್ನಲ್ಲಿ ಅನುರಣಿತವಾಗುತ್ತಿದೆ. ಲಕ್ಷ್ಮೀಶ ಕವಿ ಸತ್ಯವನ್ನು ಎಷ್ಟು ಸರಳವಾಗಿ ಈ ಕಾವ್ಯದಲ್ಲಿ ಹೇಳಿದ್ದಾನೆ ಎಂದು ಅದರತ್ತ ನನ್ನ ಮನಸ್ಸು ಹೊರಳಿತು. ಆಗಾಗ್ಗೆ ನಾನು ಓದುತ್ತಿದ್ದೆ. ಈ ಕಾವ್ಯವನ್ನು ಸರಳಗನ್ನಡದಲ್ಲಿ ಬರೆದು ಜನಗಳಿಗೆ ತಿಳಿಸಬೇಕು ಎಂದು ಆಸೆಯಾಯಿತು. ಬರೆದು ಆಗಾಗ್ಗೆ ಗೆಳೆಯರಾದ ಪ್ರೊ॥ ಡಿ.ಕೆ. ಶ್ಯಾಮಸುಂದರ ರಾವ್ ಮತ್ತು ಡಾ॥ ಬಿ.ಎಸ್. ರಾಮಪ್ರಸಾದ್ ಅವರೊಡನೆ ಚರ್ಚಿಸಿದೆ. ಅದು ಕಥೆಯನ್ನು ಸಂಗ್ರಹವಾಗಿ ಹೇಳಲು ತುಂಬಾ ಸಹಾಯವಾಯಿತು.

ಈ 'ವಚನ ಜೈಮಿನಿ ಭಾರತ'ವನ್ನು 'ಸುಧಾ' ವಾರ ಪತ್ರಿಕೆಯಲ್ಲಿ 'ಮತ್ತೆ ಮಹಾಭಾರತ' ಎಂಬ ಶೀರ್ಷಿಕೆಯಾಗಿ (22-9-11 ರಿಂದ 15-12-11ರವರೆಗೆ 13 ವಾರಗಳು) ಪ್ರಕಟಿಸಿದ ಸಂಪಾದಕರಾದ ಶ್ರೀ ಕೆ.ಎನ್. ತಿಲಕ್ ಕುಮಾರ್ ಅವರಿಗೆ ನನ್ನ ವಂದನೆಗಳು. ಶ್ರೀ ಬಿ.ಎಂ. ಹನೀಫ್, ಶ್ರೀ ಗುಡಿಹಳ್ಳಿ ನಾಗರಾಜ, ಖ್ಯಾತ ಕಲಾವಿದ ಶ್ರೀ ಮನೋಹರ ಆಚಾರ್ಯ ಮತ್ತು 'ಸುಧಾ' ಸಂಪಾದಕ ಮಂಡಲಿಗೆ ನನ್ನ ನಮನಗಳು. 'ಪ್ರಜಾವಾಣಿ' ಸಂಪಾದಕರಾದ ಶ್ರೀ ಕೆ.ಎನ್. ಶಾಂತಕುಮಾರ್ ಮತ್ತು ಕಾರ್ಯನಿರ್ವಾಹಕ ಸಂಪಾದಕರಾದ ಶ್ರೀ ಪದ್ಮರಾಜ ದಂಡಾವತಿ ಅವರಿಗೆ ನನ್ನ ಕೃತಜ್ಞತೆಗಳು.

ನನ್ನ ಪೂಜ್ಯಗುರುಗಳಾದ ಡಾ॥ ಕೆ. ಅನಂತರಾಮು ಅವರು ನನ್ನ ಕೃತಿಗಳನ್ನು ಓದಿ, ಕೇಳಿ ಮಾರ್ಗದರ್ಶನ ನೀಡುತ್ತ ನನ್ನ ಬರವಣಿಗೆ ಉತ್ತಮವಾಗಲು ಕಾರಣರಾಗಿದ್ದಾರೆ. ಅವರು ಈ ಕೃತಿಗೆ ಅಮೂಲ್ಯವಾದ ಮುನ್ನುಡಿಯನ್ನು ಬರೆದುಕೊಟ್ಟು ಆಶೀರ್ವದಿಸಿದ್ದಾರೆ. ಅವರಿಗೆ ನಾನು ಕೃತಜ್ಞನಾಗಿದ್ದೇನೆ.

ಜೈಮನಿ ಭಾರತವನ್ನು ವಾಚನ ಮಾಡುವಾಗ ಆಸಕ್ತಿಯಿಂದ ಕೇಳಿ, ಗದ್ಯರೂಪದಲ್ಲಿ ಬರೆಯುವಾಗ ತುಂಬು ಪ್ರೋತ್ಸಾಹ ನೀಡಿದ ನನ್ನ ಪತ್ನಿ, ಮಕ್ಕಳು, ಅಳಿಯಂದಿರನ್ನು ನೆನೆಯುವುದು ನನಗೊಂದು ಹರ್ಷ.

ಈ ಕೃತಿಯನ್ನು ಪ್ರಕಟಿಸಿರುವ ಹಳಗನ್ನಡ ಕಾವ್ಯಪ್ರೇಮಿ ಪ್ರೊ॥ ಡಿ.ಕೆ. ಶ್ಯಾಮಸುಂದರ ರಾವ್ ಅವರಿಗೆ ಮತ್ತು ಅಂದವಾಗಿ ಮುದ್ರಿಸಿದ ಪರಿಶ್ರೀ ಪ್ರಿಂಟರ್ಸ್‌ನ ಮಾಲೀಕರಾದ ಶ್ರೀ ಆರ್. ಶ್ರೀನಾಥ್ ಮತ್ತು ಸಿಬ್ಬಂದಿಗಳಿಗೆ ನನ್ನ ನಮನಗಳು.

ನಾನು ಈ ಮೊದಲು ರಚಿಸಿರುವ ಕೃತಿಗಳನ್ನು ಓದಿಸವಿದ ಕನ್ನಡ ಕಾವ್ಯರಸಿಕರು ಮತ್ತು ವಿದ್ವನ್ಮಣಿಗಳು ವಚನ ಜೈಮಿನಿ ಭಾರತವನ್ನು ಪ್ರೀತಿಯಿಂದ ಸ್ವೀಕರಿಸಿ ಆಶೀರ್ವದಿಸಬೇಕೆಂದು ಪ್ರಾರ್ಥಿಸುತ್ತೇನೆ.

ಬೆಂಗಳೂರು
1-11-2012

**ಡಾ॥ ಜಿ. ಕೃಷ್ಣಪ್ಪ**

# ನಿವೇದನೆ

ಕನ್ನಡ ಸಾಹಿತ್ಯವು ಹಿಮಾಲಯದ ಗಂಗೆಯಂತಹ ಪವಿತ್ರಧಾರಾ ಅಮೃತನಿಧಿ.

ಕನ್ನಡದ ಪ್ರಾಚಿನ ಸಾಹಿತ್ಯಸಿರಿಯಂತೂ ಸಾಟಿಯಿಲ್ಲದ್ದು. ಕುಮಾರವ್ಯಾಸ, ಜನ್ನ, ಲಕ್ಷ್ಮೀಶ, ಪಂಪ, ರನ್ನ ಮೊದಲಾದವರ ಒಂದೊಂದು ಕೃತಿಯೂ ಅಮೂಲ್ಯ ರತ್ನಗಳು.

ಕಮಾರವ್ಯಾಸ ಹಾಗೂ ಲಕ್ಷ್ಮೀಶ ಕವಿಯ ಒಂದೊಂದು ಕಾವ್ಯವನ್ನು ಮೂಲ-ವ್ಯಾಖ್ಯಾನ-ಸಚಿತ್ರ ಪ್ರಕಟಿಸಿರುವ ಸಂತೋಷ ನಮ್ಮದು.

ಇಲ್ಲಿ ಲಕ್ಷ್ಮೀಶ ಕವಿಯ ವಚನ ಜೈಮಿನಿ ಭಾರತದ ರೋಚಕವೂ ಬೋಧಪ್ರದವೂ ಆದ ಕಥಾಗುಚ್ಛವನ್ನು ಪ್ರಕಟಿಸುತ್ತಿದ್ದೇವೆ. ಪ್ರಸಿದ್ಧ ವಿದ್ವಾಂಸರೂ ಲೇಖಕರೂ ಆದ ಡಾ॥ ಜಿ. ಕೃಷ್ಣಪ್ಪನವರು ಸುಲಲಿತ ಆಕರ್ಷಕ ಶೈಲಿಯಲ್ಲಿ ಈ ಕೃತಿಯನ್ನು ರಚಿಸಿಕೊಟ್ಟಿದ್ದಾರೆ. ಈಗಾಗಲೇ 'ಸುಧಾ' ಪತ್ರಿಕೆಯ ಮೂಲಕ ಅಪಾರ ಜನ ಮನ್ನಣೆಯನ್ನು ಗಳಿಸಿರುವ ಈ ಕೃತಿಯನ್ನು ಪ್ರಕಟಿಸಲು ಅವಕಾಶ ನೀಡಿದ ಡಾ॥ ಜಿ. ಕೃಷ್ಣಪ್ಪನವರಿಗೆ ನಮ್ಮ ಗೌರವಪೂರ್ವಕ ನಮನಗಳು.

ಪ್ರಾಚೀನ ಸಾಹಿತ್ಯದ ಕೆಲವು ಕೃತಿಗಳ ಜನಪ್ರಿಯ ಹಾಗೂ ಸುಲಭ ಬೆಲೆಯ ಆವೃತ್ತಿಗಳನ್ನು ಪ್ರಕಟಿಸುವ ಉದ್ದೇಶವಿದೆ.

ಪ್ರಕಾಶನದ ಕಾರ್ಯಯೋಜನೆಗಳಲ್ಲಿ ಸಹಕಾರ ನೀಡುತ್ತಿರುವ ಲೇಖಕ ಬಳಗಕ್ಕೆ, ಹಿತೈಷಿ ಓದುಗರಿಗೆ ಹಾಗೂ ಪರಿಶ್ರೀ ಮುದ್ರಣಾಲಯದ ಶ್ರೀನಾಥ್ ಮತ್ತು ಸಿಬ್ಬಂದಿಯವರಿಗೆ ಕೃತಜ್ಞತೆಗಳು ಸಲ್ಲುತ್ತವೆ.

ದಿನಾಂಕ : 23-11-2012 **ಡಿ.ಕೆ. ಶ್ಯಾಮಸುಂದರರಾವ್**

# ಪರಿವಿಡಿ

# ಚಿತ್ರಗಳ ಅನುಕ್ರಮಣಿಕೆ

# ವಚನ ಜೈಮಿನಿ ಭಾರತ

ಜನಮೇಜಯರಾಯನು ತನ್ನತಂದೆ ಪರೀಕ್ಷಿತ್‌ರಾಜನು ಸರ್ಪರಾಜತಕ್ಷಕನಿಂದ ಮರಣಹೊಂದಲು ಚಿಂತಾಕ್ರಾಂತನಾಗಿ ಸರ್ಪಗಳನ್ನು ನಾಶಮಾಡಲು ಸರ್ಪಯಾಗಮಾಡಿದನು. ಸರ್ಪಗಳನ್ನುಆಹ್ವಾನಿಸಿ ಋಷಿಗಳು ಹೋಮಮಾಡಿದರು. ಸರ್ಪಗಳು ಸ್ವತಃಬಂದು ಆ ಯಾಗಕ್ಕೆ ಆಹುತಿಯಾಗುತ್ತಿದ್ದವು. ಸರ್ಪರಾಜತಕ್ಷಕನು ತಾನುಉಳಿದುಕೊಳ್ಳಲು ದೇವೇಂದ್ರನ ಮೊರೆಹೊಕ್ಕನು. ತನ್ನನ್ನುಉಳಿಸು ಎಂದು ಇಂದ್ರನ ಮಂಚದಕಾಲಿಗೆ ಸುತ್ತಿಕೊಂಡನು. ಯಜ್ಞನಡೆಸುತ್ತಿದ್ದ ಋಷಿಗಳು ಕುಪಿತರಾಗಿ 'ಸಹೇಂದ್ರಾಯ ತಕ್ಷಕಾಯ' ಎಂಬಮಂತ್ರ ಉಚ್ಚರಿಸಲು, ಮಂಚಸಹಿತ ಇಂದ್ರನು ಯಜ್ಞಕುಂಡಕ್ಕೆ ಬೀಳಲು ಬರುತ್ತಿದ್ದನು. ಅದನ್ನುಕಂಡ ತ್ರಿಮೂರ್ತಿಗಳು ಲೋಕಹಿತಕ್ಕಾಗಿ ಜನಮೇಜಯನಬಳಿ ಬಂದು ಸಮಾಧಾನಪಡಿಸಿ ಸರ್ಪಯಾಗವನ್ನು ನಿಲ್ಲಿಸಿದರು. ಆಗ ಸರ್ಪವಂಶಉಳಿಯಿತು. ಇಂದ್ರನೂ ಉಳಿದುಕೊಂಡ.

ಯಜ್ಞವನ್ನು ಪೂರ್ತಿಗೊಳಿಸದ ಕಾರಣ ಜನಮೇಜಯನಮೈಗೆ ಚರ್ಮರೋಗ ಉಂಟಾಯಿತು. ಆತನು ರಾಜ್ಯಕ್ಕೆ ಅನರ್ಹನಾದ. ಪಿತೃಶೋಕದ ಜೊತೆಗೆ ತನ್ನದೇಹವೂ ವಿಕಾರಗೊಂಡುದಕ್ಕೆ ಅತಿಯಾಗಿನೊಂದು ಚಿಂತಾಕ್ರಾಂತನಾದ. ಕುಲಪಿತಾಮಹರಾದ ವೇದವ್ಯಾಸಮುನಿಯನ್ನು ಧ್ಯಾನಿಸಿದ. ಅವರುಬಂದು ಎಲ್ಲವನ್ನೂತಿಳಿದು 'ಅಯ್ಯಾ ನೀನು ಸರ್ಪಗಳನ್ನು ಕೊಂದಕಾರಣ ಈ ವ್ಯಾಧಿಗೆ ಈಡಾಗಿರುವೆ. ನಿಮ್ಮ ಪಿತಾಮಹರಾದ ಪಾಂಡವರಕಥೆಯನ್ನು ಆಮೂಲಾಗ್ರವಾಗಿ ಕೇಳು. ಈ ಚರ್ಮವ್ಯಾಧಿ ಪರಿಹಾರವಾಗುವುದು' ಎಂದು ಹೇಳಿ, ತಾವೇ ಹದಿನೆಂಟುಪರ್ವಗಳುಳ್ಳ ಮಹಾಭಾರತ ಕಥೆಯನ್ನು ರಚಿಸಿದರು.

ಆ ಕಥೆಯನ್ನು ವೇದವ್ಯಾಸರಶಿಷ್ಯರಾದ ಜೈಮಿನಿಮುನಿಯಿಂದ ಜನಮೇಜಯರಾಯನು ಕೇಳಿದನು.

* * *

# ಜ್ಞಾತಿವಧೆಯ ಪಾಪನಾಶಕ್ಕೆ ಅಶ್ವಮೇಧಯಾಗ

ಜನಮೇಜಯರಾಯನು ತುಂಬುಕುತೂಹಲದಿಂದ ಏಕಾಗ್ರಚಿತ್ತನಾಗಿ ಮಹಾಭಾರತ ಕಥೆಯ ಹಿಂದಿನಪರ್ವಗಳನ್ನು ಜೈಮಿನಿಋಷಿಗಳಿಂದ ಕೇಳಿ ಸಂತುಷ್ಟನಾದನು. ಮುಂದಿನಕಥೆ ಕೇಳಲು ಕುತೂಹಲಿಯಾಗಿ ಪ್ರಾರ್ಥಿಸಿದನು:

'ಋಷಿವರ್ಯರೇ, ಪಾಂಡವರು ಕೌರವರನ್ನು ಜಯಿಸಿ ಚಕ್ರವರ್ತಿಗಳಾದ ಬಳಿಕ ರಾಜ್ಯವನ್ನು ಹೇಗೆಪಾಲಿಸಿದರು? ಅವರು ಮಾಡಿದ ಕಾರ್ಯಸಾಧನೆಗಳೇನು?'

ಆ ಪ್ರಶ್ನೆಯಿಂದ ಉತ್ತೇಜಿತರಾದ ಜೈಮಿನಿಯು,

'ಧರ್ಮರಾಜನು ಅಶ್ವಮೇಧನಡೆಸಿ ಕೀರ್ತಿಶಾಲಿ ಆದನು.'

'ಅಶ್ವಮೇಧವು ಸಾಹಸದಕಥೆ ಅಲ್ಲವೆ?'

'ಹೌದು. ಅದು ವೀರಸಾಹಸ ಕಥಾಗುಚ್ಛ. ನಿಮ್ಮ ಪೂರ್ವಿಕರ ಶ್ರೀಕೃಷ್ಣಭಕ್ತಿಯ ರಸದೌತಣ'

ಶ್ರೀಕೃಷ್ಣನ ಹೆಸರು ಪ್ರಸ್ತಾಪವಾಗುತ್ತಲೇ ಭಕ್ತಿಪರವಶನಾಗಿ, ಕಣ್ಮುಚ್ಚಿ ಧ್ಯಾನಿಸುತ್ತ ರೋಮಾಂಚನಗೊಂಡ ಜನಮೇಜಯ ಪ್ರಾರ್ಥಿಸಿದ,

'ಗುರುಗಳೇ, ಆ ಕಥೆಯನ್ನು ಸವಿಸ್ತಾರವಾಗಿ ತಿಳಿಸಿರಿ. ನನ್ನನ್ನು ಪುನೀತನನ್ನಾಗಿ ಮಾಡಿ.'

'ಕೇಳು ಜನಮೇಜಯ. ಕುರುಕ್ಷೇತ್ರ ಯುದ್ಧವನ್ನು ಜಯಿಸಿದ ನಂತರ ಧರ್ಮರಾಯನು ಚಕ್ರವರ್ತಿಯಾಗಿ ಹಸ್ತಿನಾವತಿಯನ್ನು ಆಳಿದ್ದು ಚಂದ್ರವಂಶದ ಕೀರ್ತಿಗೆ ಕಲಶಪ್ರಾಯವಾಗಿತ್ತು. ಭರತ, ನಳ, ನಹುಷಾದಿ ಚಕ್ರವರ್ತಿಗಳಿಗಿಂತ ಹೆಚ್ಚು ಗುಣಸಂಪನ್ನನಾಗಿ ಆತ ತಮ್ಮಂದಿರೊಡಗೂಡಿ ರಾಜ್ಯವಾಳಿದ.'

ಧರ್ಮರಾಜ ಆಳುವ ರಾಜ್ಯದಲ್ಲಿ ಕೊಲೆ, ಸುಲಿಗೆ, ವೈರಭಾವ, ದೈವದ್ವೇಷ, ಅವಿವೇಕವಿಲ್ಲದೆ ಜನಸುಖಿಯಾಗಿದ್ದರು. ಆ ರಾಜ್ಯ ಬಡತನದಿಂದ ದೂರವಾಗಿ, ದಾನ ಧರ್ಮಾದಿಗಳ ಬೀಡಾಗಿತ್ತು. ಪ್ರಜೆಗಳು ವಿದ್ಯಾವಂತರಾಗಿ ಕೀರ್ತಿವಂತರಾಗಿ, ಕಲ್ಯಾಣ ಮುಖಿಗಳಾಗಿ ಪ್ರೀತಿಯಿಂದಿದ್ದರು. ಹಸ್ತಿನಾವತಿಯು ತುಂಬಿದ ಕೆರೆ, ಉದ್ಯಾನವನಗಳಿಂದ ಕೂಡಿ ಸಮೃದ್ಧವಾದ ಹೂವು ಹಣ್ಣುಗಳಿಂದತುಂಬಿ ಇಂದ್ರನ ಅಮರಾವತಿಯಂತೆ ಕಂಗೊಳಿಸುತ್ತಿತ್ತು. ಇಡೀಲೋಕ ಧರ್ಮರಾಜನನ್ನು ಮಹಾಬಲಶಾಲಿ, ರಾಜಶ್ರೇಷ್ಠ, ರತ್ನಾಕರ, ನಿರ್ದೋಷದಿವಾಕರ ಎಂದು ಹೊಗಳುತ್ತಿತ್ತು. ಹೀಗೆ ವೈಭವದಿಂದ ಮೆರೆಯುತ್ತಿದ್ದಾಗ ಒಂದುದಿನ ವೇದವ್ಯಾಸಮುನಿಗಳು ಹಸ್ತಿನಾವತಿಗೆ ಬಂದರು. ಧರ್ಮರಾಜನು ಸಹೋದರರೊಡಗೂಡಿ ಋಷಿಶ್ರೇಷ್ಠನ ಪಾದಕ್ಕೆ ನಮಸ್ಕರಿಸಿ ಸತ್ಕರಿಸಿದನು. ಆತನ ಆಶೀರ್ವಾದಕ್ಕೆ ಒಳಗಾದನು. ಧರ್ಮರಾಯನು ಬೇಸಿಗೆ ಕಾಲದ ಬಿಸಿಲಿನಿಂದ ಬಸವಳಿದ ಎಳೆಮಾವಿನಗಿಡದಂತೆ ತಲೆತಗ್ಗಿಸಿ ಖಿನ್ನನಾಗಿದ್ದುದನ್ನು ಕಂಡು ಆ ಋಷಿ ಪ್ರಶ್ನಿಸಿದರು:

'ಎಲೈ ದೊರೆಯೆ, ಚಕ್ರವರ್ತಿಯಾದ ನಿನ್ನಮನೋವ್ಯಥೆಗೆ ಕಾರಣವೇನು?'

'ಗುರುಗಳೆ, ನಮ್ಮನ್ನು ಶಿಶುತನದಿಂದಸಾಕಿದ ಪಿತಾಮಹಭೀಷ್ಮ, ಅಣ್ಣನಾದ ಕರ್ಣ, ಆಚಾರ್ಯದ್ರೋಣ, ಬಂಧುಗಳಾದ ದುರ್ಯೋದನ, ಶಲ್ಯರನ್ನು ನಾವು ಕೊಂದೆವು. ಈ ಗುರುವಧೆ, ಜ್ಞಾತಿವಧೆ, ಬ್ರಹ್ಮಹತ್ಯೆಗೆ ಪರಿಹಾರವೇನು?

'ಸಕಲ ಬಾಂಧವರೊಂದಿಗೆ ಸೇರಿಬದುಕದ ಮನುಷ್ಯನಬಾಳಿನಿಂದ ಪ್ರಯೋಜನ ವೇನು? ನಾನು ಈ ಜೀವವಿರುವವರೆಗೆ ವನವಾಸ ಮಾಡಿಕೊಂಡಿರುವುದು ಲೇಸು.'

ವೇದವ್ಯಾಸರು ರಾಜ್ಯವನ್ನು ಸಂಪಾದಿಸಲು ಶತ್ರುಸಂಹಾರ ಮಾಡುವುದು ಶಾಸ್ತ್ರಸಮ್ಮತವೆಂದು ತಿಳಿಸಿ, ಜ್ಞಾತಿವಧೆಯ ಪಾಪನಾಶಕ್ಕೆ ಯಜ್ಞಯಾಗಾದಿ ಸತ್ಕರ್ಮಗಳನ್ನು ಮಾಡು. ಪರಿಶುದ್ಧವಾಗುವೆ ಎಂದು ಪರಿಹಾರ ಸೂಚಿಸಿದರು. ಪೂರ್ವದಲ್ಲಿ ಶ್ರೀರಾಮಚಂದ್ರನು ರಾವಣಾದಿರಾಕ್ಷಸರನ್ನು ಕೊಂದ ಬ್ರಹ್ಮಹತ್ಯಾದೋಷ ನಿವಾರಣೆಗೆ ಅಶ್ವಮೇಧಯಾಗಮಾಡಿ ಬ್ರಾಹ್ಮಣರನ್ನು ದಾನದಕ್ಷಿಣೆಗಳಿಂದ ತೃಪ್ತಿಗೊಳಿಸಿದ್ದಾನೆ. ನೀನು ಯಜ್ಞವನ್ನಾಚರಿಸು. ಶುಚಿಯಾಗಿಬಾಳು ಎಂದು ಪ್ರೇರಣೆ ನೀಡಿದರು. ಉತ್ಸಾಹಗೊಂಡ ಧರ್ಮರಾಯನು ಅಶ್ವಮೇಧಯಾಗದ ಆಚರಣೆಯನ್ನು ವಿಸ್ತಾರವಾಗಿ ತಿಳಿದುಕೊಳ್ಳುವ ಕುತೂಹಲದಿಂದ ಕೇಳಿದನು:

'ಆ ಯಜ್ಞವನ್ನು ಮಾಡುವಬಗೆ ಹೇಗೆ? ಅದಕ್ಕೆ ಯಾವಲಕ್ಷಣದ ಕುದುರೆಯಾಗಬೇಕು? ಋತ್ವಿಕ್ಕುಗಳು ಎಷ್ಟುಮಂದಿ? ದಕ್ಷಿಣೆದ್ರವ್ಯ ಎಷ್ಟು ಬೇಕಾಗಬಹುದು?'

'ಎಲೈ ರಾಜಶ್ರೇಷ್ಠನೆ, ಹೊಳೆವ ಧವಳದೇಹ, ಹಳದಿ ಬಣ್ಣದ ಬಾಲ, ಒಂದು ಕಿವಿಯಲ್ಲಿ ಮಾತ್ರ ನೀಲವರ್ಣ ಹೊಂದಿರುವ, ಒಳ್ಳೆಯ ವೇಗದ ಕುದುರೆಯನ್ನು ಮಹಾಯಜ್ಞಕ್ಕೆ ಸಂಪಾದಿಸು. ಸತ್ಯ, ಶೌಚ, ಆಚಾರವಂತರಾದ ಇಪ್ಪತ್ತು ಮಂದಿ ಬ್ರಾಹ್ಮಣರನ್ನು ಕರೆಸು. ಒಬ್ಬೊಬ್ಬರಿಗೆ ಒಂದು ಬಳ್ಳ ಮುತ್ತು, ಅತ್ಯಧಿಕ ಹಯ ಗಜ ರಥ, ಗೋಸಹಸ್ರ, ಒಂದು ಭಾರ ಹೊನ್ನನ್ನು ದಾನ ದಕ್ಷಿಣೆಯಾಗಿ ನೀಡು.

'ಆ ಭೂಸುರರು ಅಪ್ಪಣೆಕೊಟ್ಟಬಳಿಕ ಯಜ್ಞಕರ್ತನು ಈ ವೇದಿನಿಯಲ್ಲಿ ಯಾರಾದರೂ ಉನ್ನತಪರಾಕ್ರಮಿಗಳಿದ್ದರೆ ಈ ಕುದುರೆಯನ್ನು ಕಟ್ಟಲಿ ಎಂದು ಚಿನ್ನದ ಪಟ್ಟಿಯಲ್ಲಿ ಬಿರುದುಬರೆಸಿ ಅದರ ಹಣೆಗೆ ಕಟ್ಟಬೇಕು. ಅನಂತರ ಅದನ್ನು ಒಂದು ವರ್ಷ ಸ್ವೇಚ್ಛೆಯಾಗಿ ದೇಶಸಂಚಾರ ಮಾಡಲು ಬಿಡಬೇಕು. ಅದುವರೆಗೆ ಯಜ್ಞಕರ್ತನು ಅಸಿಪತ್ರವೆಂಬ ವ್ರತನಿಯಮ ನಿರತವಾಗಿರಬೇಕು. ನಿನಗೆ ಶಕ್ತಿಇದ್ದರೆ ಪ್ರಯತ್ನಿಸು.'

ಆ ನುಡಿ ಕೇಳಿ ಧರ್ಮನಂದನನು ತನ್ನಲ್ಲಿ ಅಷ್ಟು ಹಣವಿಲ್ಲದ್ದನ್ನು, ಯೋಗ್ಯ ದಿವ್ಯಾಶ್ವವಿಲ್ಲದ್ದನ್ನು ಚಿಂತಿಸತೊಡಗಿದನು. ಶ್ರೀಕೃಷ್ಣನು ಸಮೀಪದಲ್ಲಿಲ್ಲದ ಸಂದರ್ಭ ನೆನೆದು ಆಸಕ್ತಿರಹಿತಭಾವಕ್ಕೆ ಒಳಗಾದನು. ಆಗ ಆ ಮುನಿಯು ಆತನಿಗೆ ಯಜ್ಞ ಯೋಗ್ಯ ಲಕ್ಷಣವುಳ್ಳ ಮಹಾಹಯವು ಭದ್ರಾವತಿನಗರದ ಯೌವನಾಶ್ವನಲ್ಲಿದ್ದು ಅದನ್ನು ಸಾಹಸದಿಂದ ಪಡೆಯಲು ಸೂಚಿಸಿದರು. ದ್ವಾಪರ ಯುಗದಲ್ಲಿ ಮರುತ್ತನೆಂಬ ದೊರೆ ಅಶ್ವಮೇಧಯಾಗಮಾಡಿ ಬ್ರಾಹ್ಮಣರಿಗೆ ಯಥೇಚ್ಛವಾಗಿ ದಾನಮಾಡಿದನು. ಅವರು ಅದನ್ನು ಹೊತ್ತುಕೊಂಡು ಹೋಗಲಾರದೆ ಉಪೇಕ್ಷೆಯಿಂದ ಅಲ್ಲಿಯೇ ಬಿಟ್ಟುಹೋದರು. ಆ ದ್ರವ್ಯ ಹಿಮಾಲಯದಲ್ಲಿದೆ. ಅದನ್ನುತಂದು ಯಜ್ಞಕ್ಕೆ ಉಪಯೋಗಿಸಿಕೊಳ್ಳಲು ತಿಳಿಸಿದರು.

ಆಗ ಭೀಮನು ಭದ್ರಾವತಿಗೆ ಹೋಗಿ ಯೌವನಾಶ್ವನನ್ನುಗೆದ್ದು ದಿವ್ಯಾಶ್ವವನ್ನು ತರುವ

ಪ್ರತಿಜ್ಞೆ ಮಾಡಿದನು. ಆತನಿಗೆ ಸಹಾಯಕರಾಗಿ ಕರ್ಣನಮಗ ವೃಷಕೇತು, ಘಟೋತ್ಕಚನ ಮಗ ಮೇಘವರ್ಣನು ಕೂಡಿ ಕೊಂಡರು. ಭೀಮನು ಶ್ರೀಕೃಷ್ಣನ ಕೃಪಾಬಲವಿದ್ದರೆ ಈ ಕಾರ್ಯ ಸಾಧ್ಯ. ತನ್ನಸಾಹಸ ಮುಖ್ಯಅಲ್ಲ ಎಂಬ ವಿನಯುವನ್ನು ವ್ಯಕ್ತಪಡಿಸಿ ಧರ್ಮಜನಿಂದ ವೀಳೆಯವನ್ನು ಪಡೆದನು. ಧರ್ಮರಾಜನು ಶ್ರೀಕೃಷ್ಣನಿಗೆ ತಿಳಿಸದೆ ಈ ಕಾರ್ಯನಡೆಸುತ್ತಿರುವ ಮನಸ್ಸಿನಅಳುಕನ್ನು ವ್ಯಾಸ ಮುನಿಗಳಲ್ಲಿ ವ್ಯಕ್ತಪಡಿಸಿದನು. ಅವರು ನಿಮ್ಮವಿಷಯದಲ್ಲಿ ಶ್ರೀಕೃಷ್ಣನು ಎಂದಿಗೂ ಅಸಮಾಧಾನಪಡುವುದಿಲ್ಲ. ಅಂತಹಚಿಂತೆಬಿಡು ಎಂದು ಸಮಾಧಾನಪಡಿಸಿದರು. ಅವರನ್ನುಹರಸಿ ತೆರಳಿದರು.

**'ತೊಳಲುತರಸುವ ಬಳ್ಳಿ ಕಾಲ್ತೊಡಕಿದಂತೆ'**

ಶ್ರೀಕೃಷ್ಣನಿಲ್ಲದೆ ಈ ಯಜ್ಞ ನಡೆಯದೆಂದು ಧರ್ಮಜನು ಹೆದರಿದನು.

ಶ್ರೀಕೃಷ್ಣನನ್ನು ಕರೆತರಲು ಅರ್ಜುನನನ್ನು ಕಳುಹಿಸಿಕೊಡುವಬಗ್ಗೆ ಆಲೋಚಿಸುತ್ತಿದ್ದನು. 'ತೊಳಲುತರಸುವ ಬಳ್ಳಿ ಕಾಲ್ತೊಡಕಿದಂತೆ' ಶ್ರೀಕೃಷ್ಣ ಅಂದೇರಾತ್ರಿ ಹಸ್ತಿನಾವತಿಗೆ ಬಂದನು. ಆತನನ್ನು ಪಂಚಪಾಂಡವರು ಕೈದೀವಿಗೆ, ಸ್ತುತಿಪಾಠಕರು, ವಾದ್ಯ ಸಂಭ್ರಮಗಳೊಂದಿಗೆ ಎದುರುಗೊಂಡರು. ಲೀಲಾವತಾರಿ ಶ್ರೀಕೃಷ್ಣನು ರಥದಿಂದಿಳಿದು ಚಾರುಹಾಸದೊಂದಿಗೆ ಯುದಿಷ್ಠಿರನ ಕಾಲಿಗೆ ನಮಸ್ಕರಿಸಲು, ಆ ದೊರೆ ದೂರಕ್ಕೆಸರಿದು ಶ್ರೀಕೃಷ್ಣನಪಾದಕ್ಕೆ ಎರಗಿದನು. ಅವರ ಪರಸ್ಪರಾಲಿಂಗನ ಕಂಡು ಮುನಿಜನರು ಬೆರಗಾದರು. ಅವರೆಲ್ಲರೂ ಅರಮನೆ ಸೇರಲು, ದ್ರೌಪದಿಯು ಹರಿಯನ್ನು ಸ್ತೋತ್ರ ಮಾಡುತ್ತ ಆತನಚರಣಕ್ಕೆ ಎರಗಿದಳು. ಆಕೆಯನ್ನು ಕೃಪೆಯಿಂದ ಆದರಿಸಿದ ಕೃಷ್ಣನು ಅನಂತರ ಧರ್ಮರಾಜನೊಡನೆ ಒಡ್ಡೋಲಗಕ್ಕೆ ಬಂದು ಆಸೀನನಾದನು.

'ಎಲೈ ದೊರೆಯೆ, ಈ ಲೋಕದಲ್ಲಿ ನಿನ್ನಸಿರಿಗೆ ವಿರೋಧಿಸುವವರು ಯಾರೂ ಇಲ್ಲದ್ದರಿಂದ ನಿನ್ನರಾಜ್ಯ ನಿಷ್ಕಂಟಕವಾಗಿದೆ. ನಿನ್ನ ರಾಜ್ಯಧರ್ಮದ ಆಳಿಕೆ ಚಂದ್ರವಂಶದಲ್ಲಿ ಪ್ರಸಿದ್ಧರಾಗಿದ್ದ ಪುರೂರವ, ಹರಿಶ್ಚಂದ್ರರನ್ನೂ ಮೀರಿಸಿದೆ. ನಾವುಧನ್ಯರು.'

ಶ್ರೀಕೃಷ್ಣನ ಶ್ಲಾಘನೆಯನುಡಿಗೆ ಹರ್ಷಿತನಾದ ಧರ್ಮಜನು.

'ನಾವು ನಿಮ್ಮಡಿಯ ಸೇವಕರು. ನಮ್ಮಏಳ್ಗೆಯನ್ನು ಕಂಡು ಕೃತಕೃತ್ಯರಾಗಿರುವ ನಿಮ್ಮವಿಷಯದಲ್ಲಿ ನಮಗೆ ಅನುಮಾನವೇ? ಈ ಧರೆಯಿರುವವರೆಗೂ ಜನ ನಿಮ್ಮನ್ನು ಪಾಂಡವಸಂಸ್ಥಾಪನಾಚಾರ್ಯರೆಂದು ಹೇಳದಿರುವುದಿಲ್ಲ. ಅದು ಅಂತಿರಲಿ, ಮುಂದೆ ಮಾಡಬೇಕಾದ ರಾಜಕಾರ್ಯ ತಿಳಿಸಿ.'

'ಏಕಚ್ಛಕ್ರಾಧಿಪತಿಯಾಗಿರುವ ನಿನಗೆ ವೈರಿಗಳೇಇಲ್ಲ. ಇನ್ನು ನೀನು ಮಾಡಬೇಕಾದ ರಾಜಕಾರ್ಯವೇನು ಉಳಿದಿದೆ?'

'ಎಲೈ ಭಗವಂತನೆ, ಸರ್ವವನ್ನೂ ತಿಳಿದವನು ನೀನು. ಇಂದು ವೇದವ್ಯಾಸ ಮುನಿಗಳು ಬಂದು ಅಶ್ವಮೇಧವನ್ನಾಚರಿಸುವ ವಿಧಿವಿಧಾನ ಬೋಧಿಸಿದ್ದಾರೆ. ಭೀಮನು ಯೋಗ್ಯಯಜ್ಞಾಶ್ವ ತರುವುದಾಗಿ ಪ್ರತಿಜ್ಞೆಮಾಡಿದ್ದಾನೆ, ಈ ಅಶ್ವಮೇಧ ಯಾಗವನ್ನು ನಡೆಸುವ ಬಗೆಹೇಗೆ? ತಮ್ಮಅಭಿಪ್ರಾಯ ತಿಳಿಸಿ.'

ಸರ್ವಾಂತರ್ಯಾಮಿಯಾದ ಶ್ರೀಕೃಷ್ಣ ವಿನೋದಪ್ರಿಯ, ಸರಸಕಲಹ ಚತುರ. ಧರ್ಮರಾಯನನ್ನು ಕುರಿತು, 'ಮರುಳೆ ಆ ವ್ಯಾಸಮುನಿ ಹಾಕಿದ ಹಗ್ಗದ ಜೀರುಗುಣಿಕೆಗೆ

ನೀನು ಸಿಕ್ಕಬಹುದೇ? ದುರುಳಭೀಮನು ಯೌವನಾಶ್ವನನ್ನು ನಿಗ್ರಹಿಸಿತರಲು ಸಾಧ್ಯವೇ? ಬುದ್ಧಿವಂತನಾಗಿದ್ದರೆ ರಕ್ಕಸಿಯನ್ನು ರಾಣಿಯನ್ನಾಗಿ ಸ್ವೀಕರಿಸುತ್ತಿದ್ದನೆ?' ಎಂದು ಮೃದುವಾಗಿ ಚುಚ್ಚಿದನು. ಭೀಮನೂಸಹ ಕೃಷ್ಣನನ್ನು 'ನರಕಾಸುರನನ್ನು ಸಂಹಾರ ಮಾಡಿದಬಳಿಕ ಅವನ ಬಾಲಿಕೆಯರನ್ನು ಗ್ರಹಿಸಿದೆ. ಅವರೂ ರಕ್ಕಸಿಯರಲ್ಲವೇ?'ಎಂದು ಹಾಸ್ಯನಗೆ ಬೀರಿದನು. ಶ್ರೀಕೃಷ್ಣನು ನಕ್ಕು ಭೀಮನಿಗೆ, 'ಕುದುರೆಯನ್ನು ತರಲು ಹೋಗು' ಎಂದು ಬೆನ್ನುತಟ್ಟಿದನು. ಧರ್ಮರಾಯನಿಗೆ ಯಾಗದಲ್ಲಿ ಎದುರಿಸಬೇಕಾದ ಪರಾಕ್ರಮಿಗಳಬಗ್ಗೆ ಎಚ್ಚರಿಕೆನೀಡಿದನು. ಆಗ ವಿನಯಶೀಲನಾದ ಧರ್ಮಜನು ಪ್ರಾರ್ಥಿಸಿದನು:

'ನಿಮ್ಮಡಿಯ ಕಾರುಣ್ಯವಿದ್ದರೆ ನಾವು ಜಯಶಾಲಿಗಳಾಗುವೆವು. ಒಲಿದು ನಮ್ಮನ್ನು ಉದ್ಧರಿಸಿ'.

'ನಿನ್ನಂತಹದೊರೆ ಈ ರಾಜವಂಶಾವಳಿಯಲ್ಲಿ ಯಾರೂ ಇಲ್ಲ. ಅಶ್ವಮೇಧಯಾಗವನ್ನು ಆರಂಭಿಸು. ಚಿಂತಿಸಿಬೇಡ.'

ಧೈರ್ಯವನ್ನು ಹೊಂದಿದ ದೊರೆಯು ಯಜ್ಞವನ್ನು ನಡೆಸಲು ನಿಶ್ಚಯಿಸಿದನು. ಭೀಮ, ವೃಷಕೇತು, ಮೇಘವರ್ಣರಿಗೆ ಕುದುರೆಯನ್ನುತರಲು ಅಪ್ಪಣೆ ನೀಡಿದನು. ಭೀಮನು ದೊರೆಗೆ ನಮಸ್ಕರಿಸಿ, ಅರ್ಜುನನನ್ನು ಅರಸುಗಾವಲಿಗೆ ನೇಮಿಸಿದನು. ಮೇಘವರ್ಣ, ವೃಷಕೇತು ವೀರರೊಡಗೂಡಿ ಶ್ರೀಕೃಷ್ಣನಪಾದಕ್ಕೆ ಪೂಜೆಮಾಡಿ ಯಜ್ಞಾಶ್ವವನ್ನು ತರಲು ಹೊರಟನು.

* * *

# ಯೌವನಾಶ್ವ

ಭೂಪತಿಯಾದ ಜನಮೇಜಯನೇ ಮುಂದೆನಡೆದ ಸತ್ಕತೆಯನ್ನು ಕೇಳು. ಭೀಮ, ವೃಷಕೇತು, ಮೇಘವರ್ಣರು ಪ್ರಯಾಣಮಾಡುತ್ತ ಭದ್ರಾವತಿಯನ್ನು ತಲುಪಿದರು. ಆ ದೇಶವು ಸಿರಿಸಂಪತ್ತುಗಳಿಂದ ಕೂಡಿರುವುದನ್ನು ನೋಡಿದರು. ಅದು ಕೊಳ, ತೊರೆ, ಉದ್ಯಾನವನಗಳು; ತೋಟ, ತೋಪುಗಳಿಂದ ಶೋಭಿಸುತ್ತ ಜನರಲ್ಲಿ ಮನ್ಮಥಭಾವವನ್ನುಂಟು ಮಾಡುತ್ತಿತ್ತು. ಆ ರಾಜ್ಯದಲ್ಲಿ ಊರಿಂದೂರಿಗೆ ಪ್ರಯಾಣಿಸುವಾಗ ಆಯಾಸಗೊಂಡ ಮಾರ್ಗಸ್ಥರು ಅರವಟ್ಟಿಗೆಯಲ್ಲಿ ನೀರುಕುಡಿಯಲು ಅಲ್ಲಿದ್ದ ಲಲನೆಯರಿಗೆ ಕೈಯೊಡ್ಡುತ್ತಿದ್ದರು. ಆ ಬಾಲೆಯರು ನೀರಿನಕಳಶವೆತ್ತಿ ಪ್ರೀತಿಯಿಂದ ಸುರಿಯುತ್ತಿದ್ದನೀರು ನಿರ್ಮಲವಾಗಿ, ಸುವಾಸನೆಯಿಂದಕೂಡಿ ತಂಪಾಗಿರುತ್ತಿತ್ತು. ಆ ಲಾವಣ್ಯವತಿಯರ ಅಧರದಇಂಪು, ಎಳನಗೆಯಕಡೆಗಣ್ಣ ನೋಟ, ಸ್ತನಯುಗ್ಮದಅಪ್ಪಿನ ಶೈತ್ಯ, ಮೈಗಂಪನ್ನು ಬಯಸಿ ಬಯಸಿ ದಾರಿಗರು ನೀರು ಕುಡಿಯುತ್ತಲೇ ಕಾಲ ಕಳೆಯುತ್ತಿದ್ದರು.

ಭೀಮನು ವೃಷಕೇತುವಿನೊಡನೆ ಅಲ್ಲಿರುವ ಒಂದು ಬೆಟ್ಟವನ್ನು ಹತ್ತಿದನು. ಪೂರ್ವ ದಿಕ್ಕಿನಲ್ಲಿರುವ ಭದ್ರಾವತಿನಗರವನ್ನು ತೋರಿಸಿ – ಆ ಪುರದ ಸೌಧಗಳ ಹೊಳಪು ಅಮರಾವತಿ ಅಲಕಾವತಿಯನ್ನು ಮೀರಿಸುವರೀತಿ ಇದೆ. ಅಲ್ಲಿ ಓಡಾಡುವ ಸ್ತ್ರೀಯರ ದೇಹಕಾಂತಿ ಬೆಳ್ಳಿಯಬೆಟ್ಟದ ಮೇಲಿನ ಜ್ಯೋತಿರ್ಲತೆ. ಪುರದ ಕೋಟೆಯ ಬುರುಜುಗಳು ಮುಗಿಲು ಮುಟ್ಟಿದರೆ; ಕಂದಕ ಕಣ್ಣಿಗೆ ಕಾಣದಷ್ಟು ಆಳದಲ್ಲಿದೆ. ಪುರವು ಕೆರೆ ತೊರೆಗಳಿಂದಕೂಡಿ ಉತ್ತಮ ಮಳೆಬೆಳೆಹೊಂದಿ ಜನ ಸಮೃದ್ಧಿಯಿಂದಿದ್ದಾರೆ. ಅಲ್ಲಿಯ ತರುಲತೆಗಳು ಸುಗಂಧಮಯವಾಗಿವೆ ಎಂದು ವರ್ಣಿಸಿದನು. ಪಟ್ಟಣದಿಂದ ನೀರನ್ನು ಕುಡಿಯಲು ಸರೋವರಕ್ಕೆ ಬಂದುಹೋಗುವ ಸಾಲುಕುದುರೆಗಳನ್ನು ವೀಕ್ಷಿಸಿ ಅವುಗಳಲ್ಲಿ ಯಜ್ಞಯೋಗ್ಯವಾದ ಅಶ್ವವು ಕಾಣದಿರುವುದಕ್ಕೆ ಚಡಪಡಿಸಿದನು. ಚಿಂತಾಕ್ರಾಂತನಾಗಿ ಮನಸ್ಸಿನಲ್ಲಿ ಶ್ರೀಕೃಷ್ಣನನ್ನು ಧ್ಯಾನಿಸಿದನು.

ಭೀಮನುತನ್ನ ಪ್ರತಿಜ್ಞೆಯ ಈಡೇರಿಕೆಗಾಗಿ ಹಲವುಬಗೆಯಲ್ಲಿ ಆಲೋಚಿಸುತ್ತಿದ್ದನು. ಅಷ್ಟರಲ್ಲಿ ಅನೇಕಸೇನೆಗಳ ಸನ್ನಾಹದಿಂದ, ವಾದ್ಯ ಘೋಷದೊಡನೆ, ಅಮಲವಸ್ತ್ರಾಭರಣ ಗಂಧಮಾಲ್ಯಾದಿಗಳ ಪೂಜೆಯಿಂದ ಶೋಭಿತ ಕುದುರೆ ಕಂಡಿತು. ಅದನ್ನು ರಾಜಕುಮಾರರು ನೀರುಕುಡಿಸಲು ಸಂಭ್ರಮದಿಂದ ಕರೆ ತರುತ್ತಿದ್ದರು. ಮೂರು ಲೋಕದಲ್ಲಿಯೂ ಇಂತಹ ತುರಗವಿಲ್ಲವೆಂದು ಆಶ್ಚರ್ಯ ಚಕಿತನಾಗಿ ಭೀಮನು ನೋಡಿದನು. ಆಗ ಆತನಿಗೆ ನಮಸ್ಕರಿಸಿದ ಮೇಘವರ್ಣನು ಆ ಕುದುರೆಯನ್ನು ತರಲು ಅಪ್ಪಣೆಪಡೆದು ಹೋದನು.

**ಯಾಗದ ಕುದುರೆಗಾಗಿ ಹೋರಾಟ**

ಮೇಘವರ್ಣನು ಯೌವನಾಶ್ವನ ಸೇನೆಯು ಕಂಗೆಡುವಂತೆ ನಭಮಂಡಲದಲ್ಲಿ ಮಾಯಾಜಾಲವನ್ನು ಬೀಸಿದನು. ಆ ರಾಕ್ಷಸ ಮಾಯೆಗೆ ಪ್ರಳಯಕಾಲದ ಮೇಘಗಳು ಎರಗಿದವು. ಬರಸಿಡಿಲುಬೀಳತೊಡಗಿತು. ತತ್‌ಕ್ಷಣ ಬಂದು ಎರಗಿದ ಆ ಮಹಾದ್ಭುತಕ್ಕೆ ಯೌವನಾಶ್ವನ ಸೈನಿಕರು ಕಳವಳಕ್ಕೊಳಗಾದರು. ಅವರಿಗೆ ದಿಕ್ಕುತೋಚದಂತಾಯಿತು. ಮೇಘವರ್ಣನು ರಾಜಕುಮಾರರನ್ನುಕೆಡವಿ ಬೆಳ್ದಾವರೆಯನ್ನು ಹಂಸಪಕ್ಷಿಯು ಕಿತ್ತು

ನಭಕ್ಕೆ ಹಾರುವಂತೆ, ಕುದುರೆಯನ್ನು ಹಿಡಿದುಕೊಂಡು ಆಕಾಶಕ್ಕೆ ಹಾರಿದನು. ಅದನ್ನು ಕಂಡು ಭೀಮ, ಕರ್ಣಜರು ಬೆರಗಾದರು.

ಅಶ್ವದ ಅಂಗರಕ್ಷಕ ಚಾತುರಂಗಬಲವು ಆರ್ಭಟಿಸುತ್ತ ಯುದ್ಧಕ್ಕೆನಿಂತಿತು. ಅವರನ್ನು ದ್ದೇಶಿಸಿ ಮೇಘವರ್ಣನು 'ನಿಮ್ಮ ಸಾಹಸ ಜೀವವನ್ನು ಅಪಹರಿಸಿಕೊಂಡು ಹೋಗುವ ಯಮನನ್ನು ಹೆಣವು ಅಟ್ಟಿಸಿಕೊಂಡು ಬಂದಂತಿದೆ' ಎಂದು ಜರಿದನು. ಯೌವನಾಶ್ವನ ಅಕ್ಷೋಹಿಣಿಸೇನೆ ಅವನ ಮೇಲೆ ಯುದ್ಧಕ್ಕೆಹೊರಟಿತು. ಸೈನಿಕರು'ಕುದುರೆಗಳ್ಳನನ್ನು ಹಿಡಿಯಿರಿ' ಎಂದು ಹೇಳಿ ಆಕಾಶದ ತುಂಬ ಬಾಣಗಳ ಮಳೆಗರೆದರು. ಮೇಘವರ್ಣನು ಅವರೆದುರಿಗೆ ಕುದುರೆಹೊತ್ತುಕೊಂಡು ಬಂದಿದ್ದು. ಕಳವುಮಾಡಿದುದಲ್ಲ ಎಂದು ಉತ್ತರಿಸುತ್ತ ಮೂರುಲೋಕವು ತಲ್ಲಣಿಸುವಂತೆ ಮಾಯೆಯನ್ನು ಸೃಷ್ಟಿಸಿದನು. ಅದರಿಂದ ಸಿಡಿಲು, ಕಲ್ಲು ಗುಂಡುಗಳು ಬಿದ್ದು ಧೂಳಿನ ಬಿರುಗಾಳಿ ಎದ್ದಿತು. ದೇಹವನ್ನು ಭೇದಿಸುವ ಶಸ್ತ್ರಾಸ್ತ್ರಗಳು ಹೊಮ್ಮಿದುವು. ಹಿಡಿಯುವ ಹುಲಿ ಕರಡಿಗಳು, ನುಂಗುವ ಪಿಶಾಚಿಗಳು, ಹಾವುಗಳು, ಕಾಳ್ಗಿಚ್ಚು ಸೃಷ್ಟಿಗೊಂಡು ಸೇನೆಯನ್ನು ನಾಶಮಾಡಿತು. ಆ ರಾಕ್ಷಸನನ್ನು ಎದುರಿಸಲು ಭೂಮ್ಯಾಕಾಶಗಳಲ್ಲಿ ಯುದ್ಧ ಮಾಡುವ ಅಜೇಯ ಎಂಟುಸಾವಿರ ಮಹಾ ರಥರನ್ನು ಯೌವನಾಶ್ವನು ಕಳುಹಿಸಿದನು. ಅವರೆಲ್ಲರ ರಥ, ಸಾರಥಿ, ಕುದುರೆಗಳನ್ನು ಮೇಘವರ್ಣನು ತನ್ನ ಗದೆಯಿಂದ ಅಪ್ಪಳಿಸಿ, ಧನುರ್ಬಾಣಗಳನ್ನು ಪುಡಿಮಾಡಿದನು. ಕುದುರೆಯನ್ನು ಕಡುಬೇಗದಿಂದ ತಂದು ಭೀಮನೆದುರಿಗೆ ನಿಂತನು.

ಸುವೇಗನೆಂಬ ಯೌವನಾಶ್ವನಮಗನು ಮೇಘವರ್ಣನನ್ನು ಎದುರಿಸಲು ಚತುರಂಗ ಸೇನೆಯೊಡನೆ ನಿರ್ಭೀತನಾಗಿ ವೇಗದಿಂದ ಬಂದನು. ಅದನ್ನು ಕಂಡ ಭೀಮಸೇನನು ಆ ಕುದುರೆಯನ್ನು ಒಂದುಮರಕ್ಕೆ ಕಟ್ಟಿಹಾಕಿ ಮೇಘವರ್ಣನನ್ನು ಅಲ್ಲಿ ಗುಟ್ಟಾಗಿ ನೇಮಿಸಿದನು. ಯೌವನಾಶ್ವನನ್ನು ಎದುರಿಸಲು ವೃಷಕೇತುವನ್ನು ಕಳುಹಿಸಿದನು. ಪ್ರಳಯಾಗ್ನಿಯಂತೆ ನುಗ್ಗಿಬರುತ್ತಿರುವ ಸುವೇಗನ ಸೈನ್ಯವನ್ನು ಎದುರಿಸಲು ತಾನು ಪರ್ವತದಂತೆ ನಿಂತನು.

**ನೀತಿಯುತ ಕಾಳಗದ ಯೌವನಾಶ್ವ ಮತ್ತು ವೃಷಕೇತು**

ಯೌವನಾಶ್ವನು ಚತುರಂಗಸೇನೆಯೊಡನೆ ವೃಷಕೇತುವಿನಮೇಲೆ ಬೀಳಲು, ಅವನು ತನ್ನ ಕ್ರೂರ ಬಾಣಪ್ರಯೋಗದಿಂದ ಅವರನ್ನು ಹಿಮ್ಮೆಟ್ಟಿಸಿದನು. ಆ ಬಾಲಕನ ಶೌರ್ಯವನ್ನು ಮೆಚ್ಚಿದ ಯೌವನಾಶ್ವನು,

'ಓ ಬಾಲಕ, ಹಯಚೋರನನ್ನು ತೋರಿಸು, ನೀನು ಯಾರು? ಬಾಲಕನಾದ ನಿನ್ನ ಮೇಲೆ ಯುದ್ಧಮಾಡಲು ನನಗೆ ಮನಸ್ಸಾಗುತ್ತಿಲ್ಲ.'

'ನಾನು ಯಾರಾದರೇನು? ಆನೆಯ ಆಕಾರವನ್ನುನೋಡಿ ಸಿಂಹದಮರಿ ಓಡುವುದೆ? ಯುದ್ಧದಲ್ಲಿ ದೊಡ್ಡವನು ಚಿಕ್ಕವನು ಎಂಬ ತಾರತಮ್ಯವೇಕೆ?' ಎಂದು ನುಡಿದ ವೃಷಕೇತು ಯೌವನಾಶ್ವನ ಮೈ ನೋಯುವಂತೆ ಒಂದು ಬಾಣಪ್ರಯೋಗ ಮಾಡಿದನು. ಅದನ್ನು ಯೌವನಾಶ್ವನು ಮೆಚ್ಚಿ,

'ಈ ಲೋಕದಲ್ಲಿ ನನ್ನೊಡನೆ ಯುದ್ಧಮಾಡುವ ಭಟರೇ ಇರಲಿಲ್ಲ. ನೀನು ಶೂರನಾಗಿರುವೆ.'

'ಶೂರತನ ಆಂತರ್ಯದ ಕೆಚ್ಚು.'

'ಹೌದು. ನಿನ್ನಶೌರ್ಯವೇ ನನ್ನಪುಣ್ಯ.'

ಎಂದು ಆತನ ಸಾಹಸವನ್ನು ಹೊಗಳಿ ವೃಷಕೇತುವಿನ ಮೇಲೆ ಒಂದು ಬಾಣ ಪ್ರಯೋಗ ಮಾಡಿದನು. ಅದನ್ನು ಮಾರ್ಗ ಮಧ್ಯದಲ್ಲಿ ಕತ್ತರಿಸಿದ ವೃಷಕೇತು ಯೌವನಾಶ್ವನ ರಥವನ್ನು ಬಾಣಗಳಿಂದ ಮುಸುಕಿಬಿಟ್ಟನು. ತೀವ್ರ ಬಾಣಗಳಿಂದ ರಾಜನ ಮೈಯಲ್ಲಿ ಜಾಲಂದ್ರದಂತೆ ರಂಧ್ರಗಳಾದವು. ಆ ಬಾಣಗಳನ್ನು ಕಿತ್ತೆಸೆದು ಕೋಪೋದ್ರಿಕ್ತನಾದ ಯೌವನಾಶ್ವನು ಆಗ್ನೇಯಾಸ್ತ್ರವನ್ನು ವೃಷಕೇತುವಿನ ಮೇಲೆ ಪ್ರಯೋಗಿಸಿದನು. ಅದರ ಉರಿಯನ್ನು ವೃಷಕೇತುವು ವಾರುಣಾಸ್ತ್ರದಿಂದಆರಿಸಿ, ಮೇಘಾಸ್ತ್ರವನ್ನು ದೊರೆಯಮೇಲೆ ಪ್ರಯೋಗಿಸಿದನು. ಅದನ್ನು ರಾಜನು ವಾಯುವ್ಯಾಸ್ತ್ರದಿಂದ ಆರಿಸಿ, ತಿಮಿರಸ್ತ್ರ ಪ್ರಯೋಗಿಸಿದನು. ವೃಷಕೇತುವು ಸೂರ್ಯಾಸ್ತ್ರದಿಂದ ಅದನ್ನು ನಾಶಮಾಡಿ, ರಾಜನ ವಿರುದ್ಧ ಶೈಲಾಸ್ತ್ರ ಪ್ರಯೋಗಿಸಿದನು. ರಾಜನು ವಜ್ರಾಸ್ತ್ರದಿಂದ ಅದನ್ನು ಪುಡಿಗೈದು ಸರ್ಪಾಸ್ತ್ರವನ್ನು ತೊಟ್ಟನು. ವೃಷಕೇತುವು ಅದನ್ನು ಗರುಡಾಸ್ತ್ರದಿಂದ ಸಂಹರಿಸಿದನು. ಹೀಗೆ ಅವರಿಬ್ಬರೂ ಅಸ್ತ್ರಪ್ರತ್ಯಸ್ತ್ರಗಳಿಂದ ಹೋರಾಡಿದರು. ಬಾಲಕ ವೃಷಕೇತುವಿನ ಬಾಣ ಪ್ರಯೋಗ ಕೌಶಲ್ಯಕ್ಕೆ ಮೆಚ್ಚಿದ ರಾಜ ಆತನ ಬಗ್ಗೆ ಕುತೂಹಲಗೊಂಡು ಪ್ರಶ್ನಿಸಿದನು:

'ಓಹ್, ನೀನು ಬಾಲಕನಲ್ಲ. ಕೆಚ್ಚೆದೆಯಯೋಧ. ನಿನ್ನಂತಹ ಶೂರನ ತಂದೆ ಯಾರು? ತಾತನಾರು?'

'ನನ್ನ ಬಾಣ ಪ್ರಯೋಗವೇ ಅದನ್ನು ತಿಳಿಸುತ್ತಿದೆ. ನನ್ನತಂದೆ ಕರ್ಣ, ತಾತ ಸೂರ್ಯ.'

'ನಿನ್ನ ಬಾಣ ಪ್ರಯೋಗ ಲೇಸೇಲೇಸು. ಭೇಷ್' ಎಂದು ನುಡಿವಲ್ಲಿ ಎದುರಾದ ಬಾಣವನ್ನು ರಾಜನು ಮಧ್ಯದಲ್ಲಿ ಕತ್ತರಿಸಿ, ತನ್ನ ಬಾಣ ವೃಷಕೇತುವಿನ ಎದೆಯಲ್ಲಿ ಹೊಕ್ಕು ಗಾಯ ಮಾಡುವಂತೆ ಪ್ರಯೋಗಿಸಿದನು. ಉದ್ರಿಕ್ತನಾದ ವೃಷಕೇತು ಪ್ರಯೋಗಿಸಿದ ಬಾಣದ ಏಟಿಗೆ ಆ ರಾಜನು ಕೈಯಲ್ಲಿದ್ದ ಬಿಲ್ಲನ್ನು ಬಿಟ್ಟು ಮೂರ್ಛೆ ಹೋದನು. ಯೌವನಾಶ್ವನ ಶೂರಯೋಧರು ದೀಪವನ್ನುಮುತ್ತುವ ಮಿಂಚು ಹುಳುಗಳಂತೆ ವೃಷಕೇತುವನ್ನು ಎದುರಿಸಿ ಅವನ ಜ್ವಾಲೆಯ ಬಾಣ ಪ್ರಯೋಗಕ್ಕೆ ನಾಶವಾದರು. ವೀರ ಬಾಲಕನನ್ನು ಎದುರಿಸಲಾಗದೆ ಉಳಿದ ಯೋಧರು ದೊರೆಯನ್ನು ವಿಚಾರಿಸದೆ ಓಡಿದರು.

ಮೂರ್ಛಿತನಾಗಿರುವ ದೊರೆ ಯೌವನಾಶ್ವನ ಬಳಿಗೆ ಮೃದುಹೃದಯದ ವೃಷಕೇತುವು ಹೋದನು. 'ಸತ್ಯವು ಎನ್ನಸ್ವಭಾವವಾಗಿದ್ದರೆ, ಧೀರನಾಗಿದ್ದರೆ, ಆದಿತ್ಯನಿಗೆ ಮೊಮ್ಮಗನಾಗಿ ಕರ್ಣನಿಗೆ ಮಗನಾಗಿದ್ದರೆ, ಈ ದೊರೆಯು ಬದುಕಲಿ' ಎಂದು ತಕ್ಕಚಿಕಿತ್ಸೆಯನ್ನು ಮಾಡಿದನು. ದೊರೆಯು ಚೇತರಿಸಿಕೊಂಡು ಎಚ್ಚೆತ್ತನು. ಆತ ಕಣ್ಣುಬಿಡುವಷ್ಟರಲ್ಲಿ, ಆತನಿಗೆ ತಿಳಿಯದಂತೆ ಕರ್ಣಸಂಭವನು ತನ್ನ ಮೊದಲಿನ ಸ್ಥಳಕ್ಕೆ ಬಂದು ನಿಂತನು. ಬಿಲ್ಲನ್ನು ಹಿಡಿದು ಠೇಂಕಾರ ಮಾಡುತ್ತ, ಹುಸಿ ಸಿಟ್ಟನ್ನು ಪ್ರದರ್ಶಿಸಿದನು.

ರಾಜನು ಕಣ್ಣುಬಿಟ್ಟು ಸುತ್ತಲೂ ನೋಡಿದಾಗ ತನ್ನ ಸೈನಿಕರಾರೂ ಅಲ್ಲಿರಲಿಲ್ಲ. ಎದುರು ಹುಸಿಕೋಪ ತೋರುತ್ತ ನಿಂತಿರುವ ಶತ್ರುಬಾಲಕ ಮಾತ್ರ ಕಂಡನು. ಆತನ ಪರಾಕ್ರಮ ಕಂಡು ರಾಜನ ಮನಸ್ಸು ನಾಚಿತು. ವಿರಕ್ತಿಯಭಾವ ಉಂಟಾಯಿತು. ಈ ಬಾಲಕನ ದಯೆಗೆ ಈಡಾದ ಬಳಿಕ ಇವನೊಡನೆ ವೀರಾವೇಶದ ಮಾತು ತನಗೆ ಯುಕ್ತವಲ್ಲ ಎಂದು ತೀರ್ಮಾನಿಸಿ,

'ಎಲೈ ಬಾಲಕನೆ, ನಾನು ನನಗೆ ಸಮಾನರಾದ ದೊರೆಗಳು, ಯೋಧರು ಈ ಮೂರುಲೋಕದಲ್ಲಿ ಯಾರೂ ಇಲ್ಲವೆಂದು ಗರ್ವಿಸುತ್ತಿದ್ದೆ. ನನ್ನನ್ನು ಗೆದ್ದು ನೀನು ಪರಾಕ್ರಮಿ ಎನಿಸಿಕೊಂಡೆ. ನಿನ್ನಶೀಲಕ್ಕೆ ನಾನು ಮಾರುಹೋಗಿದ್ದೇನೆ. ನಿನ್ನ ಹೆಸರೇನು? ಲೋಕೋತ್ತರವಾದ ಈ ಕುದುರೆ ನಿನಗೆ ಏತಕ್ಕೆ ಬೇಕಾಗಿದೆ?'

ಆ ನುಡಿ ಕೇಳಿ ಯುವಕನಾದ ವೃಷಕೇತು ತನ್ನ ವಂಶದ ಸಂಸ್ಕಾರದ ಫಲವಾಗಿ ದೊರೆಯ ಈ ಆಶೀರ್ವಾದ ನುಡಿ ತನಗೆ ದೊರಕಿದೆ ಎಂದು ಸಂತೋಷಕ್ಕೆ ಒಳಗಾದನು. ಆನಂದ ಭಾಷ್ಪಗಳು ಸುರಿದವು. ವಿನಯಶೀಲನಾಗಿ ಹೆಮ್ಮೆಯಿಂದ ಹೇಳಿದನು:

'ನನ್ನ ಹೆಸರು ವೃಷಕೇತು. ಯಾದವರ ಅರಸನಾದ ಶ್ರೀಕೃಷ್ಣನು ಯುಧಿಷ್ಠಿರನಿಂದ ಯಜ್ಞವನ್ನು ಮಾಡಿಸಲೆಂದು ತೀರ್ಮಾನಿಸಿರುವನು. ಅದಕ್ಕೆ ಯೋಗ್ಯಕುದುರೆಯನ್ನು ತರಲು ಆತ ಭೀಮಸೇನನನ್ನು ಕಳುಹಿಸಿರುವನು. ನಾನು ಆತನೊಡನೆ ಬಂದಿರುವೆನು.'

'ಎಲೈಕುವರನೆ, ನೀನು ಈವರೆಗೂ ಈ ವಿಷಯವನ್ನು ನನಗೆ ತಿಳಿಸಲಿಲ್ಲವಲ್ಲಾ? ಧರ್ಮರೂಪನಾದ ಯುಧಿಷ್ಠಿರ ಚಕ್ರವರ್ತಿಯೇ ಯಜ್ಞಕರ್ತೃ. ಇಂದಿರಾವಲ್ಲಭ ವಿಷ್ಣುವೇ ಯಜ್ಞಮಾಡಿಸುವವನು. ಹಾಗಿರುವಾಗ ಈ ಕುದುರೆಯೊಂದನ್ನು ಮಾತ್ರ ತೆಗೆದುಕೊಂಡು ಹೋಗಬಹುದೆ?'

ಆ ಮಾತಿಗೆ ಸ್ಥಂಭೀಭೂತನಾದ ವೃಷಕೇತು ಸೌಮ್ಯಮುಖನಾಗಿ ನುಡಿದ:

'ದೊರೆಯೆ ತಮ್ಮ ಮನಸ್ಸಿನ ಭಾವವೇನು?'

'ನಾನೇ ನನ್ನ ಸರ್ವಸ್ವವನ್ನು ತಂದು ಹರಿಗೆ ಒಪ್ಪಿಸುವೆ. ಭೀಮನನ್ನು ತೋರಿಸು.'

ದೊರೆಯ ನಿಷ್ಕಲ್ಮಶಭಕ್ತಿಯ ಶರಣಭಾವಕ್ಕೆ ವೃಷಕೇತು ಮೂಕನಾದ. ಬಹು ಸಂಭ್ರಮದಿಂದ ಆತನನ್ನು ಭೀಮಸೇನನಲ್ಲಿ ಕರೆದುಕೊಂಡು ಹೋದ. ಅದನ್ನು ಕಂಡು ದೇವತೆಗಳು ಈ ದೊರೆಯೆ ಧನ್ಯ ಎಂದು ಆಕಾಶದಿಂದ ಪುಷ್ಪವೃಷ್ಟಿಮಾಡಿದರು.

ಸುವೇಗನ ಸೈನ್ಯವನ್ನು ಭೀಮ ತನ್ನ ಗದೆಯಿಂದ ಸದೆಬಡಿಯುತ್ತಿರಲು ಅದನ್ನು ಸಾಹಸದಿಂದ ಸುವೇಗ ಎದುರಿಸುತ್ತಿದ್ದನು. ಅಷ್ಟರಲ್ಲಿ ಅವರೆದುರಿಗೆ ಯೌವನಾಶ್ವ ಮತ್ತು ವೃಷಕೇತು ಒಂದೇರಥದಲ್ಲಿ ಮಿತ್ರಭಾವದಿಂದ ಬರುತ್ತಿರುವುದನ್ನು ಕಂಡು ಅವರು ವಿಸ್ಮಿತರಾದರು. ಯೌವನಾಶ್ವನು ಮಗ ಸುವೇಗನನ್ನು ಕರೆದು 'ನಮ್ಮ ದಿವ್ಯಾಶ್ವವನ್ನು ಇವರು ಹಿಡಿದುಕೊಂಡರೆಂಬ ವ್ಯಥೆಯನ್ನು ಬಿಡು. ಶ್ರೀಕೃಷ್ಣನು ಧರ್ಮರಾಜನಿಂದ ಮಾಡಿಸುವ ಅಶ್ವಮೇಧಯಾಗಕ್ಕೆ ಕುದುರೆಯನ್ನು ತರಲು ಭೀಮಸೇನನು ಬಂದಿರುವನು. ಈತನಿಗೆ ವಿನಯದಿಂದ ನನ್ನ ಸರ್ವಸ್ವವನ್ನು ಒಪ್ಪಿಸಲು ಸಿದ್ಧನಾಗಿರುವೆ' ಎಂದು ಹೇಳಿದನು. ಸುವೇಗನು ಧನುರ್ಬಾಣವನ್ನುಬಿಟ್ಟು ತಂದೆಯಬಳಿಗೆ ಬಂದನು.

ಭೀಮನಿಗೆ ತಂದೆಮಕ್ಕಳು ವಂದಿಸಿದರು. ವೃಷಕೇತುವಿನ–ಶತ್ರುವನ್ನು ಉಳಿಸುವ ಶ್ರೇಷ್ಠಗುಣದ ಪ್ರಭೆಯಲ್ಲಿದ್ದ ಯೌವನಾಶ್ವನು ನುಡಿದನು:

'ವೃಷಕೇತುವಿನಂತಹ ಕರುಣಾಶಾಲಿ ಇನ್ನೊಬ್ಬನಿಲ್ಲ.'

'ಅವನು ಕರ್ಣಪುತ್ರನಲ್ಲವೆ?'

'ನಾನು ಉಳಿದುದರಿಂದ ಶ್ರೀಕೃಷ್ಣನ ದರ್ಶನಲಾಭ ಸಾಧ್ಯವಾಗಿದೆ. ಆತನಿಗೆ ನನ್ನ ಸರ್ವಸ್ವವನ್ನು ಸಮರ್ಪಿಸುವೆ.'

'ಇದುವರೆಗೆ ಧರ್ಮಜನಿಗೆ ನಾವು ನಾಲ್ಕುಜನ ತಮ್ಮಂದಿರಿದ್ದೆವು. ನೀನೂ ಸೇರಿ ಐದುಮಂದಿಯಾದೆವು.'

ಭೀಮನು ಸೆರೆಹಿಡಿದು ಕೊಂಡಿದ್ದ ಹಯವನ್ನು ಸುವೇಗನ ವಶಕ್ಕೆ ಕೊಟ್ಟನು.

ಮೇಘವರ್ಣ ವೃಷಕೇತುವಿನೊಡನೆ ಭದ್ರಾವತಿಗೆ ನಡೆದನು. ರಾಜನು ಅವರನ್ನು ಸಂಭ್ರಮದಿಂದ ಸ್ವಾಗತಿಸಿದನು. ಮಂತ್ರಿಗೆ ರಾಜ್ಯಭಾರವನ್ನುವಹಿಸಿ, ಅಖಿಲ ಭಂಡಾರ, ಚತುರಂಗಸೇನೆಯೊಡನೆ ಮಕ್ಕಳು ಸಹೋದರ ಬಂಧು ಸಮೇತ ಪತ್ನಿಯೊಡಗೂಡಿ ಯಜ್ಞಾಶ್ವಸಮೇತ ಹಸ್ತಿನಾವತಿಗೆ ಪ್ರಯಾಣಿಸಲು ಸಿದ್ಧನಾದನು, ಶ್ರೀಕೃಷ್ಣನ ದರ್ಶನಕ್ಕೆ ತಾಯಿಯನ್ನೂ ಬಲವಂತವಾಗಿ ಕರೆದೊಯ್ದನು. ಭೀಮನು, ವೃಷಕೇತು ಮೇಘವರ್ಣರನ್ನು ಯೌವನಾಶ್ವನ ದಾರಿಗಾವಲಿಗೆ ನೇಮಿಸಿ ಮುಂದಾಗಿ ಈ ರಾಜಕಾರ್ಯ ತಿಳಿಸಲು ಹಸ್ತಿನಾವತಿಗೆ ಹೊರಟನು. ಆಸ್ಥಾನದಲ್ಲಿ ಧರ್ಮರಾಜನ ಪಾದಕ್ಕೆ ವಂದಿಸಿ ವೃತ್ತಾಂತ ತಿಳಿಸಿದನು. ದೊರೆ ತಮ್ಮನನ್ನು ಆಲಂಗಿಸಿಕೊಂಡನು. ಭೀಮನಿಗೆ ರಾಣಿಯರು ಆರತಿಎತ್ತಿದರು. ಭೀಮನು ಶ್ರೀಕೃಷ್ಣನಿಗೆ ನಮಸ್ಕರಿಸಲು ಆತ ಹೆಮ್ಮೆಯಿಂದ ಮನ್ನಿಸಿದನು.

**ಯೌವನಾಶ್ವನ ಶ್ರೀಕೃಷ್ಣ ದರ್ಶನ**

ಜನಮೇಜಯನೇ ಮುಂದಿನ ಕಥಾ ಸಂದರ್ಭವನ್ನು ಕೇಳು, ಯೌವನಾಶ್ವನನ್ನು ಎದುರುಗೊಳ್ಳಲು ಯುಧಿಷ್ಠಿರನು ಶ್ರೀಕೃಷ್ಣನೊಡನೆ ದ್ರೌಪದಿ ಸಮೇತನಾಗಿ ಹೊರಟನು. ಅವನೊಡನೆ ಸೇನಾಪತಿ, ಗುರು, ಪುರೋಹಿತರು, ಚತುರಂಗಸೇನೆ ಹೊರಟಿತು. ಭೀಮನೊಡಗೂಡಿಬಂದ ಯೌವನಾಶ್ವನು-ಧರ್ಮರಾಜನು ಆನೆಯಮೇಲೆ ಕುಳಿತು ಬರುತ್ತಿರುವುದನ್ನು ನೋಡಿ ಸಂತೋಷಪಟ್ಟನು. ಕಾಣಿಕೆಯನ್ನುಅರ್ಪಿಸಿ ಕೈ ಮುಗಿಯಲು ಧರ್ಮಜನು ಆತನನ್ನು ಬಾಚಿ ತಬ್ಬಿಕೊಂಡನು. ನೀನು ನನ್ನ ನಾಲ್ವರು ತಮ್ಮಂದಿರ ಸಮಾನನಾಗಿರುವೆಯಾಗಿ ಶ್ರೀಕೃಷ್ಣನನ್ನು ಸೇವಿಸು ಎಂದು ಮುರಾರಿಯನ್ನು ತೋರಿಸಿದನು.

ಶ್ರೀಕೃಷ್ಣನನ್ನು ಸದಾಧ್ಯಾನಿಸುತ್ತ ಅವನ ದರ್ಶನ ಭಾಗ್ಯಕ್ಕೆ ಆಶಿಸುತ್ತಿದ್ದ ಯೌವನಾಶ್ವನಿಗೆ ಆ ಮಂಗಳಮೂರ್ತಿಯನ್ನು ನೋಡಿದ ತಕ್ಷಣ ಕಣ್ಣು ಮನಸ್ಸು ಒಂದಾಯಿತು. ಆತನ ಪಾದಗಳಿಗೆ ದೇಹತಲೆಬಾಗಿತು. ಭಗವಂತನ ದರ್ಶನದಿಂದ ಆತ ಧನ್ಯಭಾವಕ್ಕೆ ಒಳಗಾದನು. 'ಕಮಲದಳ ನಯನ, ಕಾಳಿಯ ಮಥನ, ಸತ್ಕಪೋಲ, ಕೇಯೂರಧರ, ಕೈರವಶ್ಯಾಮ, ಕೋಕನದ ಗೃಹೆಯ ರಮಣ, ಕೌಸ್ತುಭ ಶೋಭ, ಕಂಬು ಚಕ್ರಗದಾಬ್ಜ, ವಿಮಲಕರ, ಕಸ್ತೂರಿಕಾ ತಿಲಕ ಕಾಯುವುದು' ಎಂದು ಸ್ತುತಿಸಿದನು. ಹರಿಯು ಆತನನ್ನು ಕೃಪೆಯಿಂದ ಮೇಲಕ್ಕೆತ್ತಿದನು.

ಯೌವನಾಶ್ವನು ಚಿದ್ರೂಪನಾದ ಭಗವಂತನನ್ನು ಸಾರಥಿಯಾಗಿ ಮಾಡಿಕೊಂಡ ಮಹಾತ್ಮ ಅರ್ಜುನನನ್ನು ಕಂಡು ನಮಸ್ಕರಿಸಿ ಆತನ ಗುಣಗಳನ್ನು ಕೊಂಡಾಡಿದನು. ನಕುಲ ಸಹದೇವರನ್ನು ಗೌರವಿಸಿದನು.

ಕನಕಾಂಬರಗಳ ಕಾಂತಿಯಿಂದ, ಉಲಿವ ಹೊಂಗೆಜ್ಜೆಗಳ ಗಂಭೀರ ನಡಿಗೆಯ, ಬಿಳಿಯ ಬಣ್ಣದ, ಒಂದು ಕಿವಿಯಲ್ಲಿ ಕಪ್ಪುಬಣ್ಣ ಉಳ್ಳ ಯಜ್ಞಾಶ್ವವನ್ನು ಸುವೇಗನು ಹಿಡಿದುತಂದು ಧರ್ಮರಾಜನಮುಂದೆ ನಿಲ್ಲಿಸಿದನು. ಅಲ್ಲಿ ನೆರೆದಿದ್ದವರು ಆಶ್ಚರ್ಯದಿಂದ ಆ ಕುದುರೆಯನ್ನು ನೋಡಿದರು. ಯೌವನಾಶ್ವನು ತನ್ನ ಸಕಲೈಶ್ವರ್ಯವನ್ನು ಶ್ರೀಕೃಷ್ಣನಿಗೆ

ಅರ್ಪಿಸಿದನು. ಅವನ ಜೊತೆಗೆ ಬಂದಿದ್ದ ಸಮಸ್ತ ಜನರು ನೀಲಮೇಘಶ್ಯಾಮನ ಮಂಗಳಮೂರ್ತಿಯನ್ನು ಕಣ್ತುಂಬಿಕೊಂಡರು. ತಮ್ಮ ಜನ್ಮ ಸಾರ್ಥಕವಾಯಿತೆಂದು ಆನಂದಭಾಷ್ಪ ಸುರಿಸಿದರು.

ಯೌವನಾಶ್ವನ ರಾಣಿ ಪ್ರಭಾವತಿಯು ಕುಂತೀದೇವಿಗೆ ಕಾಣಿಕೆ ನೀಡಿ ನಮಸ್ಕರಿಸಿ, ದ್ರೌಪದಿಯ ಪಾದಕ್ಕೆ ಎರಗಿದಳು. ರಜತ ಗಿರಿಯಂತೆ ಗೌರಾಂಗದಿಂದ ಕಂಗೊಳಿಸುವ ತುರಂಗವನ್ನು ಧರ್ಮರಾಯನು ಸಂಭ್ರಮದಿಂದ ನೋಡಿದನು. ಅದನ್ನು ಸಾಹಸದಿಂದ ತಂದ ಮೇಘವರ್ಣ, ವೃಷಕೇತುಗಳನ್ನು ಮೆಚ್ಚಿ ತಬ್ಬಿಕೊಂಡನು.

ಶ್ರೀಕೃಷ್ಣನು ಯಜ್ಞಸಮಯಕ್ಕೆ ಹೇಳಿಕಳುಹಿಸಿದರೆ ಬರುವುದಾಗಿ ಧರ್ಮರಾಯನಿಗೆ ತಿಳಿಸಿದನು. ಅದುವರೆಗೆ ಯಜ್ಞಾಶ್ವವನ್ನು ಜಾಗರೂಕರಾಗಿ ಕಾಯ್ದು ಕೊಂಡಿರಿ ಎಂದು ಹೇಳಿ ದ್ವಾರಕೆಗೆ ಪ್ರಯಾಣ ಮಾಡಿದನು.

ಶ್ರೀಕೃಷ್ಣನು ಹೋದನಂತರ ಧರ್ಮರಾಯನು ಮುಂದಿನ ಕರ್ತವ್ಯವನ್ನರಿಯದೆ ಮಂಕು ಆವರಿಸಿದಂತಾದನು. ಆಗ ವೇದವ್ಯಾಸಮುನಿಗಳು ಬಂದು ಮುಂದಿನ ಕಾರ್ಯವನ್ನು ಎಚ್ಚರಿಸಿದರು. ಅವರ ಸೂಚನೆಯಂತೆ ದೊರೆಯು ಯಾಗಶಾಲೆಯನ್ನು ಕ್ರಮವಾಗಿ ರಚಿಸಿದನು. ಕುದುರೆಯನ್ನು ಅಲ್ಲಿರಿಸಿ ಅದರ ರಕ್ಷಣೆಗೆ ಚತುರಂಗ ಸೇನೆಯನ್ನು ನೇಮಿಸಿದನು.

ವ್ಯಾಸರು ತಿಳಿಸಿದಂತೆ ಮರುತ್ತರಾಜನ ಕಾಲದ ದ್ರವ್ಯವನ್ನು ತರಲು, ಅವರೊಡನೆ, ತಮ್ಮಂದಿರೊಡಗೂಡಿ ಹಿಮಾಲಯ ಪರ್ವತಕ್ಕೆ ಹೋದನು. ಕುಬೇರನನ್ನು ಪೂಜಿಸಿ, ಬಲಿ ಅರ್ಪಿಸಿ, ಶಾಂತಿ ಮಾಡಿ ಆ ದ್ರವ್ಯವನ್ನೆಲ್ಲ ಹಸ್ತಿನಾವತಿಗೆ ಸಾಗಿಸಿದನು. ಕುದುರೆ ಮತ್ತು ಅಪಾರ ದ್ರವ್ಯ ದೊರೆತುದರಿಂದ ಧರ್ಮರಾಯನು ನಿಶ್ಚಿಂತನಾದನು. ಯಜ್ಞದ ಆರಂಭಕ್ಕಾಗಿ ಶ್ರೀಕೃಷ್ಣನನ್ನು ಕರೆತರಲು ಭೀಮನನ್ನು ದ್ವಾರಕಿಗೆ ಕಳುಹಿಸಿಕೊಟ್ಟನು.

* * *

# ಅಶ್ವಮೇಧಯಾಗಕ್ಕೆ ಶ್ರೀಕೃಷ್ಣನಿಗೆ ಭೀಮನ ಆಹ್ವಾನ

ಭೀಮನು ಹಸ್ತಿನಾಪುರವನ್ನು ಬಿಟ್ಟು ಮಹಾಸಮುದ್ರವನ್ನು ನೋಡಿ ಹರ್ಷಿತನಾದನು. ದ್ವಾರಕಾಪಟ್ಟಣದ ಹತ್ತಿರಕ್ಕೆಬರಲು ಆ ರಾಜಮಾರ್ಗದಲ್ಲಿ ಜನಸಾಗರವನ್ನು ಕಂಡನು. ವಿಶಾಲಪಥದ ಎರಡೂ ಪಕ್ಕದ ಉಪ್ಪರಿಗೆ ಮನೆಗಳ ಮೇಲಿರುವ ಸ್ತ್ರೀಯರ ಕಡೆಗಣ್ಣಿನ ನೋಟವು ಕ್ಷೀರಸಮುದ್ರದ ಅಲೆಗಳಲ್ಲಿ ಮೇಲಕ್ಕೆ ನೆಗೆವ ಮರಿಮೀನಿನಂತೆ ಹೊಳೆಯುತ್ತಿದ್ದವು. ಆ ಉಪ್ಪರಿಗೆಯಲ್ಲಿ ಕಟ್ಟಿರುವ ಹಲವು ವರ್ಣಗಳಿಂದ ಕೂಡಿದ ರತ್ನತೋರಣಗಳು ಕಾಮನಬಿಲ್ಲಿನಂತೆ ಆಕರ್ಷಕವಾಗಿದ್ದವು. ಧನಿಕರ ಮೇಲ್ಮಹಡಿಯಲ್ಲಿ ಯುವತಿಯರು ಏಕಾಂತದಲ್ಲಿ ತಮ್ಮ ತನುಲತೆಯ ತಾಪ ಕಳೆದುಕೊಳ್ಳಲು ಕುಳಿತಿದ್ದರು. ಅವರ ಸ್ತನದಲ್ಲಿ ಲೇಪಿತವಾದ ಶ್ರೀಗಂಧ. ತಲೆಯಲ್ಲಿ ಮುಡಿದ ಹೂವಿನ ಸುವಾಸನೆಯನ್ನು ತಂಗಾಳಿಯು ಆ ರಾಜಮಾರ್ಗದಲ್ಲಿ ಬೀಸಿ ಆ ಸುಂದರಿಯರ ಸುಳುಹನ್ನು ಪಿಸುಣರಂತೆ ಮೆಲ್ಲಮೆಲ್ಲನೆ ಹರಡುತ್ತಿತ್ತು.

ಆ ದ್ವಾರಕಾಪುರದ ರತ್ನದಂಗಡಿಗಳಲ್ಲಿರುವ ಸುವರ್ಣರಾಶಿ ಕುಬೇರನು ತನ್ನ ನಿಧಿಯನ್ನು ಪ್ರದರ್ಶನಕ್ಕಿಟ್ಟಿರುವನೆಂಬಂತೆ ಗೋಚರಿಸುತ್ತಿತ್ತು.

ಶ್ರೀಕೃಷ್ಣನ ರಾಜಧಾನಿಯಾದುದರಿಂದ ಆತನ ರಾಣಿ ಶ್ರೀಲಕ್ಷ್ಮಿಯು ತನ್ನ ಸಕಲ ವೈಭವವನ್ನು ಅಲ್ಲಿ ತಂದು ಸುರಿದಿರುವಂತೆ ಆ ನಗರ ಶೋಭಿಸುತ್ತಿತ್ತು. ಭೀಮನು ಆ ನಗರದಲ್ಲಿ ಗಣಿಕಾ ಸಮೂಹವು ವಿವಿಧವಿಲಾಸಗಳಿಂದ ಮೆರೆಯುತ್ತಿದ್ದುದನ್ನು ಆಶ್ಚರ್ಯ ಚಕಿತನಾಗಿ ನೋಡಿದನು.

ಹಾಗೆ ನಗರವನ್ನು ವೀಕ್ಷಿಸುತ್ತ ಭೀಮನು ಶ್ರೀಕೃಷ್ಣನ ಅರಮನೆಯ ಬಾಗಿಲಿಗೆ ಬಂದನು. ಅಲ್ಲಿ ತಂತಮ್ಮ ಇಷ್ಟಾರ್ಥಸಿದ್ಧಿಗಾಗಿ ನಾನಾ ದಿಕ್ಕುಗಳಿಂದ ಬಂದ ಜನರು ಕಾಯುತ್ತಿದ್ದರು. ಅವನು ಆ ಅರಮನೆಗೆ ನಮಸ್ಕರಿಸಿದನು. ತನಗೂ ಕೃಷ್ಣ ದರ್ಶನವು ಲಭಿಸುವುದೆಂದು ಹರ್ಷದಿಂದ ರೋಮಾಂಚನಗೊಂಡನು.

ಪರಿವಾರವನ್ನು ಬಾಗಿಲಲ್ಲಿನಿಲ್ಲಿಸಿ ಒಳಹೊಕ್ಕನು. ಆ ಸಮಯಕ್ಕೆ ಶ್ರೀಕೃಷ್ಣನು ಊಟದಮನೆಸೇರಿ ತಾಯಿಯರು ಬಡಿಸುವ ದಿವ್ಯಾನ್ನವನ್ನು ಸೇವಿಸುತ್ತಿದ್ದನು. ಆತನ ಎಂಟು ಮಂದಿ ರಾಣಿಯರು ಚಾಮರ ಬೀಸಣಿಗೆಗಳಿಂದ ಉಪಚರಿಸುತ್ತಿದ್ದರು. ಭೀಮನು ಬಂದದ್ದನ್ನು ತಿಳಿದು ಶ್ರೀಕೃಷ್ಣನು ಎದ್ದುಹೋದನು. ಸಲುಗೆಯಿಂದ ಅವನ ಸೆರಗು ಹಿಡಿದೆಳೆದು ತನ್ನೊಡನೆ ಕುಳ್ಳಿರಿಸಿಕೊಂಡು ಊಟ ಮಾಡಿದನು. ಗಂಧ ತಾಂಬೂಲಾದಿಗಳಿಂದ ಉಪಚರಿಸಿದನು.

ಭೀಮನು ನೀಡಿದ ಅಶ್ವಮೇಧಯಾಗ ಆಹ್ವಾನವನ್ನು ಶ್ರೀಕೃಷ್ಣನು ಸಂತೋಷದಿಂದ ಸ್ವೀಕರಿಸಿದನು. ಕೃತವರ್ಮನನ್ನು ಕರೆದು ದ್ವಾರಕಾ ನಿವಾಸಿಗಳೆಲ್ಲರೂ ತಮ್ಮೊಡನೆ ಅಶ್ವಮೇಧಯಾಗ ನೋಡಲು ಹೊರಡುವಂತೆ ಡಂಗೂರ ಸಾರಿಸಲು ಹೇಳಿದನು. ಜೊತೆಗೂಡಿ ಬರುವವರಿಗೆ ಸೂಕ್ತ ವ್ಯವಸ್ಥೆ ಮಾಡಲು ತಿಳಿಸಿದನು. ವಸುದೇವ ಮತ್ತು ಬಲರಾಮ ಅಲ್ಲಿಯೇ ನಗರರಕ್ಷಣೆಗೆ ಉಳಿದರು.

ಶ್ರೀಕೃಷ್ಣನು ತಾಯಿಯರಾದ ದೇವಕಿ ಯಶೋದೆಯರೊಡನೆ, ಪಟ್ಟದ ರಾಣಿಯರಾದ ರುಕ್ಮಿಣಿ ಸತ್ಯಭಾಮೆಯರೊಡಗೂಡಿ ಹೊರಡಲು ಸಿದ್ಧನಾದನು. ಭಂಡಾರದಿಂದ ವಸ್ತ್ರಾಭರಣಾದಿ ಅಮೂಲ್ಯವಸ್ತುಗಳನ್ನು ತೆಗೆಯಿಸಿದನು. ಮಗ ಪ್ರದ್ಯುಮ್ನ, ಮಿತ್ರ ಬಾಂಧವರು, ಪುರೋಹಿತ. ಪುರಜನ ಸಮೇತ ಚತುರಂಗ ಬಲದೊಡನೆ ಭೀಮನೊಡಗೂಡಿ ಹಸ್ತಿನಾಪುರಕ್ಕೆ ಹೊರಟನು.

* * *

# ದಾನವ ಅನುಸಾಲ್ವ

ಶ್ರೀಕೃಷ್ಣನು ಹಸ್ತಿನಾವತಿಗೆ ಸಮೀಪದ ಗಂಗಾನದಿಯ ದಡದ ಒಂದು ಪ್ರಾಂತದಲ್ಲಿ ಸೈನ್ಯವನ್ನು ಬೀಡುಬಿಡಿಸಿದನು. ಅದರ ವಿಚಾರಣೆಗೆ ಭೀಮನನ್ನು ನೇಮಿಸಿದನು. ಧರ್ಮರಾಜನನ್ನು ಕಾಣಲು ಹೊರಟು ಬಂದನು. ರಾಜಬೀದಿಯ ಎರಡು ಪಕ್ಕದಲ್ಲಿಯ ಮನೆಗಳಮುಂದೆ ಸ್ತ್ರೀಯರು ಶ್ರೀಕೃಷ್ಣನ ದರ್ಶನಕ್ಕಾಗಿ ಕಾದು ನಿಂತರು. ಪುಷ್ಪ, ಗಂಧ ಅಕ್ಷತೆಗಳನ್ನು ಹಚ್ಚಿ ಆರತಿಬೆಳಗಿ ಧನ್ಯಭಾವದಲ್ಲಿ ಮಿಂದರು.

ಧರ್ಮರಾಜನು ತನ್ನ ಅರಮನೆಯ ಬಾಗಿಲಿಗೆ ಬಂದು ಶ್ರೀಕೃಷ್ಣನನ್ನು ಎದುರುಗೊಂಡನು. ಸುವರ್ಣರಥದಿಂದ ಇಳಿದ ಶ್ರೀಕೃಷ್ಣನು ಧರ್ಮರಾಜನಿಗೆ ವಂದಿಸಲು ತಲೆಬಾಗಿಸುವಷ್ಟರಲ್ಲಿ, ಆತ ದೂರವಾಗಿನಿಂತು ಶ್ರೀಕೃಷ್ಣನ ಪಾದಕ್ಕೆ ಎರಗಿದನು. ಶ್ರೀಕೃಷ್ಣನು ಅರಮನೆಯಲ್ಲಿ ಹಿರಿಯರಾದ ಧೃತರಾಷ್ಟ್ರಾದಿಗಳಿಗೆ ನಮಸ್ಕರಿಸಿ, ಕಿರಿಯರನ್ನುಆಲಂಗಿಸಿ ಅನಂದಪಟ್ಟನು. ಆತನ ಆತ್ಮೀಯಭಾವ ಕಂಡ ಧರ್ಮರಾಯನು,

'ಸ್ವಾಮಿ, ದೇವಕಿದೇವಿ ವಸುದೇವಾದಿಗಳು ಸೌಖ್ಯವೇ?'

'ಸೌಖ್ಯ'.

'ತಾವೊಬ್ಬರೇ ಬಂದಿರುವಿರಿ.'

'ಎಲ್ಲರೂ ಬಂದಿದ್ದಾರೆ'.

'ದರ್ಶನವಾಗುತ್ತಿಲ್ಲ.'

'ಗಂಗಾತೀರದಲ್ಲಿ ಭೀಮಸೇನನೊಡನಿದ್ದಾರೆ'.

ಧರ್ಮಜನು ಅರ್ಜುನನಮುಖ ನೋಡುತ್ತ:

'ನಾವು ಧನ್ಯರಾದೆವು. ಬಂಧುಗಳನ್ನು ನೋಡುವಭಾಗ್ಯ ದೊರೆಯಿತು'

'ಅರಸಿಯರು ಬಂದಿರುವರೇ?' ಎಂಬ ಪಾರ್ಥನ ಪ್ರಶ್ನೆಗೆ ಕೃಷ್ಣ ಉತ್ತರಿಸಿದ:

'ಹೌದು ಅರ್ಜುನ'.

ಸಂತಸಗೊಂಡ ಧರ್ಮರಾಯ ಅರ್ಜುನನಿಗೆ ಆಜ್ಞೆ ಮಾಡಿದ:

'ಅರ್ಜುನ, ಪಟ್ಟಣವನ್ನು ಧ್ವಜ ಪತಾಕೆಗಳಿಂದ ಸಿಂಗರಿಸು. ಅರಸಿಯರನ್ನು ಶೃಂಗರಿಸುವ ಬಾಲಕಿಯರು ಬರಲಿ. ಭವ್ಯವಾಗಿ ಬಂಧುಗಳನ್ನು ಸ್ವಾಗತಿಸೋಣ.'

ಯಜ್ಞಾಶ್ವದೊಡನೆ ಮೆರವಣಿಗೆ ಹೊರಟ ಧರ್ಮರಾಯನು ಯಾದವ ಸಮಸ್ತರನ್ನು ಗೌರವಿಸಿ ಹಸ್ತಿನಾಪುರಕ್ಕೆ ಬರಮಾಡಿಕೊಂಡನು. ಶ್ರೀಕೃಷ್ಣನ ಅನುಮತಿಯ ಪ್ರಕಾರ ಯಜ್ಞಾಶ್ವವನ್ನು ಅಲ್ಲಿ ತಂದು ನಿಲ್ಲಿಸಿದರು. ಸ್ತ್ರೀಯರೆಲ್ಲ ಅದರ ಲಕ್ಷಣವನ್ನು ಕಂಡು ಮೆಚ್ಚಿದರು. ವಸ್ತ್ರಾಭರಣ ಗಂಧಾಕ್ಷತೆಗಳಿಂದ ಪೂಜಿಸಿದರು.

ಸೌಭನಗರದ ಸಾಲ್ವನ ತಮ್ಮನಾದ ಅನುಸಾಲ್ವನು ಅಂತಹ ಸಂದರ್ಭವನ್ನೆ ಹೊಂಚುಹಾಕಿ ಕಾಯುತ್ತಿದ್ದನು. ತನ್ನ ಅಣ್ಣನನ್ನುಕೊಂದ ಕೃಷ್ಣನವಿರುದ್ಧ ದ್ವೇಷ ಸಾಧಿಸಲು ರಾಕ್ಷಸ ಮಾಯೆಯಿಂದ ಬಂದನು. ಕುದುರೆಯನ್ನು ಎತ್ತಿಕೊಂಡು ಹೋಗಿ ಕಟ್ಟಿಹಾಕಿದನು. ಅದರ ಸುತ್ತಲೂ ಹದ್ದಿನಾಕಾರದ ಸೈನ್ಯವನ್ನು ನಿರ್ಮಿಸಿದನು. ಯುದ್ಧಕ್ಕೆ ಸನ್ನದ್ಧನಾಗಿ ಆ ವ್ಯೂಹದಮಧ್ಯೆ ನಿಂತನು. ತನ್ನ ಆಪ್ತಮಂತ್ರಿ ಸುಧಾಕರನನ್ನು ಕರೆದು ಆಜ್ಞೆ ಮಾಡಿದನು:

'ಬೆಣ್ಣೆ ಕದ್ದು ತಿಂದು ಹೊಟ್ಟೆಯನ್ನು ಬೆಳೆಸಿಕೊಂಡಿರುವ ಕೃಷ್ಣನು ನನ್ನ ಅಣ್ಣನನ್ನು ಕೊಂದಿದ್ದಾನೆ. ಅವನ ದೊಡ್ಡಹೊಟ್ಟೆಯಲ್ಲಿ ಸುಣ್ಣವನ್ನು ಬಿರಿಹೊಯ್ದಂತೆ ಮಾಡಿ ಆ ದ್ವೇಷವನ್ನು ಸಾಧಿಸುತ್ತೇನೆ. ಯುದ್ಧಕ್ಕೆ ಸೈನ್ಯ ಸಿದ್ಧವಾಗಲಿ.'

ಚದುರಿದ ಹೆಂಗಸರಗುಂಪು, ಹೆದರಿದಮುನಿಗಳು, ತಲ್ಲಣಗೊಂಡ ಇತರರನ್ನು ಕಂಡು ಧರ್ಮರಾಜನು ಚಿಂತೆಗೀಡಾಗಿ ಶ್ರೀಕೃಷ್ಣನನ್ನು ಕೇಳಿದನು:

'ಯಾರೀ ರಾಕ್ಷಸ?'

'ಅನುಸಾಲ್ವ'

'ಕುದುರೆ ಅಪಹರಿಸಲು ಕಾರಣ?'

'ನನ್ನ ಮೇಲಿನ ದ್ವೇಷ'

'ಪರಿಹಾರ?'

'ನಮ್ಮ ಸಾಹಸಿ ಯೋಧರಿಗೆ ನೀಡುವ ವೀಳ್ಯೆ' ಎಂದು ನುಡಿದ ಶ್ರೀಕೃಷ್ಣನು ಪಾಂಡವ, ಯಾಧವ ಶೂರ ಸಾಹಸಿಗಳತ್ತ ಮುಖಮಾಡಿ ಆಹ್ವಾನನೀಡಿದನು:

'ಕುದುರೆ ಬಿಡಿಸಿಕೊಂಡು ಬರುವ ಶೂರರು ಬಂದು ತಾಂಬೂಲ ಸ್ವೀಕರಿಸಿ'. ಇತರ ಶೂರರು ಸುಮ್ಮನಿರಲು ಶ್ರೀಕೃಷ್ಣನ ಮಗ ಪ್ರದ್ಯುಮ್ನನು ಎದ್ದುನಿಂತು 'ಕುದುರೆ ಬಿಡಿಸಿ ತರುವೆ' ಎಂದು ಪ್ರತಿಜ್ಞೆ ಮಾಡಿ ತಾಂಬೂಲ ಸ್ವೀಕರಿಸಿದನು. ಅನಂತರ ಕರ್ಣನ ಮಗ ವೃಷಕೇತುವು ಕೃಷ್ಣನ ಪಾದಕ್ಕೆ ಎರಗಿ 'ಅನುಸಾಲ್ವನನ್ನು ಹಿಡಿದು ತರುವೆ. ಅನುಮತಿ ನೀಡಿ' ಎಂದನು. ಅವನನ್ನು ಆಲಂಗಿಸಿಕೊಂಡ ಶ್ರೀಕೃಷ್ಣ ಆತನಿಗೂ ತಾಂಬೂಲವನ್ನು ಕೊಟ್ಟು ಕಳುಹಿಸಿದನು.

ಪ್ರದ್ಯುಮ್ನನ ಸಾರಥಿಯು ರತ್ನಗಳನ್ನುಕೆತ್ತಿರುವ ಚಿನ್ನದಪ್ರಭೆ ಹೊಂದಿ ಸೂರ್ಯ ಮಂಡಲವನ್ನು ಹಾಸ್ಯ ಮಾಡುವಂತಹ ರಥಕ್ಕೆ ಕುದುರೆಯನ್ನು ಹೂಡಿದನು. ಯೋಗಿಗಳನ್ನು ಗೆಲ್ಲುವ ಸಾಮರ್ಥ್ಯದ ಮೀನಿನಧ್ವಜವನ್ನು ಏರಿಸಿದನು. ಅದನ್ನು ಏರಿ ಪ್ರದ್ಯುಮ್ನನು ಯುದ್ಧಕ್ಕೆ ಹೊರಟನು. ಅನುಸಾಲ್ವನು ಅಡ್ಡಗಟ್ಟಲು ಪ್ರದ್ಯುಮ್ನನು ತನ್ನ ಐದು ಪುಷ್ಪ ಬಾಣಗಳಿಂದ ಅವನನ್ನು ಹೊಡೆದನು. ಅದನ್ನು ಹೀಯಾಳಿಸುತ್ತ ಅನುಸಾಲ್ವನು 'ನಾನು ಯೋಗಿಯೂ ಅಲ್ಲ. ಅಗಲಿಕೆ ಹೊಂದಿದ ವಿಯೋಗಿಯೂ ಅಲ್ಲ. ನಿನ್ನ ಕಬ್ಬಿನಬಿಲ್ಲು, ತುಂಬಿಯಬಿಲ್ಲಿನ ಹಗ್ಗ, ರತಿಕ್ರೀಡೆಗೆಳಸುವಂತೆ ಸೆಳೆಯುವ ಸುಕುಮಾರ ಪುಷ್ಪಬಾಣಕ್ಕೆ ಮರುಳಾಗುವವನಲ್ಲ' ಎಂದು ಹೇಳಿ ಬಾಣ ಪ್ರಯೋಗಿಸಿದನು. ಅದು ಪ್ರದ್ಯುಮ್ನನ ಎದೆಗೆ ನಾಟಿತು. ಆತ ಮೂರ್ಛೆ ಹೊಂದಿದನು.

ಸಾರಥಿಯು ರಥವನ್ನು ಹಿಂದಿರುಗಿಸಿ ಕೃಷ್ಣನ ಬಳಿಗೆ ತಂದು ನಿಲ್ಲಿಸಿದನು. ಮಗನಸ್ಥಿತಿ ಕಂಡು 'ಎಲಾ ಹೇಡಿ. ನಿನ್ನನ್ನೇನು ಮಾಡಲಿ?' ಎಂದು ನಿಂದಿಸಿ ಎಡಗಾಲಿನ ತುದಿಯಿಂದ ಅವನನ್ನು ಒದೆದನು. ಭೀಮನು ಮಧ್ಯೆ ಪ್ರವೇಶಿಸಿ 'ಮೂರ್ಛಿತನಾದ ಮಾತ್ರಕ್ಕೆ ಸೋತ ಹಾಗಲ್ಲ. ಕಾಲಿನಿಂದ ಒದೆದುದೇಕೆ' ಎಂದು ಪ್ರಶ್ನಿಸಿ 'ವೃಷಕೇತುವಿಗೆ ಸಹಾಯವಾಗಿ ಸೇನೆಕಳುಹಿಸಿ' ಎಂದನು. ಆಗ ಕೃಷ್ಣನು 'ನೀನೇ ಹೋಗು' ಎಂದು ಹೇಳಲು ಭೀಮನು ಸಂತೋಷದಿಂದ ಸಿಂಹನಾದ ಮಾಡುತ್ತ ವೈರಿಯ ಚತುರಂಗಸೇನೆಯನ್ನು ಸಂಧಿಸಿದನು. ಭೀಮನು ಯುದ್ಧ ಭೂಮಿಯಲ್ಲಿ ಮುನ್ನುಗ್ಗುತ್ತಿರಲು ವೃಷಕೇತು.

'ತಂದೆ, ನಾನು ಮೊದಲು ತಾಂಬೂಲಪಡೆದು ಯುದ್ಧಕ್ಕೆ ಬಂದಿರುವೆ. ನನ್ನಹಣ್ಣಿಗೆ ನೀವು ಆಸೆ ಪಡುವುದೆ?'

'ತಂದೆಯು ಸೊಗಸಾದ ಹಣ್ಣನ್ನು ಕೈಯಲ್ಲಿ ಹಿಡಿದು ತಿನ್ನಿಸದಿದ್ದರೆ ಮಗುವೇ ಹೇಗೆತಿನ್ನುವನು?'

'ತಂದೆ ನಿಮ್ಮಸವಿರುಚಿಯ ಮುದ್ದು ದೊಡ್ಡದು.'

'ಯುದ್ಧಕಲೆ ನಿನಗೆ ಕಲಿಸುವೆ'.

ವೃಷಕೇತುವು ಕಾಡಿನ ಸಿಡಿಲಗರ್ಜನೆಯಂತೆ ಶತ್ರು ಸೈನ್ಯದ ಮೇಲೆ ಬಿದ್ದನು. ವೃಷಭಧ್ವಜನಾದ ಆತ ಯಾರೆಂದು ಯೋಚಿಸುವಷ್ಟರಲ್ಲಿ ಅನುಸಾಲ್ವನ ದೇಹವನ್ನು ಆತನ ಬಾಣಗಳು ಹೊಕ್ಕವು. ಚೇತರಿಸಿಕೊಂಡ ಅನುಸಾಲ್ವನು ಪ್ರಯೋಗಿಸಿದ ಬಾಣ ವೃಷಕೇತುವಿನ ಎದೆ ಹೊಕ್ಕಿತು. ಆತ ಮೂರ್ಛಿತನಾದನು. ರೋಷಗೊಂಡ ಭೀಮ ತನ್ನ ಗದೆಯಿಂದ ವೈರಿಯ ರಥವನ್ನು ಅಪ್ಪಳಿಸಿದನು. ಅನುಸಾಲ್ವನು ರಥದಿಂದ ಹಾರಿಬಿದ್ದನು. ಭೀಮನು ಶತ್ರುಸೇನೆಯ ರಕ್ತದಕೋಡಿ ಹರಿಸಿದನು. ಹೆಣದಮೆದೆ ಹಾಕಿದನು. ಗದೆಯಿಂದ ಏರಿಬರುವ ಭೀಮನಮೇಲೆ ಅನುಸಾಲ್ವ ಬಾಣ ಪ್ರಯೋಗಿಸಿದನು. ಅದು ಭೀಮನ ಎದೆನಾಟಿತು. ಭೀಮ ಬಲಗುಂದಿದ್ದನ್ನು ಕಂಡು ಶ್ರೀಕೃಷ್ಣ ಕೋಪಗೋಂಡು ತಾನೇ ಯುದ್ಧಕ್ಕೆ ಹೊರಟು ಬಂದನು. ಅನುಸಾಲ್ವನಿಗೆ ಶ್ರೀಕೃಷ್ಣನ ಧನುಸ್ಸು ಕಾಮನಬಿಲ್ಲಿನಂತೆ, ಪ್ರಯೋಗಿಸುವ ಬಾಣಗಳು ಮಳೆ ಹನಿಯಂತೆ, ಶರೀರ ಕೃಷ್ಣ ಮೇಘದಂತೆ ಕಂಡಿತು. ಅನುಸಾಲ್ವನ ಬಾಣ ಪ್ರಯೋಗಕ್ಕೆ ಕೃಷ್ಣನ ರಥಾಶ್ವಗಳು ನೊಂದವು. ಸಾರಥಿ ಯುದ್ಧಭೂಮಿ ಬಿಟ್ಟು ದೂರವಾಗಿ ಪಕ್ಕಕ್ಕೆ ಹೋದನು. ಶ್ರೀಕೃಷ್ಣನು ಕಾಣದಾಗಲು ತನ್ನ ವೈರಸಾಧನೆ ಹೇಗೆ ಎಂದು ಅನುಸಾಲ್ವ ಚಿಂತಾಕ್ರಾಂತನಾದನು.

ಶ್ರೀಕೃಷ್ಣನು ಕುದುರೆಗಳನ್ನು ವಿಶ್ರಾಂತಿಗೊಳಿಸಿದನು. ಮತ್ತೆ ಯುದ್ಧಭೂಮಿಗೆ ಬಂದನು. ಅನುಸಾಲ್ವನ ಮೇಲೆ ಬಾಣ ಪ್ರಯೋಗಿಸಿದನು. ಅದನ್ನು ಸಹಿಸಿಕೊಂಡ ಅನುಸಾಲ್ವನು ಹೂಡಿದ ಬಾಣವು ನೀಲಗಿರಿಯನ್ನು ಸಿಡಿಲು ಬಂದೆರಗಿದಂತೆ ಶ್ರೀಕೃಷ್ಣನ ಎದೆಗೆ ತಾಗಿತು. ಕೃಷ್ಣನು ಮೂರ್ಛೆಗೊಂಡನು. ದಾರುಕನು ರಥವನ್ನು ಪಟ್ಟಣಕ್ಕೆ ಹಿಂದಿರುಗಿಸಿ ತಂದನು. ಯಾದವರ ಸೈನ್ಯ ಹಿಮ್ಮೆಟ್ಟಿತು. ಸತ್ಯಭಾಮೆಯು ಶ್ರೀಕೃಷ್ಣನನ್ನು 'ರಾಕ್ಷಸನಿಂದ ಪ್ರಾಣದಾನ ಮಾಡಿಸಿಕೊಂಡು ಹಿಂದಿರುಗಿರುವೆ. ನಿನ್ನ ಮರ್ಮ ತಿಳಿದ ಅವರು ಏನು ಮಾಡಿದರೂ ಮಾಡಬಹುದು. ನೀನು ಪ್ರದ್ಯುಮ್ನನನ್ನು ಭಂಗಿಸಿದೆ. ನಿನ್ನ ಪರಾಕ್ರಮ ನನಗೆ ತಿಳಿಯದೆ?' ಎಂದು ಹೀಯಾಳಿಸಿದಳು. ಶ್ರೀಕೃಷ್ಣನು ಎಚ್ಚತ್ತು, ಹೆಂಡತಿಯ ಮಾತಿಗೆ ನಾಚಿಕೆ ಪಟ್ಟನು. ಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಪುನಃ ಯುದ್ಧ ಸನ್ನದ್ಧನಾಗಿ ಹೊರಟನು.

ಅಷ್ಟರಲ್ಲಿ ವೃಷಕೇತುವು ಅನುಸಾಲ್ವನಿಗೆ ಎದುರಾಗಿ ಪ್ರತಿಜ್ಞೆ ಮಾಡಿದನು.

'ಕೃಷ್ಣನನ್ನು ಹಿಮ್ಮೆಟ್ಟಿಸಿದರೆ ಏನಾಯ್ತು; ನನ್ನಿಂದ ನೀನು ಬದುಕಿದರೆ ನಾನು ಕರ್ಣನ ಮಗನಲ್ಲ'.

'ನಿನ್ನ ಶೌರ್ಯ ಒತ್ತಟ್ಟಿಗಿರಲಿ. ಆ ಬೆಣ್ಣೆ ಕಳ್ಳನೆಲ್ಲಿ?'

'ಆತನು ಅಪಾರಮಹಿಮ. ಅದನ್ನು ನೀನು ತಿಳಿಯಲಾಗದು.'

'ತಾಟಕೆ ಹೆಂಗಸನ್ನು, ಧೇನುಕಾಸುರ ಕತ್ತೆಯನ್ನು, ಕಾಕಾಸುರ ಹಕ್ಕಿಯನ್ನು, ಕಾಳೀಸರ್ಪವನ್ನು ಹೊಡೆದ ಮಾತ್ರದಿಂದಲೇ ಗೊಲ್ಲನು ಯುದ್ಧ ಭಟನಾಗುವನೆ?'

'ಅದು ಆತನ ಬಾಲಲೀಲೆ.'

'ಓಹ್ ಬಾಲಲೀಲೆ! ಇರಲಿ. ಈಗ ನೀನು ನನ್ನೊಡನೆ ಯುದ್ಧ ಮಾಡುವ ಉದ್ದೇಶವೇನು' ಎಂದು ಪ್ರಶ್ನಿಸುತ್ತ ಬಾಣ ಪ್ರಯೋಗ ಮಾಡಿದನು. ಅದನ್ನು ತುಂಡರಿಸುತ್ತ ವೃಷಕೇತು:

'ಎಲವೊ ರಾಕ್ಷಸನೆ. ಲೀಲಾ ಮಾನುಷನಾದ ಕೃಷ್ಣನನ್ನು ನೀನು ತಿಳಿಯದಿದ್ದರೆ ಏನಾಯಿತು? ಆತನು ದುಷ್ಟರನ್ನು ಶಿಕ್ಷಿಸದೆ ಬಿಡನು' ಎಂದು ಹೇಳುತ್ತ ಬಾಣಪ್ರಯೋಗ ಮಾಡಿದನು. ಈರ್ವರೂ ಸಾಹಸದಿಂದ ಕಾದಿದರು.

ವೃಷಕೇತುವಿನ ಹಸ್ತಕೌಶಲದ ಬಾಣ ಪ್ರಯೋಗದಿಂದ ಅನುಸಾಲ್ವನು ಬಲಗುಂದಿದನು. ಅವನ ಸೈನ್ಯವು ಮರದತುಂಡಿನಂತೆ ನೆಲಕ್ಕೆ ಬಿದ್ದುಹೋಯಿತು. ವೃಷಕೇತುವು ಅನುಸಾಲ್ವನ ರಥದ ಹತ್ತಿರಕ್ಕೆ ಬಂದು ಅವನನ್ನು ಸೆರೆಹಿಡಿದು ಶ್ರೀಕೃಷ್ಣನ ಬಳಿಗೆ ಬಂದು ಕೈಮುಗಿದನು. ಶ್ರೀಕೃಷ್ಣನು ಆತನ ಪರಾಕ್ರಮವನ್ನು ಹೊಗಳಿದನು. ದೊರೆ ಉಗ್ರಸೇನನು ಅವನನ್ನು ಆದರಿಸಿದನು.

ಯುದ್ಧ ಆಯಾಸವು ಪರಿಹಾರವಾಗಿ ಅನುಸಾಲ್ವನು ಎಚ್ಚರಗೊಂಡು ಕಣ್ಣು ಬಿಟ್ಟು ನೋಡಿದನು. ದ್ವೇಷಬುದ್ಧಿ ಪಲ್ಲಟವಾಗಿ, ಜ್ಞಾನೋದಯ ಉಂಟಾಯಿತು. ಶ್ರೀಕೃಷ್ಣನ ದಿವ್ಯಮೂರ್ತಿಯನ್ನು ತದೇಕಚಿತ್ತದಿಂದ ನೋಡುತ್ತ:

'ಸ್ವಾಮಿಯೇ, ನೀನು ಯಾರೆಂದು ತಿಳಿಯದೆ ಅಜ್ಞಾನವೆಂಬ ಮಾಯಾಪಾಶದಲ್ಲಿ ಬಿದ್ದಿರುವೆನು. ಈಗ ನಿನ್ನ ಮರೆಹೊಕ್ಕಿರುವೆನು. ನನ್ನನ್ನು ಉದ್ಧರಿಸು' ಎಂದು ಕೇಳಿಕೊಳ್ಳಲು, ಆ ನುಡಿ ಕೇಳಿದ ವೃಷಕೇತು ಕೋಪದಿಂದ:

'ಶ್ರೀಕೃಷ್ಣನನ್ನು ನಿಂದಿಸಿ ಆಡಿದ ನಿನ್ನ ಶೌರ್ಯ ಏನಾಯಿತು? ನಿನ್ನನ್ನು ಸುಡಬೇಕು.'

'ಎಲೆ ಮರುಳನಾದ ವೃಷಕೇತುವೆ; ದ್ವೇಷದಿಂದ ನಿಂದಿಸಿದರೂ, ಸಂತೋಷದಿಂದ ಮನಸಾರೆ ಸ್ತುತಿಸಿದರೂ; ನಿತ್ಯ ತೃಪ್ತನೂ, ರಾಗದ್ವೇಷರಹಿತನೂ, ಶರಣಾಗತಿ ರಕ್ಷಕನೂ ಆದ ಶ್ರೀಕೃಷ್ಣನು ಕೈಬಿಡದೆ ರಕ್ಷಿಸುವನು. ಯುದ್ಧಾವೇಶದಲ್ಲಿ ಮೈಮರೆತು ದೂಷಿಸಿದ್ದರೂ ನನ್ನನ್ನು ಶ್ರೀಕೃಷ್ಣನು ಉದ್ಧರಿಸುವನು' ಎಂದು ಹೇಳುತ್ತ ಶ್ರೀಕೃಷ್ಣನಿಗೆ ಶರಣಾದನು.

ಶ್ರೀಕೃಷ್ಣನು ನಗುತ್ತ ಪ್ರೀತಿಯಿಂದ ಅನುಸಾಲ್ವನನ್ನು ಬಾಚಿ ತಬ್ಬಿಕೊಂಡು 'ನೀನು ಇಂದಿನಿಂದ ದೇವತೆಗಳಿಗೆ ಶತ್ರುವೆನಿಸಿಕೊಳ್ಳದೆ ಧರ್ಮರಾಯನ ಯಜ್ಞದ ಸಹಾಯಕ್ಕೆ ನಿಲ್ಲು. ನಮ್ಮ ಜೊತೆಯಲ್ಲಿರು' ಎಂದು ಹೇಳಿ ಆದರಿಸಿದನು.

ಪ್ರದ್ಯುಮ್ನನು ತನ್ನ ಮಾತಿನಂತೆ ಉಳಿದ ಸೈನ್ಯವನ್ನುಗೆದ್ದು ಕುದುರೆಯನ್ನು ಬಿಡಿಸಿ ಕೊಂಡುಬಂದು ಶ್ರೀಕೃಷ್ಣನಮುಂದೆ ನಿಲ್ಲಿಸಿದನು.

ಜಯಘೋಷಗಳಾದವು. ಶ್ರೀಕೃಷ್ಣ ಮತ್ತು ಪಾಂಡವರು ಜಯದಿಂದ ಹರ್ಷಚಿತ್ತರಾಗಿ ಸಕಲ ಸ್ತ್ರೀಪುರುಷರೊಡನೆ ಹಸ್ತಿನಾಪುರವನ್ನು ಪ್ರವೇಶಿಸಿದರು. ಧರ್ಮರಾಜನು ಅವರೆಲ್ಲರನ್ನೂ ಸತ್ಕರಿಸಿದನು. ತನ್ನ ಮನೆಯಲ್ಲಿ ಶ್ರೀಕೃಷ್ಣನನ್ನು ಉಪಚರಿಸಿದನು.

* * *

# ನೀಲಧ್ವಜ

ಪಾಂಡವರು ಯಾಗಶಾಲೆಯನ್ನು ಶಾಸ್ತ್ರೋಕ್ತ ರೀತಿಯಲ್ಲಿ ಗಂಗಾನದಿಯ ತೀರದಲ್ಲಿ ಕಟ್ಟಿದಾಗ ವಸಂತಕಾಲ ಪ್ರಾರಂಭವಾಗಿತ್ತು. ಯಾಗಕ್ಕೆ ಪ್ರಕೃತಿಯ ಸಹಜ ಉತ್ಸಾಹ ವೈಭವವು ಮೇಳೈಸಿತ್ತು. ಅದು ಪಾಂಡವರ ಒಳಿತಿನ ನಡೆಗೆ ಸಾಕ್ಷಿಯಂತಿತ್ತು. ಚೈತ್ರನೆಂಬರಾಜ ಮಾಗಿಎಂಬ ಶತ್ರುರಾಜನನ್ನು ಸೋಲಿಸಿ ಚಿಗುರೆಂಬ ತೋರಣ ಕಟ್ಟಿದ್ದನು. ಶುಭ್ರ ಬೆಳದಿಂಗಳೆಂಬ ಅವನ ಯಶಸ್ಸು ಎಲ್ಲಕಡೆವ್ಯಾಪಿಸಿತ್ತು. ಅದು ಧರ್ಮರಾಜನ ಯಶಸ್ಸನ್ನು ಧ್ವನಿಸುತ್ತಿತ್ತು.

ಶ್ರೀಕೃಷ್ಣ ಮತ್ತು ವ್ಯಾಸ ಮೊದಲಾದ ಋಷಿಗಳ ಅಪ್ಪಣೆಯಂತೆ ಧರ್ಮರಾಜನು ಚೈತ್ರ ಶುದ್ಧ ಪೌರ್ಣಮಿಯ ದಿನದಂದು ಅಶ್ವಮೇಧಯಾಗಕ್ಕೆ ಯಜಮಾನನಾಗಿ ದೀಕ್ಷೆಯನ್ನು ಕೈಕೊಂಡನು. ಯಜ್ಞ ಕುದುರೆಯನ್ನು ಪೂಜಿಸಿದನು. ಚಿನ್ನದ ಹಲಗೆಯಲ್ಲಿ 'ಇದು ಚಂದ್ರವಂಶದಲ್ಲಿ ಪ್ರಖ್ಯಾತನಾದ ಪಾಂಡುರಾಜನ ಮಗನಾದ ಧರ್ಮರಾಜನ ಯಜ್ಞಾಶ್ವ. ಇದನ್ನು ಶೂರರು ಯಾರಾದರೂ ತಮಗೆ ಶಕ್ತಿಯಿದ್ದರೆ ಕಟ್ಟಿಕೊಳ್ಳಬಹುದು' ಎಂದು ಬರೆಸಿ ಆ ಕುದುರೆಯ ಹಣೆಗೆ ಕಟ್ಟಿದನು. ವಸ್ತ್ರಾಭರಣಗಳಿಂದ, ಗಂಧ, ಪುಷ್ಪ ಮಂತ್ರಾಕ್ಷತೆಗಳಿಂದ ಪೂಜಿಸಿ ಸಂಚಾರಾರ್ಥವಾಗಿ ಬಿಟ್ಟನು.

ಆ ಯಾಗದ ಅವಧಿಯಲ್ಲಿ ಅಸಿಪತ್ರವ್ರತವನ್ನು ಆಚರಿಸಿದನು. ಅದು ದಂಪತಿಗಳು ಸುಖಸೌಖ್ಯದಿಂದ ಏಕಾಂತವಾದ ಶಯ್ಯಾಗೃಹದಲ್ಲಿ ದಿವ್ಯ ಮಂಚದ ಮೇಲೆ ಮಲಗಿದ್ದರೂ, ಕೂಡದೆ ವೈರಾಗ್ಯವನ್ನು ಸಾಧಿಸುವ ವ್ರತ.

ಅಶ್ವಮೇಧಯಾಗವು ಒಂದು ವರ್ಷದ ಅವಧಿಯಲ್ಲಿ ಮುಗಿಯುವಂತಹದು. ಆ ಯಾಗಕ್ಕೆ ಶ್ರೀಕೃಷ್ಣನ ಆಜ್ಞೆಯಂತೆ ಕುದುರೆಯ ಬೆಂಗಾವಲಿಗಾಗಿ ಅರ್ಜುನನೊಡನೆ ಮಹಾಪರಾಕ್ರಮಿಗಳು ಹೊರಟರು. ಚತುರಂಗಸೇನೆಯೂ ಸಿದ್ಧವಾಯಿತು. ಅರ್ಜುನನು ಕಾರ್ಯಸಿದ್ಧಿಗಾಗಿ ಗಣಪತಿಯನ್ನು ಪೂಜಿಸಿದನು.

ಹಿರಿಯರ ಋಷಿಗಳ ಆಶೀರ್ವಾದವನ್ನು ಪಡೆದನು. ಸ್ತ್ರೀಯರ ಹರಕೆಯೊಡನೆ ಶುಭ ಮುಹೂರ್ತದಲ್ಲಿ ಹೊರಟನು. ವೃಷಕೇತುವು ಅವರೊಡನೆ ಹೋಗುವಾಗ ಆತನ ಹೆಂಡತಿ ಬಂದು ಹರಸಿ ಆರತಿಎತ್ತಿದಳು. ಆತ ಅವಳ ಮುಂಗುರುಳುಗಳನ್ನು ತೀಡಿ, ತನ್ನ ಉಂಗುರವನ್ನು ಅವಳಿಗೆನೀಡಿ ಸಂತೈಸಿದನು.

ಶ್ರೀಕೃಷ್ಣನು ತನ್ನ ಯಾದವ ಸೈನ್ಯವನ್ನು ಅರ್ಜುನನ ವಶಕ್ಕೆ ಒಪ್ಪಿಸಿದನು. ತನ್ನಮಗ ಪ್ರದ್ಯುಮ್ನನನ್ನು ಆ ಸೈನ್ಯಕ್ಕೆ ಸೇನಾಪತಿಯಾಗಿ ನೇಮಿಸಿದನು. ವೃಷಕೇತು, ಸುವೇಗ, ಅನುಸಾಲ್ವರನ್ನು ಅವರಿಗೆ ಸಹಾಯಕರನ್ನಾಗಿ ಗೊತ್ತುಮಾಡಿದನು. ತಾನು ದ್ವಾರಕೆಗೆ ಪ್ರಯಾಣ ಮಾಡಿದನು. ಯಜ್ಞಾಶ್ವವು ದಕ್ಷಿಣದಿಕ್ಕಿಗೆ ತನ್ನಇಚ್ಛೆಯರೀತಿ ಹೊರಟಿತು. ಆ ಅಶ್ವದ ಕಾವಲಿಗಿರುವ ಚತುರಂಗಬಲವು ಅದನ್ನು ಅನುಸರಿಸಿ ಮುನ್ನಡೆಯಿತು.

ಆ ಕುದುರೆಯು ದಕ್ಷಿಣ ದಿಕ್ಕಿನಲ್ಲಿರುವ ಮಾಹಿಷ್ಮತೀಪುರದ ಹೊರಗಡೆಯಿರುವ ಉದ್ಯಾನವನವನ್ನು ಸೇರಿತು. ಆ ಪುರವನ್ನು ನೀಲಧ್ವಜ ಎಂಬ ರಾಜನು ಆಳುತ್ತಿದ್ದನು. ಅವನ ಮಗನಾದ ಪ್ರವೀರನು ತನ್ನ ಹೆಂಡತಿ ಮದನಮಂಜರಿಯೊಡನೆ ವಿಹಾರಾರ್ಥವಾಗಿ

ಬಂದಿದ್ದನು. ಆಕೆಯು ಸಖಿಯರು ಅವರ ಜೊತೆಗಿದ್ದು ವಿನೋದದಿಂದ ಅಲ್ಲಿ ಸುತ್ತಾಡುತ್ತಿದ್ದರು. ಆಗ ಅಲ್ಲಿ ಅವರಿಗೆ ಆಶ್ಚರ್ಯಕರವಾಗಿ ಕಾಣುವ ಸುಂದರವಾಗಿರುವ ಯಜ್ಞಾಶ್ವ ಕಂಡಿತು. ಅದನ್ನು ನೋಡುವ ಕುತೂಹಲದಿಂದ ಅವರು ಅದರ ಸುತ್ತಲೂ ಸುತ್ತಿಕೊಂಡರು. ಮದನಮಂಜರಿಯು ಅದರ ಹಣೆಗೆ ಕಟ್ಟಿದ ಚಿನ್ನದ ಪಟ್ಟಿಯಲ್ಲಿರುವ ಸಂಗತಿಯನ್ನು ತನ್ನಪತಿ ಪ್ರವೀರನಿಗೆ ಓದಿ ಹೇಳಿದಳು. ಕೋಪಗೊಂಡ ಪ್ರವೀರನು 'ಆ ಧರ್ಮರಾಜ ನನ್ನ ಪರಾಕ್ರಮವನ್ನು ನೋಡಲಿ' ಎಂದು ಕುದುರೆಯನ್ನು ಕಟ್ಟಿಹಾಕಿದನು. ತನ್ನಪರಿವಾರದೊಡನೆ ಅರ್ಜುನನೊಡನೆ ಯುದ್ಧಕ್ಕೆ ಸಿದ್ಧನಾದನು.

ನೀಲಧ್ವಜನ ಮಗಳು ಪೂರ್ವದಲ್ಲಿ ಮೂರು ಲೋಕದಲ್ಲಿ ತನಗೆ ಸುಂದರರಾದವರು ಯಾರಿರುವರೆಂದು ಹುಡುಕಿ ನೃಪವರ್ಗದಲ್ಲಿ ತನಗೆ ಅನುರೂಪನಾದವನನ್ನು ಕಾಣದಾದಳು. ಆಗ್ನಿಯನ್ನು ಕುರಿತು ತಪಸ್ಸನ್ನು ಮಾಡಿ ಅವನನ್ನು ಮೆಚ್ಚಿಸಿದಳು. ಆತ ಆಕೆಯನ್ನು ಪತಿಯಾಗಿ ವರಿಸಿ ಆ ಪುರದಲ್ಲಿದ್ದು ಅದನ್ನು ರಕ್ಷಿಸುತ್ತಿದ್ದನು. ಅದೇ ಬಲದಿಂದ ಪ್ರವೀರ ಯಜ್ಞಾಶ್ವವನ್ನು ಹಿಡಿದು ಕಟ್ಟಿದನು ಎಂದು ಜೈಮಿನಿಯು ಜನಮೇಜಯನಿಗೆ ಹೇಳಿದನು.

ಯುದ್ಧಕ್ಕೆ ಸನ್ನದ್ಧನಾದ ಪ್ರವೀರ ಬಿಲ್ಲಿಗೆ ಬಾಣ ಹೂಡಿದನು. ಅರ್ಜುನನ ಸೂಚನೆಯಂತೆ ಸೇನೆ ಮುನ್ನುಗ್ಗಿತು. ಅದರ ತುಳಿತದಧೂಳು ಅಕಾಶವನ್ನೆಲ್ಲ ಆವರಿಸಿ ಸೂರ್ಯನಕಾಂತಿಯನ್ನು ಅಡಗಿಸಿತು. ರಣವಾದ್ಯ ಎಲ್ಲದಿಕ್ಕಿಗೂ ವ್ಯಾಪಿಸಲು ದಿಕ್ಪಾಲಕರು ಧೈರ್ಯಗೆಟ್ಟರು. ಪುರದಜನರು ಹೆದರಿದರು. ಅಂಜಿ ಹಿಮ್ಮೆಟ್ಟದೆ ಪ್ರವೀರನೊಬ್ಬನೇ ಜಾಗರೂಕನಾಗಿ ಸಾಹಸದಿಂದ ಪಾರ್ಥನ ಸೇನೆಯನ್ನು ಎದುರಿಸಿದನು. ಅದನ್ನು ತಿಳಿದ ನೀಲಧ್ವಜ ಸೇನಾಸಮೇತನಾಗಿ ಯುದ್ಧರಂಗಕ್ಕೆ ಬಂದನು. ಯುದ್ಧದಲ್ಲಿ ನೀಲಧ್ವಜನ ಸೇನೆಯು ಕೃತವರ್ಮ, ಅನುಸಾಲ್ವ, ಸುವೇಗ, ವೃಷಕೇತು, ಸಾತ್ಯಕಿ, ಯೌವನಾಶ್ವ, ಅನಿರುದ್ಧ, ಪ್ರದ್ಯುಮ್ನ ಮೊದಲಾದವರ ಪರಾಕ್ರಮವನ್ನು ತಗ್ಗಿಸಿತು. ಆಗ ಪಾರ್ಥನು ಕೋಪದಿಂದ ಬಿಲ್ಲನ್ನು ಹಿಡಿದು ಗರ್ಜನೆಯೊಡನೆ ನುಗ್ಗಿದನು. ಅವನ ಬಾಣದ ಮಳೆಗೆ ನೀಲಧ್ವಜನ ಸೇನೆ ದಿಕ್ಕೆಟ್ಟು ಹೋಯಿತು. ಅರ್ಜುನನನ್ನೆದುರಿಸಲು ಪ್ರವೀರನು ಮುನ್ನುಗ್ಗಲು ವೃಷಕೇತು ಅವನನ್ನು ತಡೆದು ಹೋರಾಡಿದನು. ವೃಷಕೇತುವನ್ನು ಹಿಂದುಮಾಡಿ ಪ್ರವೀರ ಸಾಗುತ್ತಿರಲು ಅನುಸಾಲ್ವನು ಅವನಿಗೆ ಎದುರಾಗಿ ತನ್ನ ಬಾಣಗಳಿಂದ ಪ್ರವೀರನನ್ನು ನೋಯಿಸಿದನು. ಆಗ ನೀಲಧ್ವಜನು ತನ್ನ ಸಕಲಸೇನೆಯೊಡನೆ ತಾನೇ ಅರ್ಜುನನ ಮೇಲೆ ಯುದ್ಧಕ್ಕೆ ನಿಂತನು.

ಅರ್ಜುನನು ಕೋಪದಿಂದ ಧನುಷ್ಟಂಕಾರಮಾಡಿ, ಆರ್ಭಟಿಸಿ ಬಾಣಗಳ ಮಳೆಯಿಂದ ನೀಲಧ್ವಜನನ್ನು ಅವನ ಸೇನೆಯನ್ನು ಮುಚ್ಚಿಬಿಟ್ಟನು. ಆಗ ನೀಲಧ್ವಜನು ತನ್ನ ಅಳಿಯ ಅಗ್ನಿಯನ್ನು,

'ನೀನು ನನ್ನ ಸಮೀಪದಲ್ಲಿದ್ದು, ನನಗೆ ಅಪಾಯವೇ? ನನ್ನನ್ನು ಅರ್ಜುನನ ಭಯದಿಂದ ಬಿಡಿಸು' ಎಂದು ಕೇಳಿಕೊಂಡನು. ಮಾವನ ಕರೆಗೆ ಓಗೊಟ್ಟ ಅಗ್ನಿಯು ಪಾರ್ಥನ ಸೇನೆಯಮೇಲೆನುಗ್ಗಿ ಸುಡಲಾರಂಭಿಸಿದನು.

ಅರ್ಜುನನ ಸೇನೆಯ ಸಕಲಸಾಧನಗಳು, ಚತುರಂಗವು ಬೆಂಕಿಯಿಂದ ಸುಡಲು

ಸೈನಿಕರು ದಿಕ್ಕೆಟ್ಟು ಓಡಿದರು. ಅಗ್ನಿಯು ಎಲ್ಲರನ್ನು ಅಟ್ಟಿಸಿಕೊಂಡು ಬಂದು ಸುಡುತ್ತಿತ್ತು. ಕೆಲವರು ಕವಚಾದಿಗಳು ಸುಟ್ಟುಹೋಗಲು ಬೆತ್ತಲಾದರು. ಕೆಲವರು ಉರಿವ ಬೆಂಕಿಯಲ್ಲಿ ಬಿದ್ದುಹೋದರು. ಅಗ್ನಿಯಿಂದ ತನ್ನ ಸೈನ್ಯ ಹೀಗೆ ನಾಶವಾಗುತ್ತಿರುವುದನ್ನು ಕಂಡ ಅರ್ಜುನನು ಧರ್ಮರಾಜನ ಯಜ್ಞಕ್ಕೆ ವಿಘ್ನವಾಯಿತಲ್ಲ ಎಂದು ಚಿಂತಿಸಿದನು. ಅಗ್ನಿಯನ್ನೇ ಪ್ರಾರ್ಥಿಸಿ ನೋಡುವೆನು ಎಂದು ಬಿಲ್ಲನ್ನು ಕೆಳಗಿಟ್ಟನು. ಪರಿಶುದ್ಧನಾಗಿ ಅಗ್ನಿಯನ್ನು ಭಜಿಸಿದನು. ಸಾಷ್ಟಾಂಗದಿಂದ ನಮಸ್ಕರಿಸಿ ಪ್ರಾರ್ಥಿಸಿದನು:

'ಅಗ್ನಿಯೇ, ನೀನು ಕೋಪಿಸಿಕೊಳ್ಳಲು ಕಾರಣವೇನು? ನಿನಗಾಗಿಯೇ ಈ ಯಜ್ಞವನ್ನು ಮಾಡಿ, ನಿನ್ನಮುಖಾಂತರವೇ ದೇವತೆಗಳಿಗೆ ಹವಿರ್ಭಾಗ ಅರ್ಪಿಸುವುದಾಗಿದೆ. ಸ್ಥಾವರ ಜಂಗಮ ರೂಪವಾದ ಈ ಪ್ರಪಂಚದ ಒಳಗೂ ಹೊರಗೂ ನೀನೆಇರುವೆ. ನಿನ್ನಿಂದಲೇ ಅಳಿವು ಉಳಿವು. ನೀನು ನನಗೆ ಸೂಕ್ತ ಮಾರ್ಗವನ್ನುತೋರಿಸಿ ಬದುಕಿಸು.

'ಖಾಂಡವ ವನ ದಹನವಾದಾಗ ನನ್ನನ್ನುಮೆಚ್ಚಿ ಗಾಂಡೀವವನ್ನು ನೀಡಿದೆ. ನಿನ್ನ ಮಗಳು ದ್ರೌಪದಿ ನನ್ನಪತ್ನಿ. ನಾನು ನಿನ್ನಬಂಧು. ನಾನು ಹೊರಗಿನವನಲ್ಲ'.

'ಅರ್ಜುನ ಕೇಳು. ಹಾಗಾದರೆ ನಾನು ಕೋಪಿಸುವುದಿಲ್ಲ. ನಿಮಗೆ ಭಗವಂತ ಶ್ರೀಕೃಷ್ಣನು ಹತ್ತಿರದಲ್ಲಿಯೇ ಇದ್ದರೂ ಅಶ್ವಮೇಧ ಏಕೆ ಬೇಕಾಗಿತ್ತು? ಅಮೃತ ಹತ್ತಿರದಲ್ಲಿದ್ದರೂ ಮಜ್ಜಿಗೆಗೆ ಅಪೇಕ್ಷಿಸಿದ ಹಾಗಾಯಿತಲ್ಲವೇ?'

'ರಾಜಶ್ರೇಷ್ಠನಿಗೆ ಅಶ್ವಮೇಧವು ಅವಶ್ಯಕರ್ತವ್ಯ. ಆದುದರಿಂದ ಸ್ವಧರ್ಮಾಚರಣೆಗಾಗಿ ಇದನ್ನು ಕೈಕೊಂಡೆವು. ವ್ಯಾಸಮುನಿಯೂ ಶ್ರೀಕೃಷ್ಣನೂ ಈ ಯಾಗವನ್ನು ಮಾಡಲು ಆಜ್ಞಾಪಿಸಿರುವರು. ನಿನ್ನ ಕೃಪೆಯಿಲ್ಲದಿದ್ದರೆ ಇದನ್ನು ಮಾಡುವುದು ಹೇಗೆ?'

'ಸುಡುವುದನ್ನು ಬಿಟ್ಟೆ' ಎಂಬ ನುಡಿಯೊಡನೇ ಅಗ್ನಿಯು ಅರ್ಜುನನಿಗೆ ಅಭಯ ನೀಡಿದನು. ನೀಲಧ್ವಜನನ್ನು ಉದ್ದೇಶಿಸಿ ಒಳ್ಳೆಯಮಾತಿನಿಂದ ಹೇಳಿದನು:

'ಅರ್ಜುನನೊಡನೆ ಯುದ್ಧ ಸಾಕು. ಅವನ ಕುದುರೆಯನ್ನು ಬಿಟ್ಟುಬಿಡಿರಿ. ಪಟ್ಟಣಕ್ಕೆ ಹಿಂದಿರುಗಿರಿ.'

ಅರ್ಜುನನು ನಾರಾಯಣಾಸ್ತ್ರ ಪ್ರಯೋಗಮಾಡಿ ಉರಿಯನ್ನು ಆರಿಸಿದನು. ಅಷ್ಟರಲ್ಲಿ ಅಂದಿನಸೂರ್ಯ ಅಸ್ತಗಿರಿಯಲ್ಲಿ ಕಾಣಿಸಿದನು. ಅರ್ಜುನನು ಸಮಾಧಾನಗೊಂಡು ಸಂತೋಷದಿಂದ ತನ್ನ ಸೇನೆಯೊಡನಿದ್ದನು.

**ಅಗ್ನಿಯನ್ನು ಮೆಚ್ಚಿ ವಿವಾಹವಾದ ಸ್ವಾಹಾ**

ಚಂದ್ರಕುಲತಿಲಕನಾದ ಜನಮೇಜಯನೇ ಕೇಳು. ನೀಲಧ್ವಜನು ಯುದ್ಧ ಭೂಮಿಯಿಂದ ಹಿಂದಿರುಗಿ ಬಂದನು. ಮಂತ್ರಿಗಳನ್ನು ಕರೆಸಿದನು. ತನ್ನ ಅಳಿಯ ಅಗ್ನಿಯ ಆಜ್ಞೆಯಂತೆ ಕುದುರೆಯನ್ನು ಬಿಡುವ ತೀರ್ಮಾನವನ್ನು ಪ್ರಕಟಿಸಿದನು.

ಆಗ ಆತನರಾಣಿ ಜ್ವಾಲೆಯು ಬಂದು 'ಅರ್ಜುನನಿಗೆ ಕುದುರೆಯನ್ನು ಕೊಡಬೇಡ. ಹೆದರಬೇಡ' ಎಂದು ತಡೆದಳು.

ಈ ಕಥೆಯನ್ನು ಕೇಳಿದ ಜನಮೇಜಯರಾಯನಿಗೆ ಕೆಲವು ಸಂಶಯ ಉಂಟಾಯಿತು. ಅವನು ಜೈಮಿನಿಯನ್ನು,

'ಎಲೇ ಮುನೀಂದ್ರನೇ, ಅಗ್ನಿಯು ಆ ರಾಜನಿಗೆ ಹೇಗೆ ಅಳಿಯನಾದ? ಅವನು

ಪಟ್ಟಣದಲ್ಲಿ ಉಳಿಯಲು ಕಾರಣವೇನು? ಆ ರಾಜಪುತ್ರಿ ಅದೇನು ಮಾಡಿದಳು ಹೇಳು' ಎಂದು ಕೇಳಿಕೊಂಡನು.

ಎಲೈ ಜನಮೇಜಯನೇ, ನೀಲಧ್ವಜ ಮತ್ತು ಅವನರಾಣಿ ಜ್ವಾಲೆಯರ ಮಗಳು ಸ್ವಾಹಾ. ಆಕೆ ಅತಿ ರೂಪವತಿ, ಸುಗುಣೆ, ಒಳ್ಳೆಯ ನಡತೆಯುಳ್ಳವಳಾಗಿದ್ದಳು. ಅವಳು ಯೌವನವತಿಯಾಗಲು ರಾಜನು ಅವಳಿಗೆ ಮೂರುಲೋಕದಲ್ಲಿಯೂ ಸುಂದರವಾದ ರಾಜಕುವರರನ್ನು ಚಿತ್ರಪಟಗಳಲ್ಲಿಬರೆಸಿ ತೋರಿಸಿದನು. ಅವಳಿಗೆ ಇಷ್ಟವಾದ ವರನನ್ನು ಆಯ್ಕೆ ಮಾಡಿಕೊಳ್ಳಲು ಸ್ವಾತಂತ್ರ್ಯ ನೀಡಿದನು. ಆ ಮಗಳು ದೇವ, ರಾಕ್ಷಸ, ಮನುಷ್ಯರಲ್ಲಿ ಯಾರನ್ನು ಒಪ್ಪಲಿಲ್ಲ. ತಂದೆ ಒತ್ತಾಯಿಸಿ ಕೇಳಲು ತನ್ನ ಅಭಿಪ್ರಾಯ ವ್ಯಕ್ತಪಡಿಸಿದಳು:

'ಅಷ್ಟ ದಿಕ್ಪಾಲಕರಲ್ಲಿ ಒಬ್ಬನಾದ ಅಗ್ನಿಯನ್ನು ಒಪ್ಪಿದ್ದೇನೆ. ಅವನನ್ನೆ ಪತಿಯಾಗಿ ಸ್ವೀಕರಿಸುತ್ತೇನೆ.'

'ಮಗಳೆ, ನೀನು ಅಸಾಧ್ಯವಾದ ವರನನ್ನು ಅಪೇಕ್ಷಿಸಿ ಆಯ್ಕೆ ಮಾಡಿಕೊಂಡಿರುವೆ. ಅವನನ್ನು ನಿನಗೆ ಪತಿಯಾಗಿಸುವ ಬಗೆ ಹೇಗೆ?'

'ಅಪ್ಪ, ಮಗಳ ಅಪೇಕ್ಷೆ ಈಡೇರಿಸಲು ಚಿಂತಿಸುವೆ ಏಕೆ?'

'ಅಗ್ನಿಯನ್ನು ಒಪ್ಪಿಸುವುದು ಸಾಧ್ಯವೇ ಮಗಳೆ?'

'ನಿನ್ನಿಂದ ಈ ಕಾರ್ಯ ಆಗುವುದಿಲ್ಲವೆ? ಬಿಡು' ಎಂದು ತಂದೆಯನ್ನು ನಿಂದಿಸಿದಳು. ನರ್ಮದಾನದಿಯ ತೀರಕ್ಕೆ ಹೋದಳು. ಅಲ್ಲಿ ಸ್ನಾನ ಮಾಡಿದಳು. ಸುವ್ರತೆಯಾಗಿ ಪ್ರತಿದಿನ ಅಗ್ನಿಯನ್ನು ಭಕ್ತಿಯಿಂದ ಆರಾಧಿಸತೊಡಗಿದಳು.

ಅಗ್ನಿಯು ಅವಳ ವ್ರತಕ್ಕೆ ಮೆಚ್ಚಿದನು. ಬ್ರಾಹ್ಮಣ ವೇಷವನ್ನು ಧರಿಸಿ ನೀಲಧ್ವಜನ ಆಸ್ಥಾನಕ್ಕೆ ಬಂದನು. ರಾಜನು ಆತನನ್ನು ಸತ್ಕರಿಸಿದನು. ವಿನಯದಿಂದ ಕೈಮುಗಿದು ಕೇಳಿಕೊಂಡನು:

'ನೀವು ದಯಮಾಡಿಸಿರುವ ಕಾರ್ಯ ತಿಳಿಸಿ'.

'ನಾವು ಕನ್ಯಾರ್ಥಿಯಾಗಿ ಬಂದಿರುವೆವು. ನಿನ್ನಮಗಳನ್ನು ನನಗೆ ವಿವಾಹ ಮಾಡಿಕೊಡು'.

ಆ ಮಾತು ಕೇಳಿ ರಾಜ ಚಿಂತಾಕ್ರಾಂತನಾದನು. ಆಗ ವಿಪ್ರನು 'ಬ್ರಾಹ್ಮಣರಿಗೆ ಕ್ಷತ್ರಿಯರು ಕನ್ಯೆಯನ್ನು ಕೊಡಬಹುದು. ಈ ವಿಷಯವಾಗಿ ಚಿಂತಿಸಬೇಡ'.

'ನೀನು ನನ್ನ ಕನ್ಯೆಯನ್ನು ಕೇಳಿದ್ದು ತಪ್ಪಲ್ಲ. ಕ್ಷತ್ರಿಯರು ಬ್ರಾಹ್ಮಣರಿಗೆ ಕನ್ಯೆಯನ್ನು ಕೊಡಲು ಅಡ್ಡಿಯೇನೂ ಇಲ್ಲ. ಆದರೆ '

'ಮಗಳನ್ನು ಕೊಡಲು ಒಪ್ಪಿ, ಆದರೆ ಎಂಬ ನುಡಿ ಏಕೆ?'

'ಆದರೆ, ನನ್ನಮಗಳು ಅಗ್ನಿಯನ್ನಲ್ಲದೆ ಇತರರನ್ನು ವರಿಸುವುದಿಲ್ಲ ಎಂದು ಹಠ ಹಿಡಿದಿದ್ದಾಳೆ. ನಿನಗೆ ನನ್ನಮಗಳನ್ನು ಕೊಟ್ಟು ಕೃತಾರ್ಥನಾಗದ ಸ್ಥಿತಿಯಲ್ಲಿರುವೆ. ಏನು ಮಾಡಲಿ?'

'ಅಯ್ಯಾ ದೊರೆಯೆ. ನಿನ್ನಮಗಳ ಇಷ್ಟವು ಸಿದ್ಧಿಸಿದೆ. ಅವಳ ವ್ರತವನ್ನು ಪೂರ್ಣಗೊಳಿಸು'.

'ಅಂದರೆ?'

'ನಾನೇ ಅಗ್ನಿ, ಸಂದೇಹ ಪಡುವುದನ್ನು ಬಿಡು. ನಿನ್ನ ಮಗಳನ್ನು ನನಗೆ ಕೊಡು'

ಆಗ ನೀಲಧ್ವಜನು ಆಪ್ತ ಮಂತ್ರಿಯನ್ನು ಕರೆದನು.

'ಈ ಬ್ರಾಹ್ಮಣನನ್ನು ಪರೀಕ್ಷಿಸಿ ಯಾರೆಂಬುದನ್ನು ತಿಳಿ' ಎಂದು ಆಜ್ಞೆ ಮಾಡಿದನು. ಆತ ಹತ್ತಿರ ಹೋಗಿ ಪರೀಕ್ಷಿಸಲು ನೋಡತೊಡಗಿದನು. ಅಗ್ನಿಯ ಜ್ವಾಲೆಯಿಂದ ಆತನ ಕಣ್ಣರೆಪ್ಪೆಗಳು, ಗಡ್ಡಮೀಸೆಗಳು ಸುಟ್ಟುಹೋದವು. ಆಗ ಮಂತ್ರಿಯು ಆ ವಿಪ್ರವೇಷಧಾರಿ ಅಗ್ನಿಯೇ ಎಂದು ನಿರ್ಧರಿಸಿದನು.

ನೀಲಧ್ವಜನು ಈತ ಆಗ್ನಿಯೇ ಸರಿ ಎಂದು ತಿಳಿದನು. ಆದರೂ ತನ್ನ ಹೆಂಡತಿ ಜ್ವಾಲೆಯ ತಂಗಿಯನ್ನು ಗುಟ್ಟಾಗಿ ಕರೆದು 'ಇವನು ಮಗಳಿಗೆ ಆಸೆಪಟ್ಟು ಬಂದಿದ್ದಾನೆ. ಇವನೇ ಅಗ್ನಿ ಅಹುದೆ ಪರೀಕ್ಷಿಸು' ಎಂದು ಹೇಳಿ ಕಳುಹಿಸಿದನು. ಆಕೆ ಜಂಭದಿಂದ ಹೋಗಿ ಪರೀಕ್ಷಿಸಿದಳು. ಅವಳ ಮೇಲುಹೊದಿಕೆ ಸುಟ್ಟುಹೋಯಿತು. ರಾಜನು ಅವಳನ್ನು ಹಾಸ್ಯ ಮಾಡಿ ನಕ್ಕನು.

ಜನಮೇಜಯರಾಜನೇ ಕೇಳು. ಅನಂತರ ರಾಜ ನೀಲಧ್ವಜನು ಆ ಕಪಟ ಬ್ರಾಹ್ಮಣನನ್ನು ಕರೆದು 'ನೀನು ಅಗ್ನಿಯಾಗಿದ್ದರೆ ನಾನು ನನ್ನ ಮಗಳನ್ನು ಕೊಡುವೆನು. ನೀನು ಇಂದಿನಿಂದ ನಮ್ಮ ಈ ಮಾಹಿಷ್ಮತಿ ಪಟ್ಟಣಕ್ಕೆ ಕೋಟೆಯಂತೆ ರಕ್ಷಕನಾಗಿ ನಮ್ಮ ಮನೆಯಲ್ಲಿಯೇ ಯಾವಾಗಲೂ ಇರಬೇಕು' ಎಂದು ಕೇಳಿಕೊಂಡನು. ಅದಕ್ಕೆ ಒಪ್ಪಿದ ಅಗ್ನಿ ಸ್ವಾಹಾ ದೇವಿಯನ್ನು ವೈಭವದಿಂದ ಮದುವೆ ಮಾಡಿಕೊಂಡನು. ಅಂದಿನಿಂದ ಸ್ವಾಹಾದೇವಿಯೊಡನೆ ಅತಿಸುಖ ಸಂತೋಷದಿಂದ ಅಗ್ನಿ ಆ ಪಟ್ಟಣದಲ್ಲಿಯೇ ಇದ್ದನು.

**ಜ್ವಾಲೆಯ ದ್ವೇಷ**

ಎಲೈ ಜನಮೇಜಯನೇ, ಇದೇ ಅಗ್ನಿಯು ಆ ಮಾಹಿಷ್ಮತಿ ನಗರದಲ್ಲಿರಲು ಕಾರಣ, ಮುಂದಿನ ಕಥಾ ಸಂದರ್ಭವನ್ನು ಈಗ ಕೇಳು ಎಂದು ಕಥೆಯನ್ನು ಮುಂದುವರಿಸಿದನು.

ರಾಜ ನೀಲಧ್ವಜನು ಆ ರಾತ್ರಿ ಅರಮನೆಯಲ್ಲಿ ತನ್ನರಾಣಿ ಜ್ವಾಲೆಯ ಆಜ್ಞೆಗೆ ಶಿರಸಾ ವಹಿಸಿದನು. ತನ್ನೊಡನೆ ಯುದ್ಧಮಾಡದಿದ್ದರೆ ಯಜ್ಞಾಶ್ವವನ್ನು ಬಿಟ್ಟುಕೊಡುವುದಿಲ್ಲ ಎಂದು ಅರ್ಜುನನಿಗೆ ಹೇಳಿಕಳುಹಿಸಿದನು.

ಅವನೀಶ ಜನಮೇಜಯರಾಯನೇ ಕೇಳು. ಬೆಳಗಾಗುವುದರೊಳಗಾಗಿ ಅರ್ಜುನನ ಸೇನೆ ಮಾಹಿಷ್ಮತೀ ನಗರವನ್ನುಮುತ್ತಿತು. ಉಭಯ ಪಕ್ಷದವರೂ ಸೇರಿ ಯುದ್ಧಮಾಡಿದರು. ನೀಲಧ್ವಜನು ಪಾರ್ಥನಮೇಲೆ ಯುದ್ಧಕ್ಕೆಹೊರಟನು.

ಸೂರ್ಯನು ಮುಳುಗಿದಮೇಲೆ ಮಿಂಚುಹುಳಗಳಬೆಳಕಿಗೆ ಕತ್ತಲೆಯು ಓಡಿ ಹೋಗುವುದಿಲ್ಲ. ಹಾಗೆ ಅಗ್ನಿಜ್ವಾಲೆಗೆ ಹೆದರದ ಅರ್ಜುನನು ಉಳಿದ ಭಟರಿಗೆ ಲಕ್ಷ್ಯ ಕೊಡಲಿಲ್ಲ. ಅವನ ಬಾಣದ ಮಳೆಗೆ ನೀಲಧ್ವಜನ ಸೈನ್ಯ ಭಂಗವಾಯಿತು. ಅವನ ಮಗ, ಅಣ್ಣತಮ್ಮಂದಿರು, ಬಂಧು ಬಾಂಧವರು, ಮಂತ್ರಿಗಳು ಮಡಿದರು. ಅರ್ಜುನನ ಬಾಣದ ಏಟಿಗೆ ರಾಜ ನೀಲಧ್ವಜ ಮೂರ್ಛೆಹೋದನು. ಸಾರಥಿಯು ರಾಜನನ್ನು ಅರಮನೆಗೆ ತಂದನು. ಪಟ್ಟಣದ ಬಾಗಿಲನ್ನು ಮುಚ್ಚಿದರು. ಕಾವಲುಗಾರರನ್ನು ನೇಮಿಸಿದರು. ರಾಜನು ಮೂರ್ಛೆಯಿಂದ ಎಚ್ಚೆತ್ತು ತನ್ನ ಅಪಜಯಕ್ಕೆ ದುಃಖ ಪಟ್ಟನು. ಇಷ್ಟೆಲ್ಲಾ ನಾಶಕ್ಕೆ ಕಾರಣಳಾದ ಹೆಂಡತಿ ಜ್ವಾಲೆಯನ್ನು ಅತಿಕೋಪದಿಂದ ನಿಂದಿಸಿದನು. 'ಎಲೈ ಪಾಪಿಷ್ಠಳೆ, ಪಾರ್ಥನ ಕುದುರೆಯನ್ನು ಬಿಟ್ಟುಕೊಡಲು ಅವಕಾಶ ಕೊಡದೆ ನನ್ನ ಕೆಲಸವನ್ನು ಕೆಡಿಸಿದೆ. ನನ್ನಮಕ್ಕಳು ಮಡಿದರು. ನನ್ನಕುಲಕ್ಕೆ ಮೃತ್ಯುವಾದೆ, ದುಷ್ಟೆ, ನನ್ನಅರಮನೆಯಲ್ಲಿ ಇರದೆ

ಹೊರಟುಹೋಗು' ಎಂದನು. ಅನಂತರ ನೀಲಕೇತುವು ಅರ್ಜುನನ ಬಳಿಗೆ ಯಜ್ಞಾಶ್ವವನ್ನು ಕಳುಹಿಸಿದನು. ಧನ, ಕನಕ, ವಸ್ತುವಾಹನ, ಗೋ, ಧಾನ್ಯಗಳ ಸಮೇತ ಅರ್ಜುನನನ್ನು ಕಾಣಲು ಹೋದನು. ಪಾರ್ಥನು ಆ ರಾಜನನ್ನು ಪ್ರೀತಿಯಿಂದ ಆದರಿಸಿದನು. ಆ ಬಳಿಕ ಯಜ್ಞಾಶ್ವವು ದಕ್ಷಿಣದಿಕ್ಕಿಗೆ ನಡೆದುಹೋಯಿತು. ಅರ್ಜುನನು ನೀಲಧ್ವಜ ದೊರೆಯನ್ನು ಕೂಡಿಕೊಂಡು ಮುಂದಕ್ಕೆ ಹೋದನು.

* * *

ಈ ಕಡೆ ಜ್ವಾಲೆಯು ಮಾಹಿಷ್ಮತಿಪುರದಲ್ಲಿ ಅವಮಾನವನ್ನು ಹೊಂದಿ ಕಳೆಗುಂದಿದಳು. ಇನ್ನು ಈ ಮನೆಯಲ್ಲಿ ಇರುವುದು ಪ್ರಯೋಜನವಿಲ್ಲವೆಂದು ಅರಮನೆಯನ್ನು ಬಿಟ್ಟಳು. ತನ್ನ ತಮ್ಮ ಉನ್ಮುಖನ ಬಳಿಗೆ ಹೋದಳು. ಆತ ಅಕ್ಕನನ್ನು ಕಂಡು ಸ್ವಾಗತಿಸಿ ಸತ್ಕರಿಸಿದನು. ಬಂದ ಕಾರಣ ಕೇಳಿದನು. ಆಕೆಯು, 'ಅರ್ಜುನನು ಯುದ್ಧದಲ್ಲಿ ಮಕ್ಕಳನ್ನುಕೊಂದು, ಪತಿಯನ್ನುಗೆದ್ದು ತನ್ನಇಷ್ಟಾರ್ಥವನ್ನು ಹಾಳು ಮಾಡಿದ್ದಾನೆ. ಅವನ ಪ್ರಕಾಶಮಾನವಾದ ಕಿರೀಟವುಳ್ಳ ತಲೆಯನ್ನು ಕತ್ತರಿಸದೆ ಬಿಡುವುದಿಲ್ಲ'.

'ಎಲೆ ಮರುಳೆ, ಶ್ರೀಕೃಷ್ಣನ ಸಹಾಯವಿರುವಾಗ ಯಾವುದೋ ಒಂದು ನೆಪಕ್ಕೆ ಅರ್ಜುನನತಲೆ ಬೀಳುವುದಿಲ್ಲ. ಕೃಷ್ಣನ ವೈರವನ್ನು ಕಟ್ಟಿಕೊಂಡು ನಾಶವಾಗುವ ಕಷ್ಟ ನಿನಗೇತಕ್ಕೆ?'

'ಹಾಗಾದರೆ ನೀನು ನನಗೆ ಸಹಾಯ ಮಾಡುವುದಿಲ್ಲವೆ?'

'ಶ್ರೀರಾಮನು ಅವಮಾನ ಮಾಡಿದನೆಂದು ರಾವಣನಿಗೆ ದೂರು ಹೇಳಿ. ರಾಮನೊಡನೆ ವೈರ ಉಂಟಾಗುವಂತೆ ಮಾಡಿ ಅವನ ವಂಶವನ್ನು ಶೂರ್ಪಣಖಿ ನಾಶಮಾಡಿದಳು. ಅದರಂತೆ ನೀನು ನನ್ನಅರಮನೆಗೆಬಂದು ಅಪಾಯವನ್ನುಂಟು ಮಾಡಬೇಡ. ಇಲ್ಲಿಂದ ಹೋಗು.'

ಅವನ ನೇರಆರೋಪದ ಛೇಡಿಕೆಯ, ಕಿಡಿಕಾರುವ ನುಡಿಗೆ ನೊಂದು ಅವನನ್ನು ಬೈದಳು. ಆತನ ಅರಮನೆಯಲ್ಲಿರದೆ ಹೊರಟುಬಂದಳು.

ಹಾಗೆ ಬರುವಾಗ ಆಕೆಯು ವಿವಿಧ ಲೀಲೆಯಿಂದ ನರ್ತಿಸುತ್ತ ಹೊಳೆದು; ಘನಪ್ರವಾಹ, ದೊಡ್ಡಅಲೆಗಳು, ನಾನಾ ಜಲಚರಪ್ರಾಣಿಗಳಿಂದ ಕೂಡಿ ರಮ್ಯವಾಗಿ ಹರಿಯುತ್ತಿರುವ ವರಗಂಗಾನದಿಯನ್ನು ಕಂಡಳು. ತನ್ನ ಬಳಿಯಲ್ಲಿ ಯಾರು ಸ್ನಾನ ಮಾಡಿದರೂ ಅವರು ಪುಣ್ಯದಿಂದ ಇಂದ್ರಪದವಿಯನ್ನು ಪಡೆಯುವರು ಎಂಬ ಮಹಿಮೆಯಿಂದಿರುವ ಗಂಗಾಪ್ರವಾಹವನ್ನು ನೋಡುತ್ತ ಜ್ವಾಲೆಯು ಅದರದಡದಲ್ಲಿ ನಿಂತಳು. ಅಲ್ಲಿರುವ ಜನಗಳನ್ನುದ್ದೇಶಿಸಿ ಕೇಳಿದಳು:

'ಇಲ್ಲಿರುವ ಜನಗಳಲ್ಲಿ ನನ್ನನ್ನು ಹೇಗಾದರೂಮಾಡಿ ನನಗೆ ನೀರುಸೋಕದ ಹಾಗೆ; ಮೆಲ್ಲಗೆ ಆಚೆಯದಡಕ್ಕೆ ಸೇರಿಸುವ, ಪ್ರೀತಿಯುಳ್ಳವರಾದ ಧರ್ಮಿಷ್ಠರು ಯಾರಾದರೂ ಉಂಟೆ?'

ಆ ಮಾತಿಗೆ ಅಲ್ಲಿಯನಾವಿಕರು ಆಶ್ಚರ್ಯಚಕಿತರಾಗಿ ಪ್ರಶ್ನಿಸಿದರು:

'ಒಂದು ತೊಟ್ಟು ಮೈಮೇಲೆಬೀಳಲು ವಿಪ್ರನನ್ನು ಕೊಂದಪಾಪ ಪರಿಹಾರವಾಗುವುದು. ಈ ನದಿಯಲ್ಲಿ ಸ್ನಾನ ಮಾಡಿದವನಿಗೆ ದೊರಕುವ ಪುಣ್ಯವನ್ನು ಬಣ್ಣಿಸಲು ಬ್ರಹ್ಮನಿಗೂ

ಸಾಧ್ಯವಿಲ್ಲ. ಹೀಗಿರುವಾಗ ನೀನು ಇದರಲ್ಲಿ ಯಾವುದನ್ನು ಅಪೇಕ್ಷಿಸಿ ಬಂದೆ? ಗಂಗೆಯನ್ನುಮುಟ್ಟದಿರಲು ಕಾರಣವೇನು?'

'ಜಾಹ್ನವಿಗೆ ಒಂದು ಶಾಪವಿದೆ. ಅದನ್ನು ನಿಮಗೆ ಹೇಳುವುದಿಲ್ಲ. ಆಕೆ ಪ್ರತ್ಯಕ್ಷಳಾದರೆ, ಆ ದೋಷವನ್ನು ಆಕೆಗೆ ತಿಳಿಸುವೆನು'.

ಜನಮೇಜಯರಾಯನೇ ಕೇಳು. ಬ್ರಹ್ಮನ ಅಹ್ನಿಕಾರ್ಥವಾಗಿ ಆತನ ಕೈಯ ಕಮಂಡಲುವಿನಲ್ಲಿರುವದು ಶುದ್ಧಜಲವಾಗಿ; ವಿಷ್ಣುವಿನ ಪಾದದಿಂದ ಉದ್ಭವಿಸಿದ ತೀರ್ಥವಾಗಿ; ಶಿವನಶಿರಸ್ಸಿನ ಜಟಾಮಂಡಲವೆಂಬ ಸಸ್ಯವನ್ನು ಬೆಳೆಸುವ ಪುಣ್ಯತೀರ್ಥವಾಗಿ; ಮಹಾಪಾತಕಗಳ ಲೇಪವನ್ನುತೊಳೆದು ಶುದ್ಧಿಗೊಳಿಸುವ ಸಾಮರ್ಥ್ಯಉಳ್ಳವಳು ಗಂಗೆ. ಅಂತಹ ಪರಮಪಾವನಳಾದ ಗಂಗೆಯು ಜ್ವಾಲೆಯಾಡಿದ ಅಪವಾದಕ್ಕೆ ಹೆದರಿದಳು. ತ್ರೈಲೋಕದಲ್ಲಿ ಅಪವಾದಕ್ಕೆ ಹೆದರದವರು ಯಾರು?

ದಿವ್ಯವಾದ ದೇಹವನ್ನುಧರಿಸಿದ ಲೋಕಮಾತೆಯಾದ ಗಂಗೆ ನೀರಿನ ಮಧ್ಯದಿಂದ ಎದ್ದುಬಂದು ಆ ಜ್ವಾಲೆಯನ್ನು ಕೇಳಿದಳು:

'ಎಲೈ ಜ್ವಾಲೆಯೇ, ನಾನು ಪಾಪ ಪರಿಹಾರಕಳು ಎಂದು ವೇದಶಾಸ್ತ್ರಗಳು ಸಾರಿ ಹೇಳುತ್ತಿವೆ. ನನ್ನನ್ನು ಮುಟ್ಟಲಾಗದು ಎಂದು ನಿಂದಿಸುವ ಕಾರಣ ಅದಾವುದಮ್ಮ? ತಿಳಿಸು'.

'ಗಂಗೆಯೆ, ನಾನು ನಿಂದಿಸುವ ಮಾತನ್ನು ಆಡುವವಳಲ್ಲ. ಲೋಕದ ನೀತಿಯನ್ನು ಹೇಳುತ್ತಿದ್ದೇನೆ. ಮಕ್ಕಳಿಲ್ಲದ ಹೆಂಗಸಿನ ದೇಹಸ್ಪರ್ಶವು ಪಾಪಕರವೆಂದು ಜನರಾಡುವರು. ಅದಕ್ಕಾಗಿ ನಿನ್ನನ್ನು ಮುಟ್ಟಲು ಹೆದರಿದೆನು'.

'ನನ್ನ ಮಗ ದೊರೆಗಳ ವೃಂದದಲ್ಲಿಯೇ ಶ್ರೇಷ್ಠನೆನಿಸಿಕೊಂಡವನು. ಅವನು ಯಾವ ಕಾಲಕ್ಕೂ ಸಾಯುವವನಲ್ಲ. ಅವನು ತನ್ನಿಷ್ಟಬಂದಾಗಲೇ ಸಾಯುವ ಯದೃಚ್ಛಾ ಮರಣಿ. ಆತ ದೇವತೆಗಳಿಗೆ ಸಮಾನನು. ಸತ್ಯಸಂಧ ಭೀಷ್ಮನೆಂಬ ಹೆಸರಿನಿಂದ ಮೂರುಲೋಕಗಳಲ್ಲಿ ಪ್ರಸಿದ್ಧನಾಗಿರುವವನು. ಮೂಢಳಾದ ನೀನು ನನಗೆ ಮಕ್ಕಳಿಲ್ಲ ಎಂದು ಹೇಳಬಹುದೆ?'

'ಎಲೇ ಗಂಗೆ, ನೀನಾಡಿದ ಸಂಗತಿಯೆಲ್ಲವೂ ಸತ್ಯವೆ ಸರಿ. ನಿನಗಾದ ಎಂಟು ಮಕ್ಕಳಲ್ಲಿ ಏಳುಮಕ್ಕಳು ನಾಶವಾಗಿ ಉಳಿದವನು ಭೀಷ್ಮ ಎಂಬುದನ್ನು ನಾನು ತಿಳಿದಿರುವೆನು. ಈವರೆಗೂ ನಿನ್ನಮಹತ್ವ ಮೂರುಲೋಕದಲ್ಲಿಯೂ ಪ್ರಸಿದ್ಧಿಗೊಂಡಿತ್ತು. ಆದರೆ ಈಗ ಕೌರವಪಾಂಡವರಿಗೆ ನಡೆದ ಯುದ್ಧದಲ್ಲಿ ಅರ್ಜುನ ನಿನ್ನ ಮಗ ಭೀಷ್ಮನನ್ನು ಮೋಸದಿಂದ ಕೊಂದಿದ್ದಾನೆ. ಹಾಗಿಲ್ಲದಿದ್ದರೆ ನಿನ್ನ ಅಭ್ಯುದಯಕ್ಕೆ ಅಡ್ಡಿ ಎಲ್ಲಿಂದ ಬಂದೀತು ಕೇಳು'.

ಕಾಡ್ಗಿಚ್ಚಿಗೆ ಒಳಗಾದ ಒಣಮರವು ತನ್ನ ಬಳಿಯಿರುವ ಹಸಿರೆಲೆಯ ಮರವನ್ನು ಸುಟ್ಟುಹಾಕುವಂತೆ ಜ್ವಾಲೆಯ ಕೋಪವು ಶಾಂತವಾದ ದೇವನದಿಯ ಮನಸ್ಸನ್ನು ವ್ಯಾಪಿಸಿತು. ಆಕೆ ಉಗ್ರಳಾಗಿ 'ಯುದ್ಧದಲ್ಲಿ ಬಾಣ ಪ್ರಯೋಗ ಮಾಡಿ ನನ್ನಮಗ ಭೀಷ್ಮನನ್ನು ಕೊಂದ ಅರ್ಜುನನ ತಲೆಯನ್ನು ಅವನ ಮಗನು ಇನ್ನು ಆರು ತಿಂಗಳಲ್ಲಿ ಯುದ್ಧದಲ್ಲಿ ಕಡಿದು ಹಾಕಲಿ' ಎಂದು ಕೈಯೆತ್ತಿ ಶಾಪಕೊಟ್ಟು ನೀರಿನಲ್ಲಿ ಅದೃಶ್ಯಳಾದಳು.

ಎಲೈ ಜನಮೇಜಯರಾಯನೇ ಕೇಳು. ಜ್ವಾಲೆಯು ಗಂಗೆಗೆ ಕೋಪವನ್ನು ಬರಿಸಿ, ಕಠಿಣ ಶಾಪ ಕೊಡಿಸಿದಳು. ಬಳಿಕ ಅದು ಸಾಲದೆಂಬಂತೆ; ತಾನು ಕ್ರೂರವಾದ ಹರಿತ ಬಾಣವಾಗಿ ಅವನ ತಲೆಯನ್ನು ಕತ್ತರಿಸಲು ಸಹಾಯಕಳಾಗುವೆ ಎಂದು ಹೇಳಿ ಅಗ್ನಿಪ್ರವೇಶ

ಮಾಡಿಬಿಟ್ಟಳು. ಬಾಣರೂಪವನ್ನು ಧರಿಸಿ ಅರ್ಜುನನ ಮಗನಾದ ಬಭ್ರುವಾಹನನ ಬತ್ತಳಿಕೆಯಲ್ಲಿ ಬಾಣವಾಗಿ ಸೇರಿದಳು. ನಾರಿಯರ ಛಲವು ಇನ್ನೆಷ್ಟು ತೀವ್ರವೋ?

ಅರ್ಜುನನಿಗೆ ಕಾರಣಾಂತರದಿಂದ ಶಾಪ ಬಂದಿದೆ. ಮಂದಾಕಿನಿಯ ಮಾತು ತಟ್ಟದೆ ಬಿಡುವುದಿಲ್ಲ. ಈ ಅರ್ಜುನನ ಕೂಡೆ ಚಂದ್ರವಂಶ ನಾಶವಾಗುವುದು. ಧರ್ಮರಾಜ ಮೊದಲಾದವರು ಅರ್ಜುನನ ಮರಣವನ್ನು ಸಹಿಸಿಕೊಂಡು ಉಳಿಯಲಾರರು. ಮುಂದೆ ಸುರಪುರದ ಶ್ರೀಲಕ್ಷ್ಮೀಕಾಂತನು ಯಾವ ರೀತಿಯಲ್ಲಿ ಪರಿಹರಿಸುವನೊ ತಿಳಿಯದು. ಮರೆಹೊಕ್ಕವರನ್ನು ಉಪಾಯಾಂತರದಿಂದ ಅವನು ರಕ್ಷಿಸದೆ ಬಿಡುವುದಿಲ್ಲ ಎಂದು ಇಂದ್ರಾದಿದೇವತೆಗಳು ಧೈರ್ಯದಿಂದಿದ್ದರು.

* * *

# ಚಂಡಿ

ಜನಮೇಜಯನೇ ಮುಂದಿನ ಕಥೆಯನ್ನು ಕೇಳು. ಅದು ತುಂಬಾ ಕುತೂಹಲವಾಗಿದೆ. ಅರ್ಜುನನನ್ನು ನೀಲಧ್ವಜನು ಆದರಪೂರ್ವಕವಾಗಿ ಕಂಡನು. ಅನಂತರ ನೀಲಧ್ವಜನ ಸೈನ್ಯವು ಅರ್ಜುನನ ಸೈನ್ಯದ ಜೊತೆಗೂಡಿ ಯಾಗದ ಕುದುರೆಯಹಿಂದೆ ದಕ್ಷಿಣ ದಿಕ್ಕಿಗೆ ಹೊರಟಿತು. ಅಲ್ಲಿ ಅವರಿಗೆವಿಂಧ್ಯ ಪರ್ವತವು ಕಂಡಿತು. ಅದು ಪ್ರಕಾಶಮಾನದಿಂದ ಉನ್ನತ ಶೃಂಗಶಿಖರಗಳಿಂದಲೂ, ಚಂದ್ರಕಾಂತ ಶಿಲೆಗಳಿಂದಲೂ ಕೂಡಿ ಸೊಗಸಾಗಿ ಮನೋಹರವಾಗಿತ್ತು. ಆ ಪರ್ವತವು ವಿವಿಧ ಪ್ರಾಣಿಪಕ್ಷಿಗಳಿಂದ, ಕ್ರೂರ ಸರ್ಪಗಳಿಂದ, ಹೆಬ್ಬಿದಿರ ಮೆಳೆಗಳಿಂದ, ಸುಗಂಧಭರಿತ ಮರಗಿಡಗಳಿಂದ ಕೂಡಿ ಫಲಪುಷ್ಪಗಳಿಂದ ಸಮೃದ್ಧವಾಗಿತ್ತು. ಅದು ಬೇಡರಿಂದ, ಯಕ್ಷ ಕಿನ್ನರರಿಂದ, ಋಷ್ಯಾಶ್ರಮಗಳಿಂದ, ರಾಕ್ಷಸರಿಂದ ಕೂಡಿತ್ತು. ಆ ದುರ್ಗಮಕಾಡಿನಲ್ಲಿ ಹಾದು ಹೋಗುವಾಗ ಪಾರ್ಥನಸೈನಿಕರು ದಟ್ಟವಾಗಿ ಬೆಳೆದಿದ್ದ ಮರಗಳನ್ನು ಕತ್ತರಿಸಿ ದಾರಿಯನ್ನು ಸುಗಮವಾಗಿಸಿಕೊಂಡರು. ಬೆಂಗಾವಲಾಗಿ ಆ ಕುದುರೆಯ ಹಿಂದೆ ಸಾಗಿದರು.

ಆ ಕುದುರೆಯು ತನ್ನಮುಂದೆ ವಿಸ್ತಾರವಾಗಿ ಹರಡಿಕೊಂಡಿದ್ದ ಬಂಡೆಯನ್ನು ಕಂಡಿತು. ಅದಕ್ಕೆ ಅದರ ಮೇಲೆ ಹೊರಳುವ ಕುತೂಹಲ ಉಂಟಾಯಿತು. ಪೂರ್ವದಲ್ಲಿ ಶ್ರೀರಾಮನು ಮೆಟ್ಟಿದ ತಕ್ಷಣ ಬಂಡೆ ಹೆಣ್ಣಾಯಿತು. ಹಾಗೆಯೆ ಇಂದು ಏಕಾಗಬಾರದು ಎಂದು ಭಾವಿಸಿದಂತೆ ಕುದುರೆ ಆ ಬಂಡೆಯಮೇಲೆ ಹತ್ತಿತು.

ಜನಮೇಜಯರಾಯನೇ ಕೇಳು. ಆ ಕುದುರೆ ಕಾಲಿಟ್ಟಕೂಡಲೆ ಅದರ ಗೊರಸು, ಬಂಡೆಯಿಂದ ಬಿಟ್ಟು ಹೋಗದ ಹಾಗೆ ಬೆಸೆದುಕೊಂಡಿತು. ಅದರ ಶರೀರದ ವಿನೋದ ತಪ್ಪಿತು. ಅದು ಬೊಂಬೆಯಂತೆ ನಿಶ್ಚಲವಾಯಿತು.ಚಂದ್ರಮಂಡಲದಲ್ಲಿ ಕಾಣುವ ಚಿಹ್ನೆಯಂತೆ ಅದು ಕಲ್ಲಿನಲ್ಲಿ ಒಂದಾಯಿತು. ಹಾಗೆ ಚಿತ್ರಪ್ರತಿಮೆಯಂತೆ ಅದು ನಿಂತದ್ದನ್ನು ಕಂಡ ಕಾವಲುಭಟರು ಆಶ್ಚರ್ಯ ಚಕಿತರಾದರು. ಅವರು ಅರ್ಜುನನ ಬಳಿಗೆ ಬಂದು ಅದರ ಕಾರಣವೇನೆಂದು ತಿಳಿಯಲು ಪ್ರಾರ್ಥಿಸಿದರು. ಆತ ಬಂದು ನೋಡಿ, ಚಾಟಿಯಿಂದ ಹೊಡೆಯಿರಿ ಎಂದನು. ಆ ಏಟಿನಿಂದ ಕುದುರೆ ಮತ್ತಷ್ಟು ಬಲವಾಗಿ ವಜ್ರಲೇಪದಂತೆ ಬಂಡೆಗೆ ಕಚ್ಚಿಕೊಂಡಿತು.

ಆಗ ಪಾರ್ಥನು ಇದು ಯಾವುದಾದರೂ ಮುನಿದ ಋಷಿಯ ಶಾಪದಿಂದಾಗಿರಬೇಕೆಂದು ಆಲೋಚಿಸಿದನು. ತನ್ನ ಚಾರರಿಗೆ ಆ ಕಾಡಿನಲ್ಲಿ ಋಷ್ಯಾಶ್ರಮ ಯಾವುದಾದರೂ ಇದ್ದರೆ ನೋಡಿ ಎಂದನು. ಅವರು ಆ ಪ್ರದೇಶದಲ್ಲಿ ಸುತ್ತಾಡಿ ಹುಡುಕಿ ಬಂದು, ಆಶ್ರಮವಿರುವುದನ್ನು ತಿಳಿಸಿದರು. ಆಗ ಆತ ಪ್ರದ್ಯುಮ್ನ, ವೃಷಕೇತು, ಸಾಲ್ವ, ಯೌವನಾಶ್ವ, ನೀಲಧ್ವಜರನ್ನು ಕೂಡಿಕೊಂಡು ಋಷ್ಯಾಶ್ರಮಕ್ಕೆ ಹೋದನು. ಆ ಪ್ರದೇಶದಲ್ಲಿ ಸೂರ್ಯನ ಅತಿತಾಪ, ಚಂದ್ರನ ಅತಿಶೈತ್ಯ, ಬಿರುಮಳೆಯ ಬಾಧೆ ಇರಲಿಲ್ಲ. ಮೃಗ ಪಕ್ಷಿಗಳು ತಂತಮ್ಮ ಸ್ವಾಭಾವಿಕ ವೈರವನ್ನು ಬಿಟ್ಟು ಒಂದಕ್ಕೊಂದು ಒಗ್ಗಿಕೊಂಡಿದ್ದವು. ಅಲ್ಲಿ ಒಂದು ಪರ್ಣಶಾಲೆಯು ಕಾಣಿಸಿತು. ಶಿಷ್ಯರಿಗೆ ವೇದಶಾಸ್ತ್ರ ಪುರಾಣಗಳನ್ನು ಪಾಠಮಾಡುವ, ಹೋಮಾದಿಗಳನ್ನು ನಡೆಸುವ, ಹರಿಹರ ಸೂರ್ಯಾರಾಧನೆ ಮಾಡುವ ಋಷಿಗಳು ಅಲ್ಲಿದ್ದರು. ಅವರ ಮಧ್ಯದಲ್ಲಿ ಸೂರ್ಯ

ಚಂದ್ರಾದಿಗಳಂತೆ ತೇಜಸ್ವಿಯಾಗಿ, ತ್ರಿಮೂರ್ತಿಗಳ ಮಹಿಮೆಯುಳ್ಳವರಾಗಿ, ಶಾಂತಿಯ ರೂಪವೇ ತಾನಾದಂತಿರುವ ಸೌಭರಿ ಎಂಬ ಮುನಿಶ್ರೇಷ್ಠರು ಯೋಗನಿಷ್ಠರಾಗಿ ಕುಳಿತಿದ್ದರು.

ಅರ್ಜುನನು ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದನು. ಯೋಗಿಯು ಆತನನ್ನು ಉಪಚರಿಸಿ ಕೇಳಿದರು:

'ಇಲ್ಲಿಗೆ ಬಂದ ಕಾರಣ?'

'ಧರ್ಮರಾಜನು ಕುರುಕ್ಷೇತ್ರದಲ್ಲಿ ನಡೆದ ಗೋತ್ರಹತ್ಯೆ ಪಾಪನಿವಾರಣೆಗಾಗಿ ಅಶ್ವಮೇಧವನ್ನು ನಡೆಸುತ್ತಿರುವನು. ಅದರ ರಕ್ಷಣೆಗೆ ಪಾರ್ಥನಾದ ನಾನು ಬಂದಿದ್ದೇನೆ. ಈಗ ಕುದುರೆ ಬಂಡೆಯಲ್ಲಿ ಸಿಕ್ಕಿಬಿದ್ದಿದೆ. ತಮ್ಮ ಅನುಗ್ರಹದಿಂದಮಾತ್ರ ಬಂಡೆಯಲ್ಲಿ ನಟ್ಟು ಹೋಗಿರುವ ಕುದುರೆಯನ್ನು ಹೊರಕ್ಕೆ ತರಲು ಸಾಧ್ಯ. ನನ್ನನ್ನು ರಕ್ಷಿಸಿ.'

'ಎಲೈ ಅರ್ಜುನನೆ, ನಿನಗೆ ಭಗವಾನ್ ಶ್ರೀಕೃಷ್ಣ ಭಾರತಯುದ್ಧಮಧ್ಯದಲ್ಲಿ ಗೀತಾರೂಪವಾಗಿ ತಿಳುವಳಿಕೆ ನೀಡಿದ್ದರು. ಹಾಗಿದ್ದರೂ ನಿನ್ನಲ್ಲಿರುವ ಅಹಂಕಾರ ಇನ್ನೂ ಹೋಗಿಲ್ಲ. ಕೊಟ್ಟಿಗೆಯಲ್ಲಿ ಕಾಮಧೇನುವಿದ್ದರೂ ಅದನ್ನು ಉಪೇಕ್ಷಿಸಿ ಅಗಾಧ ಕಾಡಿನಲ್ಲಿರುವ ಹುಲಿಯನ್ನು ಹುಡುಕಿ, ಅದರಿಂದ ಹಾಲನ್ನು ಕರೆದುಕೊಳ್ಳುವುದಕ್ಕೆ ಶ್ರಮ ಪಡುತ್ತಿರುವಿರಲ್ಲಾ! ಶ್ರೀಕೃಷ್ಣನೇ ನಿಮ್ಮ ಸನ್ನಿಧಿಯಲ್ಲಿರಲು ಅಶ್ವಮೇಧಯಾಗ ಬೇಕಾಗಿರಲಿಲ್ಲ. ಸಾಮಾನ್ಯರರೀತಿ ಧರ್ಮರಾಯನು ನಡೆದುಕೊಂಡಿರುವನು.'

'ನಾವು ಕೃಷ್ಣನನ್ನುಬಿಟ್ಟು ಬದುಕುವವರಲ್ಲ. ನಮ್ಮ ಚಿತ್ತದಲ್ಲಿ ಅವನೇ ತುಂಬಿದ್ದಾನೆ. ಆತನಅಪ್ಪಣೆಯಿಂದಲೇ ಈ ಅಶ್ವಮೇಧವನ್ನು ನಡೆಸುತ್ತಿದ್ದೇವೆ. ತಮ್ಮ ಬೋಧನೆಯಿಂದ ಕೃತಾರ್ಥರಾಗುತ್ತೇವೆ. ಈ ಬಂಡೆಯಲ್ಲಿ ಸಿಕ್ಕಿಬಿದ್ದಿರುವ ಕುದುರೆಯನ್ನು ಕರುಣೆಯಿಂದ ಬಿಡಿಸಿಕೊಡಿ.'

'ಎಲೈ ಪಾರ್ಥನೆ, ನೀನು ಶ್ರೀಕೃಷ್ಣನನ್ನು ಧ್ಯಾನಿಸುತ್ತ, ನಿನ್ನ ಕೈಯಿಂದ ಕುದುರೆಯನ್ನು ಮುಟ್ಟಿದರೆ ಅದು ಮೊದಲಿನಂತೆ ನೆಲದಮೇಲೆ ನಡೆಯುತ್ತದೆ. ನೀನು ಹೋಗು.'

ವರಮುನಿಗಳ ಮಂಗಳನುಡಿ ಕೇಳಿ ಚಕಿತನಾದ ಪಾರ್ಥನು ಆ ಬಂಡೆಯ ಮಹಿಮೆಯನ್ನು ಆದ್ಯಂತವಾಗಿ ತಿಳಿಸಬೇಕೆಂದು ಪ್ರಾರ್ಥಿಸಿಕೊಂಡನು. ಆಗ ಯೋಗ ದೃಷ್ಟಿಯ ಆ ಮುನಿಗಳು ಅರ್ಜುನನಿಗೆ ಅದರ ಪೂರ್ವಾಪರವನ್ನು ಹೀಗೆ ವಿವರಿಸಿದರು.

ಅರ್ಜುನನೇ ಕೇಳು, ಪೂರ್ವದಲ್ಲಿ ಎಲ್ಲ ಶಾಸ್ತ್ರಗಳನ್ನು ತಿಳಿದ ಉದ್ದಾಲಕನೆಂಬ ಒಬ್ಬ ಬ್ರಾಹ್ಮಣನಿದ್ದನು. ಆತನಿಗೆ ಚಂಡಿ ಎಂಬುವವಳೊಂದಿಗೆ ವಿವಾಹವಾಯಿತು. ಆತ ಆಕೆಯನ್ನು ಕುರಿತು 'ಚಂಡಿಯೇ ನೀನು ಆಯಾ ಕಾಲಕ್ಕೆ ಸರಿಯಾಗಿ ನಾನು ಮಾಡಬೇಕಾದ ಜಪ, ಅನುಷ್ಠಾನ ಪೂಜಾದಿಗಳಿಗೆ ಎಲ್ಲವನ್ನು ಸಿದ್ಧಪಡಿಸಬೇಕು. ಗೃಹಕೃತ್ಯವನ್ನು ನಡೆಯಿಸಿಕೊಂಡು ಹೋಗಬೇಕು' ಎಂದು ಹೇಳಿದನು. ಅದಕ್ಕೆ ಉತ್ತರವಾಗಿ ಆಕೆಯು 'ಮುನಿಯೇ, ನಾನು ನಿನ್ನ ಮಾತನ್ನು ಎಳ್ಳಷ್ಟು ಕೇಳುವವಳಲ್ಲ. ನಿನ್ನ ಶುಶ್ರೂಷೆ, ಗೃಹಕೃತ್ಯದ ತಂಟೆಗೆ ಹೋಗುವವಳಲ್ಲ. ನೀನು ಹೇಳಿದುದನ್ನು ಮಾಡುವುದಿಲ್ಲ' ಎಂದು ಮೊಂಡುತನದಿಂದ ಹೇಳಿದಳು. ಆಗ ಆತನಿಗೆ ಅವಳನ್ನು ವಿವಾಹವಾದದ್ದು ಮುಳ್ಳುಹತ್ತಿದ ಮರವನ್ನು ಏರಿದ ಹಾಗಾಯಿತು. ತನ್ನ ತಪಸ್ಸಿನ ಬಗ್ಗೆ, ಇಹಪರದ ಬಗ್ಗೆ ಆತ ಚಿಂತಿಸಿ ಪಕ್ಕೆಗೆ ಬಾಣನೆಟ್ಟಿಕೊಂಡಂತಹ ನೋವನ್ನು ಅನುಭವಿಸಿ, ಚಿಂತೆಯಿಂದ ಕುಗ್ಗಿ ಹೋದನು.

ಒಮ್ಮೆ ಉದ್ದಾಲಕನ ಮನೆಗೆ ಕೌಂಡಿನ್ಯನೆಂಬ ಋಷಿಶ್ರೇಷ್ಠನು ಬಂದನು. ಆತನನ್ನು ಸತ್ಕರಿಸಿದ ಉದ್ದಾಲಕನು ಚಿಂತಾಕ್ರಾಂತನಾಗಿರುವುದನ್ನು ಆ ಮುನಿಯು ಕಂಡನು. ಅದರ ಕಾರಣವನ್ನು ಕೇಳಿದನು. ಆಗ ಉದ್ದಾಲಕನು ತನ್ನ ಹೆಂಡತಿ ಚಂಡಿಯ ಪ್ರತಿಕೂಲತೆಯನ್ನು ಮರೆಮಾಚದೆ ಹೇಳಿದನು. ಅದಕ್ಕೆ ಕೌಂಡಿನ್ಯನು 'ಎಲೈ ಉದ್ದಾಲಕನೆ, ನೀನು ಇದಕ್ಕೊಂದು ಉಪಾಯ ಮಾಡು. ನೀನು ಯಾವ ಕೆಲಸವು ನಿನ್ನ ಹೆಂಡತಿಯಿಂದ ಆಗಬೇಕೆಂದು ಅಪೇಕ್ಷಿಸುವೆಯೋ ಅದಕ್ಕೆ ವಿರುದ್ಧವಾಗಿ ಅವಳಿಗೆ ಹೇಳು. ಅವಳು ಅದಕ್ಕೆ ವಿರೋಧವಾಗಿ ನಡೆದುಕೊಳ್ಳುವಳು. ಆಗ ನಿನ್ನ ಯೋಚನೆಯಂತೆ ಕೆಲಸ ನಡೆಯುವುದು' ಎಂದು ಸಮಾಧಾನಪಡಿಸಿ ಅಲ್ಲಿಂದ ತೀರ್ಥಯಾತ್ರೆಗೆ ಹೋದನು.

ಹೀಗೆ ಇರುತ್ತಿರುವಾಗ ಉದ್ದಾಲಕನ ತಂದೆಯ ಶ್ರಾದ್ಧ ದಿನವು ಬಂದಿತು. ಆ ದಿನ ಬೆಳಗಾಗುತ್ತಲೆ ಎದ್ದು ಆತ ಹೆಂಡತಿಯನ್ನುದ್ದೇಶಿಸಿ ನುಡಿದನು:

'ಚಂಡಿ, ನಾಳೆ ನಮ್ಮಪ್ಪನ ಶ್ರಾದ್ಧವಿದೆ. ಅದನ್ನು ನಾನು ನಾಡಿದ್ದು ಮಾಡುತ್ತೇನೆ. ಅದಕ್ಕೆ ಕೆಟ್ಟುಹೋದ ಧಾನ್ಯ, ಅಕ್ಕಿ, ತರಕಾರಿ ಮುಂತಾದವುಗಳನ್ನು ತರುತ್ತೇನೆ. ಶುದ್ಧವಾದ ವಸ್ತುವೊಂದನ್ನೂ ತಂದುಕೊಡುವುದಿಲ್ಲ. ಶ್ರಾದ್ಧದ ಮಾರನೆಯ ದಿನ ಅಪಾತ್ರರಾದ ಬ್ರಾಹ್ಮಣರಿಗೆ ಭೋಜನಕ್ಕೆ ಕರೆಯುತ್ತೇನೆ.'

'ನಾನು ನಾಳೆಯೇ ಶಾದ್ಧವನ್ನು ಮಾಡಿಸುತ್ತೇನೆ. ಉತ್ತಮವಾದ ಧಾನ್ಯ, ತರಕಾರಿಗಳನ್ನು ತೆಗೆದುಕೊಂಡು ಬರುತ್ತೇನೆ. ಅತಿ ಶುದ್ಧವಾದ ಪದಾರ್ಥಗಳನ್ನು ತರಿಸುತ್ತೇನೆ. ಶ್ರಾದ್ಧ ದಿನಕ್ಕೆ ಹಿಂದಣ ದಿನವೇ ಸಕಲ ಸದ್ಗುಣ ಸಂಪನ್ನರು, ವೇದ ಪಾರಂಗತರು, ಸುಶೀಲರು ಆದ ಸತ್ಪಾತ್ರ ಬ್ರಾಹ್ಮಣರನ್ನು ಪ್ರೀತಿಯಿಂದ ಭೋಜನಕ್ಕೆ ಹೇಳಿ ಕರೆಸುತ್ತೇನೆ.'

'ಹಾಗಾದರೆ ನಾನು ಶ್ರಾದ್ಧವನ್ನು ಕುತುಪಕಾಲವನ್ನು ಬಿಟ್ಟು ಅಕಾಲದಲ್ಲಿ ಮಾಡುವೆನು. ಬ್ರಾಹ್ಮಣರನ್ನು ಆದರಿಸುವುದಿಲ್ಲ. ಅವರ ಭೋಜನಕ್ಕೆ ಅನ್ನ, ಭಕ್ಷ್ಯ, ಭೋಜ್ಯಾದಿಗಳನ್ನು ನೀಡಿ; ಫಲ, ವಸ್ತ್ರ, ದಕ್ಷಿಣೆಗಳನ್ನು ಕೊಡುವುದಿಲ್ಲ.

'ನಾನು ಕುತುಪಕಾಲವನ್ನು ಮೀರುವುದಕ್ಕೆ ಅವಕಾಶ ಕೊಡುವುದಿಲ್ಲ. ಬಂದ ವಿಪ್ರರನ್ನು ಪೂಜಿಸದೆ ಬಿಡುವುದಿಲ್ಲ. ನೀನು ಒಪ್ಪುವುದಿಲ್ಲ ಎಂದು ಹೇಳಿದ ಎಲ್ಲ ಪದಾರ್ಥಗಳನ್ನು ಸಂಪಾದಿಸಿ, ಬ್ರಾಹ್ಮಣರನ್ನು ಸತ್ಕರಿಸದೆ ಬಿಡೆನು' ಎಂದು ಹೇಳಿದ ಚಂಡಿ ಉತ್ತಮ ಪದಾರ್ಥಗಳನ್ನು ಸಿದ್ಧಪಡಿಸಿ ಬಹು ಶ್ರದ್ಧೆಯಿಂದ ಅಡಿಗೆ ಮಾಡಿದಳು.

ಕೌಂಡಿನ್ಯರ ನುಡಿಯಂತೆ ತನಗೆ ಆಗಬೇಕಾದುದನ್ನು ಹೊರಗೆ ತೋರ್ಪಡಿಸಿ ಕೊಳ್ಳದೆ, ಅದಕ್ಕೆ ಒಪ್ಪದವನಂತೆ ನಟಿಸುತ್ತ ಉದ್ದಾಲಕನು ಶ್ರಾದ್ಧ ನಡೆಯುವಂತೆ ಎಚ್ಚರವಹಿಸಿದನು. ಚಂಡಿಯ ಮಾತಿನಂತೆ ಆ ಶ್ರಾದ್ಧ ಸಾಂಗವಾಗಿ ನೆರವೇರಿತು. ಸಂತಸದಲ್ಲಿ ಸ್ವಲ್ಪಎಚ್ಚರತಪ್ಪಿದ ಆತ ಕೊನೆಯಲ್ಲಿ ವಿರೋಧವಾಗಿ ಹೇಳುವುದನ್ನು ಮರೆತು 'ಪಿಂಡವನ್ನು ತೆಗೆದುಕೊಂಡು ಹೋಗಿ ನೀರಿನಲ್ಲಿ ಬಿಟ್ಟು ಬಾ' ಎಂದು ಹೇಳಿದನು. ಅವಳು ತನ್ನ ಮೊಂಡುತನದ ಲಕ್ಷಣದಿಂದ ಅವನ ನುಡಿಯ ವಿರುದ್ಧಾಚರಣೆಗಾಗಿ ಅದನ್ನು ಬೀದಿಗೆ ಎಸೆದುಬಿಟ್ಟಳು.

ಶ್ರಾದ್ಧವೇ ಕೆಟ್ಟು ವ್ಯರ್ಥವಾಯಿತು. ಆಗ ಉದ್ದಾಲಕನು ಕೋಪಾವಿಷ್ಟನಾಗಿ 'ಎಲೆ ಚಂಡಿ, ನಾನು ನಿನ್ನೊಡನೆ ಎಷ್ಟು ಹೆಣಗಾಡಲಿ? ನಿನ್ನ ಹಟವನ್ನು ನಾನು ಸಹಿಸಲಾರೆನು. ನಿನ್ನ ಸಹವಾಸವೇ ನನಗೆ ಬೇಡ. ನೀನು ಕಲ್ಲಾಗಿ ಹೋಗು' ಎಂದು ಶಾಪವನ್ನು ಕೊಟ್ಟನು.

ಅನಂತರ ಆಕೆಯ ಬಗ್ಗೆ ಕರುಣೆ ಉಂಟಾಗಿ ಶಾಂತ ಚಿತ್ತದಿಂದ 'ಯಜ್ಞದ ಕುದುರೆಯು ಬಂದು; ಬಂಡೆಯಾಗಿ ಬಿದ್ದಿರುವ ನಿನ್ನನ್ನು ತುಳಿದು ಸಿಕ್ಕಿಕೊಂಡು, ಪಾರ್ಥನು ಬಂದು ಬಿಡಿಸಿದಾಗ ನಿನ್ನ ಶಾಪ ಮೋಕ್ಷವಾಗುವುದು' ಎಂದು ಹೇಳಿ ಸನ್ಯಾಸ ತೆಗೆದುಕೊಂಡು ಹೋದನು. ಚಂಡಿ ನೆಲದಲ್ಲಿ ಕಲ್ಲಾಗಿ ಹೋದಳು.

'ಈಗ ಚಂಡಿಗೆ ಶಾಪ ಪರಿಹಾರವಾಗಬೇಕಾಗಿದೆ. ಅದಕ್ಕೆ ಉಪಸಾಕ್ಷಿಯಾಗಿ ಯಜ್ಞ ಕುದುರೆ ಬಂದು ಬಂಡೆಗೆ ತಗುಲಿಕೊಂಡಿದೆ. ನೀನು ಮುಟ್ಟಿದ ಕ್ಷಣದಲ್ಲಿ ಅದು ಎದ್ದು ಹೊರಡುತ್ತದೆ. ಮುಂದೆಸಿಕ್ಕುವ ದೊರೆಗಳು ಶಕ್ತರು. ಶ್ರೀಕೃಷ್ಣನನ್ನು ಮರೆಯದಿರು' ಎಂದು ಸೌಭರಿಯು ಇಂದ್ರಕುಮಾರನಾದ ಅರ್ಜುನನನ್ನು ಕೃಪಾ ದೃಷ್ಟಿಯಿಂದ ನೋಡಿದರು. ಆತ ಅವರಿಗೆ ನಮಸ್ಕರಿಸಿ ಅಲ್ಲಿಂದ ಹೊರಟನು.

ಅರ್ಜುನನು ಮುದದಿಂದ ಕುದುರೆಯನ್ನು ಮುಟ್ಟಿದನು. ಅದು ಮೈ ಕೊಡವಿಕೊಳ್ಳುತ್ತ ಮುಂದಕ್ಕೆ ನಡೆಯಿತು. ಚಂಡಿಗೆ ಶಾಪ ಮೋಕ್ಷವಾಯಿತು. ಬಂಡೆಯ ರೂಪ ತೊಲಗಿ ಸ್ವಸ್ವರೂಪ ಪಡೆದಳು. ಅರ್ಜುನನನ್ನು ಕಂಡು ಅಲ್ಲಿಂದ ತಪಸ್ಸಿಗೆ ಹೊರಟಳು. ಅದನ್ನು ಕಂಡು ಅಲ್ಲಿದ್ದವರಿಗೆಲ್ಲ ಆಶ್ಚರ್ಯವಾಯಿತು. ದೇವತೆಗಳು ಹೂವಿನಮಳೆ ಸುರಿಸಿದರು.

* * *

# ಹಂಸಧ್ವಜ

ಕುದುರೆಯು ದಕ್ಷಿಣಾಭಿಮುಖವಾಗಿ ಹೊರಟು ಚಂಪಕಾನಗರಿಯ ಬಳಿ ಬಂದಿತು. ಆ ನಗರದ ಉಪ್ಪರಿಗೆಗಳು ಮತ್ತು ಕೋಟೆಯು ಸುಣ್ಣ ತೊಡೆದುಕೊಂಡು ಕಾಂತಿಯಿಂದ ಮಂಗಳಮಯವಾಗಿ ಶೋಭಿಸುತ್ತಿದ್ದವು. ಆ ನಗರವು ಪಟ್ಟಣವೆಂಬ ಸ್ತ್ರೀಯ ಡಾಬಿನಂತೆ, ಭೂಮಿಯೆಂಬ ಹೆಂಗಸಿನ ಕೊರಳ ರತ್ನಮಾಲಿಕೆಯಂತೆ, ಇಂದ್ರನ ವಜ್ರಾಯುಧದ ಕಾಂತಿಯಂತೆ ಪ್ರಕಾಶಿಸುತ್ತಿತ್ತು. ಆ ನಗರವನ್ನು ಹಂಸಧ್ವಜನೆಂಬ ಅರಸು ಆಳುತಿದ್ದನು. ಅರ್ಜುನನು ಸೇನೆಸಹಿತವಾಗಿ ಯಜ್ಞದ ಕುದುರೆಯ ಹಿಂದೆ ಬಂದು, ತನ್ನ ಪ್ರದೇಶ ಪ್ರವೇಶಿಸಿರುವುದನ್ನು ಆತ ದೂತರಿಂದ ಕೇಳಿ ತಿಳಿದುಕೊಂಡನು. ಅದನ್ನು ಕುರಿತು ಮಂತ್ರಿಗಳಾದ ಶ್ರದ್ಧಾಯು, ಸುಮತಿ, ಪ್ರಮತಿ ಎಂಬುವರೊಡನೆ ಮಂತ್ರಾಲೋಚನೆ ನಡೆಸಿದನು.

'ಶ್ರೀಕೃಷ್ಣನು ಈ ಧರೆಯಲ್ಲಿ ಇರುತ್ತಿದ್ದರೂ ಈವರೆಗೆ ಆತನ ಮೂರುತಿಯನ್ನು ನಾವು ಕಂಡಿಲ್ಲ. ಈ ಧನಂಜಯನ ಕುದುರೆಯನ್ನು ಕಟ್ಟಿದರೆ, ಮಾಧವನು ಅದನ್ನು ಬಿಡಿಸಿಕೊಳ್ಳಲು ತಾನೇ ಬರುವನು. ನಮಗೆ ದರ್ಶನವನ್ನು ನೀಡುವನು. ಈ ನಿಮಿತ್ತದಿಂದ ನಾವು ಧನ್ಯರಾಗುವೆವು. ಈ ಇಳಿವಯಸ್ಸಿನ ನೆರೆತೆರೆಯು ದೇಹ ನಾಶವನ್ನು ಸೂಚಿಸುತ್ತಿದೆ. ಭಗವಂತನ ದರ್ಶನಕ್ಕಿಂತ ಬೇರೆ ಭಾಗ್ಯವಿಲ್ಲ. ಆತನ ದರ್ಶನದಿಂದ ನಾನು ಕೃತಾರ್ಥನಾಗುವೆನು' ಎಂದು ಹಂಸಧ್ವಜ ಸಭೆಯಲ್ಲಿ ಹರ್ಷದಿಂದ ನುಡಿದನು.

ಜನಮೇಜಯರಾಯನೇ ಕೇಳು. ಶ್ರೀಕೃಷ್ಣ ದರ್ಶನ ನಿಮಿತ್ತವಾಗಿ ಯುದ್ಧ ಮಾಡುವುದು ಸರಿಯೆಂದು ಹಂಸಧ್ವಜ ತೀರ್ಮಾನಿಸಿದನು. ಅವನ ರಾಜ್ಯದ ಕಟ್ಟಳೆ ತುಂಬಾ ಕಠಿಣವಾಗಿತ್ತು. ಕಾನೂನು, ರೀತಿ, ನಿಯಮಗಳಿಗೆ ಒಗ್ಗಿದ; ಧರ್ಮಶಾಸ್ತ್ರ ಬದ್ಧ, ನೀತಿಪ್ರತಿಪಾದಕ ರಾಜ್ಯ ಅದಾಗಿತ್ತು. ಆ ಪಟ್ಟಣದಲ್ಲಿರುವ ಪ್ರತಿಯೊಬ್ಬರು ಏಕಪತ್ನಿ ವ್ರತಸ್ಥರಾಗಿರಬೇಕು. ಹರಿಭಜನೆಯನ್ನು, ದಾನಧರ್ಮಗಳನ್ನು ನಡೆಸಬೇಕು. ತಮ್ಮ ಜಾತಿಪದ್ಧತಿಯನ್ನು ಬಿಡದೆ, ನೀಚವೃತ್ತಿಯನ್ನು ಅನುಸರಿಸದೆ ಇರಬೇಕೆಂಬ ನಿಯಮವಿತ್ತು, ಅದಕ್ಕೆ ವಿರುದ್ಧವಾಗಿ ನಡೆದವರನ್ನು ಆತ ಕ್ಷಮಿಸುತ್ತಿರಲಿಲ್ಲ.

ಹಂಸಧ್ವಜನಿಗೆ ಧನಬಲಂ, ಚಂದ್ರಸೇನಂ, ಚಂದ್ರಕೇತು, ಚಂದ್ರದೇವಂ, ವಿಡೂರಥಂ, ಧರ್ಮವಾಹಂ, ನ್ಯಾಯವರ್ತಿ ಎಂಬ ಏಳು ಜನ ತಮ್ಮಂದಿರಿದ್ದರು. ಸುದರ್ಶನ, ಸುಧನ್ವ, ಸುಮನ, ಸುರಥ ಎಂಬ ನಾಲ್ಕುಜನ ಮಕ್ಕಳಿದ್ದರು. ಅವರೆಲ್ಲರೂ ಮಹಾಬಲರು, ಪರಿಶುದ್ಧರು, ಧರ್ಮಜ್ಞರು, ಅಪ್ರತಿಮರು, ಪರಾಕ್ರಮಶಾಲಿ ವೀರರು ಆಗಿದ್ದರು.

ಆ ರಾಜನಿಗೆ ಶಂಖ, ಲಿಖಿತ ಎಂಬ ಹೆಸರಿನ ಸಹೋದರರು ಪುರೋಹಿತರಾಗಿದ್ದರು. ಅವರು ಧರ್ಮಾತ್ಮರು, ನ್ಯಾಯಪರರು ಆಗಿದ್ದರು. ಶಂಖನು ಒಮ್ಮೆ ಲಿಖಿತನ ಪರ್ಣಶಾಲೆಗೆ ಬರುವಾಗ ಮರದಿಂದ ಉದುರಿದ್ದ ಹಣ್ಣನ್ನು ಯಾರಿಗೂ ತಿಳಿಸದೆ ತಿಂದನು. ಆಗ ಲಿಖಿತನು ಆತ ಕದ್ದತಪ್ಪಿಗೆ ಗುರಿಯಾಗಿದ್ದಾನೆಂದು ಹಂಸಧ್ವಜನಿಗೆ ದೂರು ನೀಡಿದನು. ರಾಜನು ವಿಚಾರಿಸಿ ಶಂಖನ ಕೈಕತ್ತರಿಸಲು ಆಜ್ಞೆ ಮಾಡಿದನು. ಅನಂತರ ಲಿಖಿತನು ತನ್ನ ತಪಶ್ಶಕ್ತಿಯಿಂದ ಶಂಖನಿಗೆ ಕೈ ಬರುವಂತೆ ಮಾಡಿದನು.

ಜನಮೇಜಯರಾಜನೇ ಕೇಳು. ಹಂಸಧ್ವಜನು ಶಂಖ ಲಿಖಿತರು ಹೇಳಿದಂತೆ ನಡೆಯುತ್ತಿದ್ದನು. ಆ ರಾಜನು ರಣದುಂದುಭಿಯ ಸಂಜ್ಞೆಯನ್ನು ಅರಿತು, ಬೇಗನೆ ಯದ್ಧಕ್ಕೆ ಹೊರಡದೆ ಹಿಮ್ಮೆಟ್ಟಿ ನಿಂತ ಭಟರನ್ನು ಉಕ್ಕುವ ಎಣ್ಣೆಕೊಪ್ಪರಿಗೆ ಯೊಳಗೆ ಹಾಕಿಸಿ ಬಿಡುವುದೆಂದು ಆಜ್ಞೆ ಮಾಡಿದ್ದನು.

ರಾಜನು ಯುದ್ಧಕ್ಕೆ ಸನ್ನದ್ಧರಾಗಲು ಡಂಗೂರ ಸಾರಿದ ತಕ್ಷಣ ಅವನ ಚತುರಂಗಸೈನ್ಯ ಆ ಕ್ಷಣದಲ್ಲಿ ಸಿದ್ಧವಾಗಿ ಬಂದು ಕೂಡಿತು. ಶ್ರೀಕೃಷ್ಣನು ಯುದ್ಧಕ್ಕೆ ಬಂದು ನಿಲ್ಲದೆ ಹೋದರೆ ಅರ್ಜುನನಿಗೆ ಹಂಸಧ್ವಜ ಸೋಲುವವನಲ್ಲ. ಕೃಷ್ಣನ ದರ್ಶನ ಎಲ್ಲರಿಗೂ ಸುಲಭವಾಗಿ ಲಭಿಸುವುದು. ಸಂಸಾರಿಗಳಾದವರಿಗೆ ಕೃಷ್ಣನ ದರ್ಶನ ಭಾಗ್ಯವಾಗುತ್ತದೆ ಎಂಬ ಭಕ್ತಿಭಾವದಲ್ಲಿ ಸಂತೋಷದಿಂದ ಸಮರ್ಥ ಭಟರು ಯುದ್ಧಕ್ಕೆ ಹೊರಟು ನಿಂತರು. ಅವರ ಪತ್ನಿಯರು ಅವರನ್ನು ಉಪಚರಿಸಿ, ಗಂಧ ತಾಂಬೂಲಗಳನ್ನು ಕೊಟ್ಟರು. ಮಂತ್ರಾಕ್ಷತೆಯನ್ನು ಎರಚಿ ಆಲಂಗಿಸಿಕೊಂಡರು. ಮಂಗಳಕರವಾದ ಮಾತುಗಳನ್ನಾಡಿ ಯುದ್ಧಕ್ಕೆ ಬೀಳ್ಕೊಟ್ಟರು. ಶ್ರೀಕೃಷ್ಣನ ದರ್ಶನಾರ್ಥವಾಗಿ ಉಪ್ಪರಿಗೆಏರಿ ಕಾಯತೊಡಗಿದರು.

* * *

ಭೂಹಿತ ಚರಿತ್ರ ಜನಮೇಜಯರಾಜನೇ ಕೇಳು. ಎಲ್ಲ ಯೋಧರು ಯುದ್ಧಕ್ಕೆ ಹೊರಟ ನಂತರ, ಹಂಸಧ್ವಜನ ಮುದ್ದಿನ ಮಗನಾದ ಸುಧನ್ವನು ಯಜ್ಞಾಶ್ವವನ್ನು ಒಂದುಕಡೆ ಕಟ್ಟಿಹಾಕಿದನು. ತಾಯಿಯ ಬಳಿ ಬಂದು ಸಾಷ್ಟಾಂಗ ನಮಸ್ಕಾರ ಮಾಡಿದನು, ಯುದ್ಧದಲ್ಲಿ ಪರಾಕ್ರಮ ತೋರಿಸಲು ಆಶೀರ್ವಾದಮಾಡಿ ಎಂದು ಬೇಡಿಕೊಂಡನು. ತಾಯಿಯು,

'ಮಗನೆ, ಅರ್ಜುನನು ನಾಲ್ಕುಕಾಲಿನ ಹರಿ (ಕುದುರೆ) ಯನ್ನು ರಕ್ಷಿಸುತ್ತಿರುವನು. ನಿನಗೆ ಅದರ ಆಲೋಚನೆ ಬೇಡ. ಅರ್ಜುನನನ್ನೇ ರಕ್ಷಿಸುವ ಹರಿಯನ್ನು ಹಿಡಿಯುವ ಮನಸ್ಸುಮಾಡು. ಹಿಂದೆ ನಾನು ನಾರದ ಮುನಿಯಿಂದ ಶ್ರೀಕೃಷ್ಣನ ಮಾನವಲೀಲೆಯನ್ನು ಕೇಳಿದ್ದೆ. ಈಗ ಆತ ಪ್ರತ್ಯಕ್ಷನಾಗಿ ಕಂಡರೆ, ಕಣ್ಣಾರೆ ನೋಡಿ ಧನ್ಯಳಾಗುವೆ.'

'ಅಮ್ಮ, ಕೈಯನ್ನು ಹಿಡಿದೆಳೆದರೆ ಮೈತಾನೆ ಬರುವ ಹಾಗೆ; ಯುದ್ಧದಲ್ಲಿ ಅರ್ಜುನನನ್ನು ಗಾಸಿಪಡಿಸಿದರೆ, ಆತನನ್ನು ರಕ್ಷಿಸಲು ಶ್ರೀಕೃಷ್ಣ ಬಂದೇ ಬರುವನು. ಆಗ ಆತನೆದುರಿಗೆ ನನ್ನ ಸಾಹಸವನ್ನು ತೋರುವೆನು.'

'ಕೃಷ್ಣನನ್ನು ಯುದ್ಧದಲ್ಲಿ ಜಯಿಸುವುದು ಕಷ್ಟ. ಆದರೂ ಹಿಮ್ಮೆಟ್ಟಬೇಡ'.

'ಎಲೆ ತಾಯಿ, ಕೃಷ್ಣನಿಗೆ ಸೋತು ಹಿಂದಿರುಗಿದರೆ ನಿನ್ನ ಹೊಟ್ಟೆಯಲ್ಲಿ ಹುಟ್ಟಿದವನೇ? ಹಂಸಧ್ವಜನ ಮಗನೇ? ವಿಷ್ಣು ಭಕ್ತನೇ? ವೀರನೇ? ಶೂರನೇ? ಅರ್ಜುನನ ಶೌರ್ಯವನ್ನು ಕುಗ್ಗಿಸಿ ಅಚ್ಯುತನ ಮುಂದೆ ನನ್ನ ವಿಕ್ರಮವನ್ನು ತೋರಿಸುವೆನು, ನಾನು ವಿಮುಖನಾಗುವುದಿಲ್ಲ. ಜಯಾಪಜಯಗಳು ಪುಣ್ಯವಶವಾದವುಗಳು'. ಸುಧನ್ವನ ಆ ನುಡಿ ಕೇಳುತ್ತ ಅಕ್ಕನಾದ ಕುವಲೆಯು ಬಂದು.

'ಎಲೈ ತಮ್ಮನೆ; ನೀನು ಯುದ್ಧದಲ್ಲಿ ಶೌರಿಗೆ ಸೋತು ವಿಮುಖನಾದರೆ, ನಾನು ಮಾವನ ಮನೆಯಲ್ಲಿ ತಲೆಯೆತ್ತಿ ಓಡಾಡುವುದು ಹೇಗೆ? ಯುದ್ಧದಲ್ಲಿ ಕೃಷ್ಣನನ್ನು ಮೆಚ್ಚಿಸು'ಎಂದು ಹೇಳಿ ಆರತಿಬೆಳಗಿ ವೀಳೆಯವನ್ನು ಕೊಟ್ಟಳು.

ಸುಧನ್ವನು ಅಲ್ಲಿಂದ ಹೊರಟು ತನ್ನ ಮನೆಯಬಳಿಗೆ ಬಂದನು. ಆತನ ರಾಣಿ

ಪ್ರಭಾವತಿಯು ಚಿನ್ನದ ತಟ್ಟೆಯಲ್ಲಿ ಗಂಧ ಪುಷ್ಪ ತಾಂಬೂಲಗಳೊಡನೆ ಮನ್ಮಥನ ಜಯಸಿರಿಯಂತೆ ಪ್ರೀತಿಯಿಂದ ಎದುರುಗೊಂಡಳು. ಆ ರಾಣಿಯು ಚಂದ್ರಬಿಂಬದ ಮುಖದಿಂದ, ಬೆಳ್ದಿಂಗಳ ಎಳೆನಗೆಯಿಂದ, ಹಣೆಯಲ್ಲಿ ಚಂದ್ರ ತಿಲಕವಿಟ್ಟು ಮನಸ್ಸಿನ ಅನುರಾಗವು ಸೊಗಸುವಂತೆ ಪ್ರಕಾಶಿಸುತ್ತಿದ್ದಳು. ಅವಳು ಅನಿರ್ವಚನೀಯ ಸೊಬಗಿನಿಂದಿದ್ದಳು.ಅವಳನ್ನು ಕಡೆಗಣ್ಣಿನಲ್ಲಿ ಈಕ್ಷಿಸಿ ಸರಸ ಪರಿಮಳ ಸಂಪಿಗೆಯನ್ನು ಕೈಗೆ ತೆಗೆದುಕೊಂಡ ಸುಧನ್ವನು ಯುದ್ಧಕ್ಕೆ ಹೊರಡುವ ಕುತೂಹಲದಲ್ಲಿ ಹೇಳಿದನು:

'ಪ್ರಿಯೆ ಕೇಳು. ಇಂದಿನ ಯುದ್ಧದಲ್ಲಿ ಅರ್ಜುನನ ಗರ್ವ ಭಂಗಪಡಿಸುವೆನು. ಕೃಷ್ಣ ಎದುರಾದರೆ ಅವನ ಮುಂದೆ ನನ್ನ ತೋಳ್ಬಲ ಪ್ರದರ್ಶಿಸಿ ಜಯವನ್ನು ಹೊಂದುವೆನು. ತಪ್ಪಿದರೆ ಪುನರ್ಜನ್ಮವಿಲ್ಲದ ವೀರಸ್ವರ್ಗ ಪಡೆಯುವೆನು. ನೀನು ಕಳವಳ ಪಡಬೇಡ.'

'ರಮಣನೇ ಕೇಳು. ಶ್ರೀಕೃಷ್ಣನಿಗೆ ಎದುರಾಗಿನಿಂತಮೇಲೆ ಮುಕ್ತಿಯಲ್ಲದೆ ಜಯ ಉಂಟೆ? ನಿನಗೆ ವಿವೇಕ ಸಾಲದು. ಸಂತತಿಯಿಲ್ಲದವನಿಗೆ ಬರಿಯ ವೈರಾಗ್ಯದಿಂದ ಮುಕ್ತಿ ದೊರೆಯುವುದೆ? ಸಂಸಾರಿಯಾದವನಿಗೆ ಸಂತಾನವಿಲ್ಲದೆ ಯುದ್ಧದಲ್ಲಿ ಮುಕ್ತಿ ದೊರಕದು. ನನಗೆ ಪುತ್ರಸಂತಾನ ಫಲನೀಡಿ ಯುದ್ಧಕ್ಕೆ ಹೊರಡು' ಎಂದು ತಡೆದು ಪ್ರೇಮಪಲ್ಲವಿಸಿದ ಇಡೀ ದೇಹದಿಂದ ಅವನನ್ನು ತಬ್ಬಿದಳು. ಪ್ರಿಯನ ತೊಡೆಯ ಮೇಲೆ ಕುಳಿತು, ಮಿಡಿದೊಡೆ ಅಮೃತರಸದಿಂದ ಶೋಭಿಸುವ ಸುವರ್ಣ ಕುಂಭದಂತಿರುವ ಕುಚವನ್ನು ಅವನಎದೆಗೆ ಒತ್ತಿದಳು. ಅಮೃತಾಲಿಂಗನಕ್ಕೆ ಅವಳ ಕೊರಳಲ್ಲಿದ್ದ ಮುಕ್ತಾಹಾರ ಕಿತ್ತು ಒಂದೊಂದೇಮುತ್ತು ಜಾರಿಬೀಳುತ್ತಿದ್ದುದು ಅವಳ ಒತ್ತಿದಕುಚ ದ್ರವಿಸಿದ ಹಾಲಿನ ಹನಿಯಂತಿದ್ದವು.

ಸುಧನ್ವನನ್ನು ತಬ್ಬಿದ ಅವಳೆರಡು ತೋಳುಗಳು ಚಂದನ ವೃಕ್ಷಕ್ಕೆ ಸುತ್ತಿಕೊಂಡ ಸರ್ಪದಂತೆಯೂ, ಆನೆಯನ್ನು ಕಟ್ಟುವ ಸ್ಥಂಭಕ್ಕೆ ಸುತ್ತಿಕೊಂಡಿರುವ ಮನ್ಮಥನ ಆನೆಯ ಸೊಂಡಿಲಿನಂತೆಯೂ, ಪತಿಯ ದೇಹವೆಂಬ ಕಲ್ಪವೃಕ್ಷಕ್ಕೆ ಹಬ್ಬಿಕೊಂಡ ಕೋಮಲ ಬಳ್ಳಿಯಂತೆಯೂ ಪ್ರಕಾಶಿಸುತ್ತಿದ್ದವು.

ಕಾಮದ ಕಾವಿನ ಶೃಂಗಾರ ಚೇಷ್ಟೆಯಲ್ಲಿ ಮನ್ಮಥನ ಸಮರತಿ ಯುದ್ಧದಲ್ಲಿ ಆ ದಂಪತಿಗಳು ಒಂದಾದರು. ಅನಂತರ ಅವಳ ಅನುಮತಿ ಪಡೆದು ಸುಧನ್ವನು ಯುದ್ಧಕ್ಕೆ ಹೊರಟನು.

* * *

ದೊರೆ ಹಂಸಧ್ವಜನು ಯುದ್ಧಕ್ಕೆ ಹೊರಡುತ್ತ, ಬಲಶಾಲಿಯಾದ ಮಗ ಸುಧನ್ವನು ಸೇನೆಯಲ್ಲಿ ಕಾಣದ್ದಕ್ಕೆ ಕೋಪಗೊಂಡನು. ತನ್ನ ಬಳಿಯಿದ್ದ ಸುಮತಿಗೆ ಸುಧನ್ವನನ್ನು ಹಿಡಿದುತರಲು ಆಜ್ಞೆ ಮಾಡಿದನು. ಕಟುಕರಂತೆ ಕ್ರೂರವಾದ ಸೇವಕರು ಸುಧನ್ವನನ್ನು ಹಿಡಿಯಲು ಬಂದಾಗ ಆತ ನಗುತ್ತಿದ್ದನು. ಅವರು ಆತನ ಕೈಗಳನ್ನು ಕಟ್ಟಿ ಕಳ್ಳನನ್ನು ಹಿಡಿದುತರುವಂತೆ ನಿಷ್ಠುರವಾಗಿ ದೊರೆಯ ಬಳಿಗೆ ಎಳೆದುಕೊಂಡು ಬಂದರು. ಅದೇ ಸ್ಥಿತಿಯಲ್ಲಿ ಸುಧನ್ವನು ತಂದೆಗೆ ನಮಸ್ಕರಿಸಿದನು. ಕೋಪದಿಂದಿದ್ದ ಹಂಸಧ್ವಜನು 'ಎಲವೊ ಮೂರ್ಖ, ನನ್ನ ಆಜ್ಞೆ ತಿಳಿದಿದ್ದರೂ; ಕೃಷ್ಣನ ದರ್ಶನಕ್ಕೆ ಬಾರದೆ, ರಣೋತ್ಸಾಹತೊರೆದು ಪಟ್ಟಣದಲ್ಲಿ ಏಕೆ ತಡಮಾಡಿನಿಂತೆ?' ಎಂದು ಕೇಳಿದನು. ಆಗ ಮಗನು ನಾಚಿಕೆಯಿಂದ ಪತ್ನಿಯ ಸಂತಾನಾಪೇಕ್ಷೆಗಾಗಿ ಉಳಿದುದನ್ನು ತಿಳಿಸಿದನು. ರಾಜ ಹಂಸಧ್ವಜನು ಮಗನು

ಸುಳ್ಳು ಹೇಳುತ್ತಿರುವನೆಂದು ತಿಳಿದನು. ಆ ಮೋಸಕ್ಕೆ ಪ್ರತೀಕಾರವನ್ನು ಮಾಡಲು ಪುರೋಹಿತರಾದ ಶಂಖ ಲಿಖಿತರನ್ನು ಕರೆ ತರಲು ತಿಳಿಸಿದನು.

ಎಲ್ಲ ವಿಷಯವನ್ನು ತಿಳಿದುಬಂದ ಪುರೋಹಿತರು ರಾಜನನ್ನು ಉದ್ದೇಶಿಸಿ 'ನೀನು ಮಗನಮೇಲೆ ಪಕ್ಷಪಾತ ತೋರಿಸಿ, ಮಾತಿಗೆ ತಪ್ಪಿದರೆ ನಾವು ಚಂಪಕಾಪುರವನ್ನು ಬಿಟ್ಟು ಹೋಗುವೆವು. ಸತ್ಯಾಚರಣೆಗಾಗಿ ರುಕ್ಮಾಂಗದ, ಹರಿಶ್ಚಂದ್ರ ಭೂಪಾಲಕರು ತಮ್ಮ ಮಕ್ಕಳ ಮುಖನೋಡಿ ದಾಕ್ಷಿಣ್ಯವನ್ನು ವಹಿಸಿದರೆ?' ಎಂದು ನುಡಿದರು. ಆಗ ರಾಜನು ಮಂತ್ರಿ ಸುಮತಿಯನ್ನು ಕರೆದು 'ಈ ನೀಚನನ್ನು ಕರೆದುಕೊಂಡು ಹೋಗಿ ತಳತಳನೆ ಕುದಿಯುತ್ತಿರುವ ಎಣ್ಣೆತುಂಬಿದ ಕೊಪ್ಪರಿಗೆಯಲ್ಲಿ ಹಾಕಿ' ಎಂದು ಆಜ್ಞೆ ಮಾಡಿದನು.

ಮಂತ್ರಿಯು ಸುಧನ್ವನನ್ನು ಕುರಿತು,

'ಅಪ್ಪಾ ನಿನಗೆ ಈ ದುರವಸ್ಥೆ ಬರಬಹುದೆ? ನೀನು ವಿಖ್ಯಾತ ವಿಷ್ಣುಭಕ್ತ. ಮಾತಾ ಪಿತೃಪ್ರಿಯ, ಪಂಡಿತ, ನೀತಿವಿದ; ಆಚಾರ ಸಂಪನ್ನ, ಶ್ರೇಷ್ಠ ದಾನಿ. ನಿನ್ನನ್ನು ಕುದಿವ ಎಣ್ಣೆಗೆ ಹೇಗೆ ಹಾಕಿಸಲಿ ?'

'ಎಲೈ ಸುಮತಿಯೆ, ಈ ಕಾರ್ಯ ಮಾಡುವುದಕ್ಕೆ ಅಂಜಬೇಡ. ನಾನು ಧರ್ಮ ವಿರುದ್ಧವಾಗಿ ನಡೆದುಕೊಂಡಿಲ್ಲ. ಯುದ್ಧದಲ್ಲಿ ಹೊಡೆದಾಡಿ ಸುಖದಿಂದ ಸಾಯಬೇಕಾದ ಈ ದೇಹ ಇಂತಹ ಕಷ್ಟಕ್ಕೆಸಿಕ್ಕಿ ನಾಶವಾಗುತ್ತದೆ ಎಂಬ ಭಯ ಉಂಟಾಗಿದೆ. ಆದರೂ ನಾನು ಶ್ರೀಕೃಷ್ಣನ ಮೊರೆ ಹೋಗುವೆನು. ಹೆದರದೆ ನನ್ನ ತಂದೆಯ ಆಜ್ಞೆಯಂತೆ ಕುದಿವಎಣ್ಣೆಗೆ ಹಾಕಿಸು.'

ಸುಮತಿಯು ಸುಧನ್ವನನ್ನುಎತ್ತಿ ಎಣ್ಣೆಗೆಹಾಕಿಸಿದನು. ಇಡೀ ಪರಿವಾರ ಸುಧನ್ವನನ್ನು ಭಲೇ ಎಂದು ಶ್ಲಾಘಿಸಿತು. ಅಯ್ಯೋ ಎಂದು ವ್ಯಥೆಪಟ್ಟಿತು. ಯಾವುದೋ ಒಂದು ನೆವದಿಂದ ಸುಕುಮಾರನನ್ನು ಹೀಗೆ ಕೊಂದ ಈ ರಾಜನ ತಿಳಿವಳಿಕೆಗೆ ಬೆಂಕಿ ಬೀಳಲಿ. ಯಮನಂತೆ ದಯಾ ಶೂನ್ಯರಾದ ಶಂಖ ಲಿಖಿತರು ಬ್ರಾಹ್ಮಣರ ಜಾತಿಯಲ್ಲಿ ಹುಟ್ಟಬಹುದೆ? ಎಂದು ಮೊರೆಯಿಡುತ್ತಿದ್ದರು.

ಸುಧನ್ವನು ಕುದಿವ ಕೊಪ್ಪರಿಗೆಯಲ್ಲಿ ನಿರ್ಭಯನಾಗಿದ್ದನು. 'ಎಲೈ ಕೃಷ್ಣದೇವ, ಪೂರ್ವದಲ್ಲಿ ಹಿರಣ್ಯಕಶಿಪುವಿನ ಮಗನಾದ ಪ್ರಹ್ಲಾದನನ್ನು ರಕ್ಷಿಸಿದೆಯಲ್ಲವೇ? ದ್ರುಪದರಾಜನ ಮಗಳಾದ ದ್ರೌಪದಿಯ ಮಾನವನ್ನು ಕಾಪಾಡಿದೆಯಲ್ಲವೇ? ನಿನ್ನ ಹೆಸರುಹಿಡಿದು ಕೂಗಿದ ಮಾತ್ರಕ್ಕೆ ಭಕ್ತರಕಷ್ಟವನ್ನು ಪರಿಹಾರ ಮಾಡುವೆಯಲ್ಲವೇ? ಕೃಷ್ಣನೇ ಈ ಕಷ್ಟದಿಂದ ರಕ್ಷಿಸು' ಎಂದು ವಿಧವಿಧವಾಗಿ ನೆನೆದು ಆತನ ಧ್ಯಾನದಲ್ಲಿ ಲೀನವಾದನು.

ಜನಮೇಜಯರಾಜನೇ ಆಶ್ಚರ್ಯವನ್ನು ಕೇಳು. ನೋಡಿದ ಮಾತ್ರಕ್ಕೆ ರೆಪ್ಪೆ ಸುಟ್ಟುಹೋಗುವಂತೆ ಕುದಿವ ಕೊಪ್ಪರಿಗೆ ಎಣ್ಣೆಯು ಹರಿಸ್ಮರಣೆಯ ಸುಧನ್ವನ ದೇಹಕ್ಕೆ ಶ್ರೀಗಂಧದ ಲೇಪದಂತೆ ತಂಪಾಗಿ ಸುಖದಾಯಕವಾಗಿತ್ತು. ಅವನ ಕೂದಲು ಕುಂದಲಿಲ್ಲ. ಅವನ ಕೋಮಲಾಂಗದ ಹೊಳಪು ಕಡಿಮೆಯಾಗಲಿಲ್ಲ. ಅವನ ಕೊರಳ ತುಳಸಿ ಬಾಡಲಿಲ್ಲ. ಅವನ ಮುಖ ಸೂರ್ಯೋದಯಕಾಲದ ಕಮಲದಂತೆ ನಳನಳಿಸುತ್ತಿತ್ತು.

ಸಮಸ್ತ ಜನರು ಆಶ್ಚರ್ಯಗೊಂಡರು. ಪುಂಡಾರೀಕಾಕ್ಷನನ್ನು ಸ್ತುತಿಸಿದರು. ಸುಧನ್ವನು ಅಗ್ನಿಸ್ತಂಭನವನ್ನು ತಿಳಿದಿದ್ದಾನೆ. ಹಾಗಾಗಿ ಅಗ್ನಿಯಶಕ್ತಿಯನ್ನು ಕಟ್ಟಿಹಾಕಿದ್ದಾನೆ ಎಂದು

ಭಾವಿಸಿದ ಪುರೋಹಿತ ಲಿಖಿತನು ಕೋಪಗೊಂಡನು. ಎಳನೀರನ್ನುತರಿಸಿ ಎಣ್ಣೆಗೆಸುರಿಸಿದನು. ಉರಿಯು ಆಕಾಶವನ್ನು ಮುಟ್ಟಿತು. ಸಿಡಿದ ಚಿಪ್ಪುಗಳು ಶಂಖ ಲಿಖಿತರ ಕೆನ್ನೆಗಳಿಗೆ ಬಂದು ಅಪ್ಪಳಿಸಿದವು.

ಸುಧನ್ವನು ಹರಿಯನಾಮವನ್ನು ಜಪಿಸುತ್ತ ಆನಂದದಿಂದಿದ್ದನು. ಆತನ ಶಾಂತ ಸುಖದ ಮನಸ್ಸನ್ನುಕಂಡ ಲಿಖಿತನು ತನ್ನ ಅವಿವೇಕ ವರ್ತನೆಗೆ ವ್ಯಥೆಪಟ್ಟನು. ವಿಷ್ಣುವಿನ ಭಕ್ತರಿಗೆ ಕೇಡನ್ನುಂಟು ಮಾಡಿದುದಕ್ಕೆ ಪರಿಹಾರವೇನೂಇಲ್ಲ ಎಂಬ ನಿಶ್ಚಯಕ್ಕೆ ಬಂದನು. ಪ್ರಾಯಶ್ಚಿತ್ತವಾಗಿ ಕುದಿವ ಎಣ್ಣೆಕೊಪ್ಪರಿಗೆಯಲ್ಲಿ ತಾನೇ ಬಿದ್ದುಬಿಟ್ಟನು. ಆಶ್ಚರ್ಯವೆಂದರೆ ಲಿಖಿತನಿಗೂ ಅದು ತಂಪುತಾಣವಾಗಿತ್ತು. ಸುಧನ್ವನ ಸಂಗವು ಎಷ್ಟು ಉತ್ಕೃಷ್ಟವಾದುದೊ! ಹರಿಭಕ್ತರಬಳಿ ಸೇರಿದವನಿಗೆ ದುಃಖವು ಉಂಟಾಗಲು ಸಾಧ್ಯವೆ?

ಸುಧನ್ವ ಮತ್ತು ಲಿಖಿತರು ಕುದಿವ ಎಣ್ಣೆಯಲ್ಲಿ ಸುಖದಿಂದಿರುವುದನ್ನು ಕಂಡ ಹಂಸಧ್ವಜ ಆಶ್ಚರ್ಯಚಕಿತನಾದನು. ಪ್ರೀತಿಯಿಂದ ಅವರಿಬ್ಬರನ್ನೂ ಕೊಪ್ಪರಿಗೆಯಿಂದೀಚೆಗೆ ತೆಗೆಸಿದನು. ತಬ್ಬಿಕೊಂಡು ಸಂತಸಪಟ್ಟನು.

ಸುಧನ್ವನು ಸ್ನಾನಮಾಡಿ ದಿವ್ಯವಾದ ವಸ್ತ್ರವನ್ನುಟ್ಟನು. ಶ್ರೀಗಂಧವನ್ನು ಲೇಪಿಸಿಕೊಂಡು ಸುವಾಸನೆಯಹೂ ಮುಡಿದನು. ಹಣೆಗೆ ಕಸ್ತೂರಿ ತಿಲಕವಿಟ್ಟುಕೊಂಡು ರತ್ನಾಭರಣಗಳನ್ನು ಧರಿಸಿಕೊಂಡನು. ವೀಳೆಯವನ್ನು ತೆಗೆದುಕೊಂಡು ತನ್ನನ್ನು ಉಳಿಸಿದ ದೇವಪುರದ ಶ್ರೀಲಕ್ಷ್ಮೀಕಾಂತನನ್ನು ನೋಡುವ ಹರ್ಷದಿಂದ ಕಾಂತಿಯುತನಾಗಿ ಪ್ರಕಾಶಿಸಿದನು.

**ಸುಧನ್ವನ ಕಾಳಗ**

ಎಲೈ ಭರತಕುಲರತ್ನ ಜನಮೇಜಯನೇ ಕೇಳು. ಸತ್ಯದ ಮತ್ತು ಭಕ್ತಿಯ ಅನುಭವಕ್ಕೆ ಒಳಗಾದ ಪುರೋಹಿತ ಲಿಖಿತನು ರಾಜ ಹಂಸಧ್ವಜನಲ್ಲಿ ವಿಷಾದದಿಂದ ನುಡಿದನು. 'ದೊರೆಯೇ ನಿನ್ನ ಮಗನ ಕಾರಣದಿಂದ ನಮ್ಮ ಈ ಭೂಮಿ, ಜನ, ದೇಶ, ಪರಿವಾರ, ಪಶುಪಕ್ಷಿ, ಗಿಡಮರ ಬಳ್ಳಿಗಳು ಧನ್ಯವಾದುವು. ನೀನು ಪುಣ್ಯಶಾಲಿ, ಕೃತಾರ್ಥ. ನಾನು ಮಾಡಿದ ದ್ರೋಹದಿಂದ ಸೂರ್ಯರಶ್ಮಿ ಕಾಣದ ಗೂಬೆಯ ಹಾಗೆ ಅಜ್ಞಾನಿಯೂ ನೀಚನೂ ಆಗಿರುವೆ.'

ಆತನನ್ನು ಇನ್ನೋರ್ವ ಪುರೋಹಿತ ಶಂಖನು ಸಮಾಧಾನಪಡಿಸುತ್ತ ಹೇಳಿದನು. 'ವಿಷ್ಣುವಿನ ಭಕ್ತರಿಗೆ ಕಷ್ಟಗಳೆಲ್ಲಿಂದ ಬರುವುವು? ಬೇಸಗೆಯ ಝಳಕ್ಕೆ ಬೆಳದಿಂಗಳು ಬೆವರುವುದೆ? ಸುಧನ್ವನ ಮಹಿಮೆಯನ್ನು ತಿಳಿಯದೆ ಅರಿ ಮರುಳಾದೆವು (ತಿಳಿದೂ ತಿಳಿಯದ ಮೂಢರಾದೆವು). ಇನ್ನು ಬರಿ ಮಾತು ಬೇಡ. ಸುಧನ್ವನನ್ನು ಯುದ್ಧಕ್ಕೆ ಕಳುಹಿಸಿ.'

ದೊರೆಯು ಮಗ ಸುಧನ್ವನನ್ನು ಸಂತೋಷದಿಂದ ಬಿಗಿದು ಅಪ್ಪಿಕೊಂಡು ಆನಂದಬಾಷ್ಪ ಸುರಿಸಿದನು., ಸುಧನ್ವ ಎಂದರೆ ಹೂವುಗಳೇ ಬಿಲ್ಲಾಗಿರುವ ಮನ್ಮಥನ ಸುಂದರರೂಪು. ಆತ ತಂದೆಗೆ, ಪುರೋಹಿತರಿಗೆ ವಂದಿಸಿದನು. ಅವರಿಂದ ಆಶೀರ್ವಾದ ಪಡೆದನು. ಚಿನ್ನದರಥಕ್ಕೆ ಧ್ವಜವನ್ನುಕಟ್ಟಿಸಿ ಕುದುರೆಗಳನ್ನೂಡಿದನು. ಚಿನ್ನದಹಾರ, ಆಭರಣ, ಹೂ ಚಂದನಗಳಿಂದ ಅಲಂಕೃತನಾಗಿ ರಥ ಏರಿದನು.

ಗುಣಮಣಿ, ಧರಣಿಪಾಗ್ರಣಿಯಾದ ಜನಮೇಜಯನೇ ಕೇಳು. ತಮಟೆ, ಭೇರಿ, ತುತ್ತೂರಿ ವಾದ್ಯಗಳು ಭೋರ್ಗರೆದುವು. ಶೂರರಾದ ಯೋಧರು ತಮ್ಮ ತೋಳನ್ನು ತಟ್ಟುತ್ತ, ಆರ್ಭಟಿಸಿ ಸಂತೋಷದಿಂದ ಯುದ್ಧಕ್ಕೆ ಹೊರಟರು. ಆ ಸೈನ್ಯವು ಒಂದೂವರೆ ಯೋಜನೆ

ವಿಸ್ತಾರವಾಗಿ ಗಜ, ತುರಗ, ರಥಗಳ ಸಾಲಿನಿಂದ ಕೂಡಿ ಅರ್ಜುನನ ಮೇಲೆ ವಿಜಯ ಸಾಧಿಸಲು ಮುನ್ನಡೆಯಿತು. ಸೇನೆಯ ತುಳಿತದಿಂದ ಎದ್ದ ಕೆಂದೂಳು ಆಕಾಶವನ್ನೆಲ್ಲ ವ್ಯಾಪಿಸಿತು. ಸೈನ್ಯದ ಆನೆಗಳು ತಮ್ಮ ಮೊಗಗೈಗಳಿಂದ ಅಂದರೆ ಸೊಂಡಿಲಿನಿಂದ ನೀರನ್ನುತುಂಬಿಕೊಂಡು ತಮ್ಮೊಡಲಮೇಲೆ ಚೆಲ್ಲಿಕೊಳ್ಳಲು ಅಲ್ಲಿ ನೀರುತುಂಬಿ ಕೆಸರಾಯಿತು. ಆ ಕೆಸರಿನಲ್ಲಿ ದೊರೆಗಳು ಧರಿಸಿದ್ದ ಸುವರ್ಣಾಭರಣಗಳ ಕಾಂತಿ ಎಳೆಬಿಸಿಲಿನಂತೆ ವ್ಯಾಪಿಸಿತು. ರಾಜ ಹಂಸಧ್ವಜನ ಆಜ್ಞೆಯ ಪ್ರಕಾರ, ಅವನ ಸೈನಿಕರು ಪದ್ಮವ್ಯೂಹವನ್ನುರಚಿಸಿ, ಮಧ್ಯದಲ್ಲಿ ಯಜ್ಞಾಶ್ವವನ್ನು ಹಿಡಿದು ಕಟ್ಟಿದರು. ಮಹಾಶೂರರು ಇದ್ದರೆ ಯುದ್ಧಕ್ಕೆ ಬರಬಹುದೆಂದು ಒತ್ತಾಗಿ ನಿಂತರು. ಆ ವೃತ್ತಾಂತವನ್ನು ಚಾರರು ಅರ್ಜುನನಿಗೆ ತಿಳಿಸಿದರು.

ಅರ್ಜುನ ಪ್ರದ್ಯುಮ್ನನನ್ನು ಕರೆದು ಕೇಳಿದ:

'ಈಗ ವಿಘ್ನ ಒದಗಿದೆ. ಪರಿಹರಿಸುವ ಉಪಾಯವೇನು?'

'ಎಲೈ ಅರ್ಜುನನೆ, ನನ್ನ ತಂದೆಯಾದ ಶ್ರೀಕೃಷ್ಣನು ಕುದುರೆಯ ಮೇಲ್ವಿಚಾರಣೆಗಾಗಿ ನಿನ್ನನ್ನು ಕಳುಹಿಸುವಾಗ, ಸಹಾಯಾರ್ಥವಾಗಿ ನನ್ನನ್ನು ಕಳುಹಿಸಲಿಲ್ಲವೇ? ಆತನ ಆಜ್ಞೆಯನ್ನು ಪಾಲಿಸುವ ಕಾಲವಲ್ಲವೇ? ನೀನು ಬರಿದೆ ಚಿಂತಿಸುವುದೇಕೆ? ನನ್ನ ಭುಜಬಲದಿಂದ ಕುದುರೆಯನ್ನು ಬಿಡಿಸಿತರುವೆ ನೋಡು.' ಎಂದು ಹೇಳಿ ಅವನ ಅನುಮತಿಪಡೆದು ಶತ್ರುಸೈನ್ಯದ ಮೇಲೆ ಯುದ್ಧಕ್ಕೆ ಹೋದನು. ಸಾತ್ಯಕಿ, ಸಾಂಬ, ಕೃತವರ್ಮ, ಶಠ, ನಿಶಠ, ಅನಿರುದ್ಧ, ಗದ ಮುಂತಾದ ಯಾದವ ಸೇನಾಪತಿಗಳು; ಶೂರರಾದ ಯೋಧರು, ಸಮಸ್ತ ಯಾದವಸೇನೆ ಯುದ್ಧಕ್ಕೆ ಹೊರಟಿತು. ಅದನ್ನು ಒಂದುಕಡೆ ಅನುಸಾಲ್ವನಸೇನೆ ಬಂದು ಸೇರಿಕೊಂಡರೆ, ಮತ್ತೊಂದುಕಡೆಯಿಂದ ಯೌವನಾಶ್ವನಸೇನೆಯು ಬಂದು ಕೂಡಿಕೊಂಡಿತು.

ವೃಷಕೇತುವು ಅರ್ಜುನನಿಗೆ ಕೈಮುಗಿದು:

'ಎಲೈ ತಂದೆಯೇ ಕೇಳು. ಹಸುವಿನ ಹೆಜ್ಜೆಯಗಲದ ನೀರು ದಾಟಲು ಹರಿಗೋಲು ಹೇಗೆ ಬೇಕಿಲ್ಲವೊ ಹಾಗೆ, ಈ ಅಲ್ಪಸೇನೆ ಗೆಲ್ಲಲು ಇಷ್ಟೊಂದು ಸೇನೆ ಬೇಕಾಗಿಲ್ಲ. ಅವರಿಗೆ ಕಷ್ಟಪಡಿಸಬೇಡ. ಈ ದಿನದಯುದ್ಧವು ನನಗೆಂದು ಅಪ್ಪಣೆಯಾಗಿದೆ. ಶತ್ರುಸೇನೆಯನ್ನು ಘಾತಿಸಿ ಕುದುರೆಯನ್ನು ತರದೆಇದ್ದರೆ ನಾನು ಕರ್ಣನ ಕುಮಾರನೇ ಅಲ್ಲ. ನನ್ನ ಪರಾಕ್ರಮವನ್ನು ನೋಡು' ಎಂದು ಹೇಳಿ ಅರ್ಜುನನ ಅಪ್ಪಣೆಪಡೆದು ಯುದ್ಧರಥವನ್ನು ಏರಿದನು. ವೃಷಕೇತುವಿನತೇರು ಮುಂಗಾರಿನ ಮಿಂಚಿನಂತೆ ಹೊಳೆಯುತ್ತಿತ್ತು. ಅವನ ಬಾಣದಹೊಡೆತ ಸಿಡಿಲಿನಂತೆ ಕ್ರೂರ. ಅವನು ನುಗ್ಗುವರೀತಿ ವನವನ್ನಾಕ್ರಮಿಸುವ ಕಾಳ್ಗಿಚ್ಚಿನಂತೆ ಭಯಂಕರ. ಅವನ ಪರಾಕ್ರಮದ ಔನ್ನತ್ಯ ಮಧ್ಯಾಹ್ನದ ಸೂರ್ಯನಂತೆ ಕಠಿಣ. ಅವನು ಯುದ್ಧಕ್ಕೆ ಹೊರಟರೀತಿ ಕುಮಾರಸ್ವಾಮಿ ಶತ್ರುಸೇನೆಯಮೇಲೆ ನುಗ್ಗಿದಂತಿತ್ತು.

ಸುಧನ್ವ ಆತ ಬರುವುದನ್ನು ನೋಡಿದನು. ಆತ ಯಾರಿರಬಹುದೆಂದು ಯೋಚಿಸಿದನು. ಪಾರ್ಥನಾದರೆ ಕಪಿ ಧ್ವಜವಿರುತ್ತಿತ್ತು. ಆದರೆ ವೃಷಭ ಧ್ವಜವಿದೆ. ಬರುವಶೌರ್ಯವನ್ನು ನೋಡಿದರೆ ಆತ ಪಾಂಡವರಲ್ಲಿ ಒಬ್ಬ ಶೂರನೇ ಇರಬೇಕು ಎಂದುಕೊಂಡನು. ಅವನಿಗೆ ಎದುರಾಗಿನಿಂತನು. ಪರಿವಾರವನ್ನು ದೂರದಲ್ಲಿ ನಿಲ್ಲಿಸಿದನು. ಧನುಷ್ಟಂಕಾರಮಾಡಿ ಹೀಗೆ ಮಾತಾಡಿಸಿದನು:

'ಅಯ್ಯಾ ನೀನುಯಾರು? ನಿನ್ನಹೆಸರೇನು? ನೀನು ಯಾವಋಷಿಯ ವಂಶಕ್ಕೆ ಸೇರಿದವನು? ನಿಮ್ಮತಂದೆ ಯಾರು? ತಿಳಿಸು. ನಾನು ಹಂಸಧ್ವಜನ ಮಗ ಸುಧನ್ವ. ನಾನು ಮದುಚ್ಛಂದಮುನಿಯ ವಂಶಕ್ಕೆ ಸೇರಿದವನು.'

'ಮೂಢನೇ ಕೇಳು. ಗಿಡದ ಮರೆಯಲ್ಲಿದ್ದರೂ ಹೂವು ತನ್ನ ಪರಿಮಳದಿಂದ ಅದು ಯಾವಜಾತಿಗೆ ಸೇರಿದುದು ಎಂದು ತಿಳಿಸುವುದಿಲ್ಲವೆ? ಹಾಗೆ ಯುದ್ಧದಲ್ಲಿ ಪೌರುಷದ ರೀತಿಯಿಂದಲೇ ವಂಶವನ್ನು ತಿಳಿಯಲಾಗುವುದಿಲ್ಲವೆ?'

'ಶೌರ್ಯ ಅರಿವಾಗುತ್ತಿದೆ. ಮೂಲ ತಿಳಿಯುತ್ತಿಲ್ಲ.'

'ಅದನ್ನು ತಿಳಿದ ಮಾತ್ರಕ್ಕೆ ಸಮರಸಾಧನೆ ಆಗುವುದೆ? ಹಾಗಾಗುವುದಾದರೆ ಕೇಳು. ನಾನು ಕಶ್ಯಪಮುನಿಯ ವಂಶದವನು. ಯದ್ಧದಲ್ಲಿ ಸಮರ್ಥನಾದ ಸೂರ್ಯನ ಪುತ್ರ ಕರ್ಣನಮಗ. ನನ್ನ ಹೆಸರು ವೃಷಕೇತು'.

'ಅಯ್ಯ. ನೀನು ಕರ್ಣನ ಮಗನಾದರೆ ಒಳ್ಳೆಯದಾಯಿತು. ನೀನು ರಣರಂಗವನ್ನು ಚೆನ್ನಾಗಿ ನಿರ್ವಹಣೆ ಮಾಡಬಲ್ಲೆ ನಾವು ಮೂಢರು. ವರ್ಣನೆಯ ಮಾತುಗಳನ್ನು ತಿಳಿದವರಲ್ಲ' ಎಂದು ಹೇಳಿ ಚಿನ್ನದಹಿಡಿ ಹಾಕಿದ ಬಾಣಗಳನ್ನು ವೃಷಕೇತುವಿನ ಮೇಲೆ ಪ್ರಯೋಗ ಮಾಡಿದನು. ಅವು ಮಿಂಚುಗಳ ಕಾಂತಿಯಂತೆ ನಭೋಮಂಡಲವನ್ನು ವ್ಯಾಪಿಸಲು, ಅವುಗಳನ್ನು ವೃಷಕೇತು ಮಧ್ಯದಲ್ಲಿ ತುಂಡರಿಸಿದನು. ಒಬ್ಬರಿಗೊಬ್ಬರಿಗೆ ಅವಿಚ್ಛಿನ್ನಯುದ್ಧ ನಡೆಯಿತು. ಕೋಪಗೊಂಡು ಒಬ್ಬರು ಮತ್ತೊಬ್ಬರನ್ನು ನಿಂದಿಸುತ್ತ ಹೋರಾಡಿದರು. ವೃಷಕೇತು ತನ್ನ ಬಾಣಗಳಿಂದ ಸುಧನ್ವನ ರಥಾಶ್ವಗಳನ್ನು, ಸಾರಥಿ, ರಥ, ಕವಚವನ್ನು ಕತ್ತರಿಸಿ ಅವನ ಬಿಲ್ಲನ್ನು ಎರಡುತುಂಡು ಮಾಡಿದನು.

ಸುಧನ್ವನು ಕೂಡಲೆತಂದ ಹೊಸರಥವನ್ನೇರಿ ವೃಷಕೇತುವಿನ ರಥ. ಛತ್ರ, ಪತಾಕೆ, ಸಾರಥಿ, ಬಿಲ್ಲನ್ನು ಕಡಿದುಹಾಕಿದನು. ವಿರಥನಾದ ವೃಷಕೇತುವು ಬಾಣ ಯುದ್ಧ ಬಿಟ್ಟು, ಬಗೆಬಗೆಯ ಆಯುಧಗಳಿಂದ ಸುಧನ್ವನೊಡನೆ ಹೋರಾಡಿದನು. ಅಷ್ಟರಲ್ಲಿ ಸಾರಥಿಯು ಬೇರೊಂದು ರಥವನ್ನು ತರಲು ಅದನ್ನು ಏರಿ ಯುದ್ಧ ಮುಂದುವರಿಸಿದನು. ಸುಧನ್ವನ ಬಿಸಿರಕ್ತ ವೀರರಸವಾಗಿ ಹೊರಹೊಮ್ಮುವಂತೆ ಬಲವಾಗಿ ಬಾಣಪ್ರಯೋಗ ಮಾಡಿದನು.

ರಾಯ ಜನಮೇಜಯನೇ ಕೇಳು. ಸುಧನ್ವನ ಪರಾಕ್ರಮದ ಒಂಬತ್ತು ಬಾಣಗಳಿಂದ ವೃಷಕೇತು ಗಾಯಗೊಂಡನು. ರಕ್ತಸೋರಿ, ಅವನ ದೇಹ ಬಲಗುಂದಿತು. ಅವನ ಸಾರಥಿ ರಥವನ್ನು ಯುದ್ಧ ಭೂಮಿಯಿಂದ ಹಿಂದಿರುಗಿಸಿದನು. ಅದನ್ನುಕಂಡ ಪ್ರದ್ಯುಮ್ನನು ಧನುಷ್ಟಂಕಾರಮಾಡಿ ಸುಧನ್ವನಿಗೆ ಎದುರಾದನು.

ಪ್ರದ್ಯುಮ್ನನ ಪತಾಕೆಯಲ್ಲಿರುವ ಮೀನಿನಗುರುತು ನೋಡಿ ಸುಧನ್ವನು ನಸುನಗುತ್ತ ನುಡಿದನು:

'ಎಲೈ, ನಿನಗೆ ಇಲ್ಲಿ ಹೆಂಗಸರ ಸಹಾಯವಿಲ್ಲ. ನಿನ್ನ ಬಾಣಪ್ರಯೋಗಕ್ಕೆ ನಾನು ಹೆದರುವವನಲ್ಲ.'

'ತನ್ನ ಜಯಲಕ್ಷ್ಮಿ ತನ್ನ ಭುಜದಲ್ಲಿ ನೆಲಸಿರುವಳು' ಎಂದು ಮಾರುತ್ತರ ನೀಡಿದ ಪ್ರದ್ಯುಮ್ನ ಕೆಂಗರಿಗಳುಳ್ಳ ಬಾಣಗಳಿಂದ ಅವನ ರಥವನ್ನು ಎಂಟುದಿಕ್ಕುಗಳಿಂದಲೂ ಮುಚ್ಚಿಬಿಟ್ಟನು.

'ಎಲೈ ಪ್ರದ್ಯುಮ್ನನೆ, ವಿರಹಿಗಳಮೇಲೆ ಪುಷ್ಪಬಾಣವನ್ನು ಪ್ರಯೋಗಿಸುವುದು ಮಾತ್ರವಲ್ಲದೆ. ನಿನಗೆ ಸ್ವಲ್ಪ ಶರಸಂಧಾನವು ಗೊತ್ತಿದೆಯಲ್ಲ!' ಎಂದು ಹಾಸ್ಯ ಮಾಡುತ್ತ ಸುಧನ್ವನು ಅವನನ್ನು ಬಾಣಗಳಿಂದ ಹೊಡೆದನು.

ಪ್ರದ್ಯುಮ್ನನು ಕ್ರೂರವಾದ ಬಾಣಗಳಿಂದ ಸುಧನ್ವನ ಸರ್ವಾಂಗಗಳನ್ನು ತುಂಬಿ ಅವನು ನೊಂದು, ಮೂರ್ಛಿತನಾಗುವಂತೆ ಮಾಡಿದನು.

ಎಚ್ಚೆತ್ತುಕೊಂಡ ಸುಧನ್ವನು 'ಎಲೈ ಪ್ರದ್ಯುಮ್ನನೆ, ನೀನು ಕೃಷ್ಣನ ಮಗನೆಂದು ದಾಕ್ಷಿಣ್ಯದಿಂದ ಸೈರಿಸಿದರೆ, ನೀನು ಚುರುಕಾಗಿಬಿಟ್ಟೆ. ನನ್ನ ಬಾಣಾವಳಿಯ ಸಮೂಹದ ಬಾಯಾರಿಕೆಗೆ ನಿನ್ನ ಮೈಯರಕ್ತವನ್ನು ಕುಡಿಸದೆ ಬಿಡುವುದಿಲ್ಲ' ಎಂದು ಕೋಪಗೊಂಡು ಒಂದು ಬಾಣಪ್ರಯೋಗ ಮಾಡಿದನು. ಅದು ಪ್ರದ್ಯುಮ್ನನ ಬಿಲ್ಲನ್ನು ಏಳು ತುಂಡಾಗುವಂತೆ ಕತ್ತರಿಸಿತು. ಪ್ರದ್ಯುಮ್ನನು ಕತ್ತಿ ಗುರಾಣಿ ಹಿಡಿದು ಯುದ್ಧಕ್ಕೆ ಹೊರಡುವಷ್ಟರಲ್ಲಿ ಕೃತವರ್ಮನು ಸುಧನ್ವನನ್ನು ಅಡ್ಡಗಟ್ಟಿ ಆರ್ಭಟಿಸಿ ಬಾಣ ಪ್ರಯೋಗ ಮಾಡಿದನು. ಅವರೀರ್ವರ ಯುದ್ಧದಲ್ಲಿ ಸುಧನ್ವನು ಕೃತವರ್ಮನ ರಥ. ಕುದುರೆ, ಕಾಲಾಳುಗಳನ್ನು; ಬತ್ತಳಿಕೆ ಬಿಲ್ಲನ್ನು, ಸಾರಥಿಯ ಕೈಯನ್ನು ಕ್ಷಣಾರ್ಧದಲ್ಲಿ ಕತ್ತರಿಸಿ ಹಾಕಿದನು. ಕೃತವರ್ಮನು ಬಲಹೀನನಾಗಿ ಪಕ್ಕಕ್ಕೆ ಹೋದನು.

ತಕ್ಷಣ ಅನುಸಾಲ್ವನು ಸುಧನ್ವನ ರಥಕ್ಕೆದುರಾಗಿ ಯುದ್ಧಕ್ಕೆ ಸಿದ್ಧನಾದನು.

'ನಾನು ಸಾಲ್ವನ ತಮ್ಮ. ನನ್ನ ಮೇಲೆ ಇಂದ್ರನು ಯುದ್ಧಕ್ಕೆನಿಂತರೆ, ಅವನಿಗೂ ಸೋಲುವವನಲ್ಲ. ಧರ್ಮರಾಜನ ಕಡೆಯವರನ್ನುಕಂಡು ಶರಣಾಗತನಾಗಿ ಯುದ್ಧದಿಂದ ಹಿಮ್ಮೆಟ್ಟು. ಇಲ್ಲದಿದ್ದರೆ ನಿನ್ನನ್ನು ಉಳಿಸುವುದಿಲ್ಲ'.

'ನಿನಗೆ ಹೆದರಿ ಪರಾಕ್ರಮ ಹೀನನಾದರೆ, ನಾನು ಸುಧನ್ವ ಎನಿಸಿಕೊಳ್ಳುವೆನೆ? ನಾನು ಧರ್ಮರಾಜನ ಕಡೆಯವರನ್ನು ನೋಡುವುದಿಲ್ಲ. ನೀನೇ ಯಮಧರ್ಮ ರಾಜನ ಕಡೆಯವರನ್ನು ನೋಡುವಂತೆ ಮಾಡುವೆನು!' ಎಂದು ಹೇಳಿ ಸುಧನ್ವನು ಬಾಣ ಪ್ರಯೋಗ ಮಾಡಿದನು. ಕೌರಿಡುವ ರಾಕ್ಷಸ ದೇಹದವನಾದ ಅನುಸಾಲ್ವನನ್ನು ಸುಧನ್ವನು ಸಮರ್ಥವಾಗಿ ಎದುರಿಸಿದನು. ಸುಧನ್ವನ ಕೈ ಮೇಲಾಯಿತು. ಅತಿ ಕೋಪದಿಂದ ಅನುಸಾಲ್ವನು ಜ್ವಾಲೆಗೆ ಸಮನಾದ ಒಂದು ಬಾಣ ಪ್ರಯೋಗ ಮಾಡಿದನು. ಅದು ಸುಧನ್ವನ ಎದೆಯನ್ನು ಭೇದಿಸಿತು. ಅವನು ಮೂರ್ಛಿತನಾದನು.

ಸುಧನ್ವನ ಸೇನೆಯು ಅನುಸಾಲ್ವನಮೇಲೆ ಎರಗಿತು. ಕೋಪೋದ್ರಿಕ್ತನಾದ ಅನುಸಾಲ್ವನು ಪ್ರಳಯಕಾಲದಲ್ಲಿ ಬೀಸುವ ಜಂಝಾವಾತದಂತೆ ಬಾಣ ಪ್ರಯೋಗ ಮಾಡಿ ಆ ಸೈನ್ಯವನ್ನು ನಾಶಪಡಿಸಿದನು.

ಎಚ್ಚೆತ್ತ ಸುಧನ್ವನು ಅತಿಕೋಪದಿಂದ ಕೋದಂಡವನ್ನು ತೆಗೆದುಕೊಂಡು 'ಎಲೈ ಅನುಸಾಲ್ವನೆ, ನೀನು ಪರಾಕ್ರಮಿಯಾಗಿ ಈ ಬಾಣವನ್ನು ಸಹಿಸಿದರೆ, ನಾನು ನಿನ್ನ ಮೇಲೆ ಯುದ್ಧ ಮಾಡುವುದಿಲ್ಲ ಹೋಗು' ಎಂದು ಹೇಳಿ ಬಾಣ ಪ್ರಯೋಗಿಸಿದನು. ಅದು ಅನುಸಾಲ್ವನನ್ನು ಸೀಳಿತು.

ಸುಧನ್ವನು ಅತಿ ಉತ್ಸಾಹದಲ್ಲಿ ಪಾರ್ಥನ ಮೇಲೆ ಯುದ್ಧಕ್ಕೆ ನುಗ್ಗಿದನು. ಆರ್ಭಟಿಸುತ್ತ ಅರ್ಜುನನ ಸೈನಿಕರನ್ನು ಧ್ವಂಸ ಮಾಡಿದನು. ಸಾತ್ಯಕಿಯ ಕೋಪ ಉಕ್ಕೇರಿತು. ಹುಬ್ಬು

ಗಂಟಿಕ್ಕಿಕೊಂಡು ಸುಧನ್ವನನ್ನು ಪ್ರತಿಭಟಿಸಿದನು. ತನ್ನ ಬಾಣಗಳಿಂದ ಸುಧನ್ವನ ಶರೀರ ಸಂಕಟಗೊಳ್ಳುವಂತೆ ಮಾಡಿದನು. ಗಾಯಗೊಂಡ ಕಾಡು ಹಂದಿಯಂತೆ ಸುಧನ್ವನು ಸಾತ್ಯಕಿಯ ಮೇಲೆ ಎರಗಿ ನೋಯಿಸಿದನು.

ಸಾತ್ಯಕಿಯು ಸಾವಿರ ಬಾಣಗಳಿಂದ ಸುಧನ್ವನ ರಥ, ಸಾರಥಿ, ಕುದುರೆ, ಧ್ವಜ, ಛತ್ರ ಚಾಮರಗಳನ್ನು ಕತ್ತರಿಸಿ ಹಾಕಿದನು. ಸುಧನ್ವನು ಸಾತ್ಯಕಿಯ ತೇರನ್ನು ಮುರಿದು ಹಾಕಿದನು. ಈರ್ವರೂ ಬಗೆಬಗೆಯ ಆಯುಧಗಳನ್ನು ಹಿಡಿದು ಹೋರಾಡಿದರು. ಸುಧನ್ವನು ತ್ವರೆಯಿಂದ ಸಾತ್ಯಕಿಯ ರಥ, ಕುದುರೆ, ಸಾರಥಿಯನ್ನು ಕತ್ತರಿಯಾಕಾರದ ಕವಲು ಬಾಣಗಳಿಂದ ಕತ್ತರಿಸಿದನು. ಅವನ ಎದೆಗೆ ನಾಟುವಂತೆ ತೀಕ್ಷ್ಣ ಬಾಣ ಪ್ರಯೋಗ ಮಾಡಿದನು. ಸಾತ್ಯಕಿ ಸೋತು ಭಂಗಪಟ್ಟನು.

ಸುಧನ್ವನನ್ನು ಎದುರಿಸಲು ಬಲಿಷ್ಠರಾದ ಯೌವನಾಶ್ವ ಮುಂತಾದವರು ಮುಂದಾದರು. ಅದನ್ನು ಕಂಡ ಅರ್ಜುನನು–ಸತ್ಯ ವಿಕ್ರಮನಾದ ಸುಧನ್ವನು ಅಸಾಧ್ಯನೆಂದು ಭಾವಿಸಿದನು. ದಟ್ಟಿಯನ್ನು ಬಿಗಿದು ಕಟ್ಟಿ, ಕವಚ ಶಿರಸ್ತ್ರಾಣ ಧರಿಸಿದನು. ಧ್ವಜದಲ್ಲಿರುವ ಹನುಮಂತನಿಗೆ ವಂದಿಸಿ, ರಥಕ್ಕೆ ಪ್ರದಕ್ಷಿಣೆಬಂದು ನಮಸ್ಕರಿಸಿದನು. ಶ್ರೀಕೃಷ್ಣನನ್ನು ನೆನೆಯುತ್ತ ರಥವನ್ನು ಏರಿದನು.

## ಅರ್ಜುನನ ತೇರಿರದೆ ತಿರ್‍ರನೆ ತಿಗುರಿಯಂತೆ ತಿರುಗಿತು

ಅರ್ಜುನನ ರಥವು ಗಾಳಿಯ ವೇಗ, ಸಿಡಿಲ ಗರ್ಜನೆ, ಸೂರ್ಯನ ಕಿರಣ, ಕಾಳ್ಗಿಚ್ಚಿನ ಕ್ರೌರ್ಯ, ಯಮನ ಕೋಲಾಹಲವನ್ನು ಒಟ್ಟಿಗೆ ಕೂಡಿಸಿಕೊಂಡು ಒಂದು ಆಕಾರಪಡೆದಂತೆ ಕಾಣುತ್ತಿತ್ತು. ಕುದುರೆಗಳ ಖುರಪುಟ ಧ್ವನಿ, ರಥ ಚಕ್ರದ ಶಬ್ದ, ದೇವದತ್ತಶಂಖದ ಘೋಷ, ಧ್ವಜದತುದಿಯಲ್ಲಿ ಪ್ರಕಾಶಿಸುವ ಹನುಮಂತನ ಅಬ್ಬರ, ಧನುಸ್ಸಿನ ಠೇಂಕಾರ ಒಂದಾಗಿ ಸೇರಿಕೊಂಡು ಭಯಂಕರವಾಗಿತ್ತು. ಆ ಶಬ್ದವು ಅರ್ಜುನನ ಯುದ್ಧಸಮಾರಂಭ ಎಂದು ತಿಳಿದ ಬ್ರಹ್ಮಾದಿ ದೇವತೆಗಳು ತಂತಮ್ಮ ವಿಮಾನಗಳಿಂದ ಆ ಕೌತುಕವನ್ನು ನೋಡಲು ಬಂದು ಸೇರಿದರು.

ಸುಧನ್ವನು ವಾನರಧ್ವಜದಿಂದ ಕೂಡಿದ, ಯುದ್ಧದ ರಭಸದಲ್ಲಿ ಎದುರಾಗುತ್ತಿರುವ ಪಾರ್ಥನನ್ನು ಕಂಡನು. ಆತನನ್ನು ಸಂಧಿಸಿ:

'ಅಯ್ಯಾ, ಈ ತ್ರಿಲೋಕದ ಶೂರರಲ್ಲಿ ನೀನೇ ಪರಾಕ್ರಮಿಯಾದ ಯೋಧನಾಗಿರುವೆ ಎಂಬ ಸಂಗತಿಯನ್ನು ಬಹುಜನರಿಂದ ಕೇಳಿದ್ದೇನೆ. ನಿನ್ನಲ್ಲಿ ಸಂಗ್ರಾಮ ದಾನವನ್ನು ಬೇಡಲು ಬಂದಿದ್ದೇನೆ.'

'ನಮ್ಮೊಡನೆ ನೀನು ಏತಕ್ಕಾಗಿ ಯುದ್ಧವನ್ನು ಅಪೇಕ್ಷಿಸುವೆ? ನೀನು ಅಪ್ರಬುದ್ಧನಾಗಿರುವೆ. ನನ್ನೊಡನೆ ವೈರವನ್ನು ತಳೆದು ಬದುಕಿದ ಪರಾಕ್ರಮಿಗಳು ಈ ಮೂರುಲೋಕದಲ್ಲಿ ಯಾರು ಇಲ್ಲ. ನನ್ನೊಡನೆ ಯುದ್ಧಸನ್ನದ್ಧರಾಗಿ ಬಂದ ಕರ್ಣ, ದ್ರೋಣಾಚಾರ್ಯರಂತಹ ಪ್ರಸಿದ್ಧರು ಏನಾದರೆಂಬುದು ನಿನಗೆ ತಿಳಿದಿಲ್ಲವೆ? ಮರುಳನೇ ಹೋಗು.'

'ಎಲೈ ಪಾರ್ಥನೆ, ನೀನು ಕೌರವಸೈನ್ಯದಲ್ಲಿದ್ದ ವೀರರನ್ನು ಗೆದ್ದದ್ದು ಸಾರಥಿಯಾದ ಶ್ರೀಕೃಷ್ಣನ ಬಲದಿಂದ. ನಿನ್ನ ಸ್ವಂತಸಾಮರ್ಥ್ಯದಿಂದ ಅಲ್ಲ. ನಿನ್ನನ್ನು ಶೂರನೆಂದು ಈ

ಲೋಕದಲ್ಲಿ ಭಾವಿಸುವವರು ಯಾರಿದ್ದಾರೆ? ಈಗಲೂ ಕೃಷ್ಣನನ್ನು ಕರೆಸಿಕೊಂಡು ನನ್ನಮೇಲೆ ಯುದ್ಧಕ್ಕೆನಿಲ್ಲು. ಬರಿದೆ ಆಯಾಸ ಪಡಬೇಡ. ನಮ್ಮಲ್ಲಿ ನಿನಗೆ ಜಯವಾಗುವುದೆಂದು ತಿಳಿಯಬೇಡ' ಎಂದು ಹೇಳಿ ಬಾಣ ಪ್ರಯೋಗಿಸಿದನು. ಅದರ ಹೊಡೆತಕ್ಕೆ ಅರ್ಜುನನ ರಥವು ನಿಲ್ಲದೆ ಕುಂಬಾರನ ಚಕ್ರದಂತೆ ತಿರ್ರನೆ ತಿರುಗಿತು.

ಅದನ್ನು ಮೆಚ್ಚಿದ ಪಾರ್ಥನು:

'ಭಲೇ ಸುಧನ್ವ. ಸತ್ತ್ವಾತಿಶಯದಿಂದ ನೀನು ಪ್ರಸಿದ್ಧನಾಗಿರುವೆ. ಈ ರೀತಿ ನನ್ನ ರಥ ತಿರುಗಿ ಹೋಗುವಂತೆ ಬಾಣ ಪ್ರಯೋಗ ಮಾಡಿದವರನ್ನು ಲೋಕತ್ರಯದಲ್ಲಿ ಯಾರನ್ನೂ ನೋಡಲಿಲ್ಲ. ನೀನು ಇನ್ನೂಹುಡುಗನು. ವ್ಯರ್ಥವಾಗಿ ನನ್ನನ್ನೆದುರಿಸಿ ಯುದ್ಧದಲ್ಲಿ ಸಾಯುವೆ. ನಾನು ಹೊಡೆಯುವುದಿಲ್ಲ. ಹೆದರಬೇಡ. ನೀನು ನಿನ್ನ ತಂದೆಯನ್ನು ಬರ ಹೇಳು. ಆ ಕುದುರೆಯನ್ನು ಬಿಡು.'

'ನಮ್ಮ ತಂದೆಯು ನಿಮಗೆ ಕುದುರೆಯನ್ನು ಬಿಟ್ಟುಕೊಡುವುದಿಲ್ಲ. ನಳಿನನಾಭನಾದ ಶ್ರೀಕೃಷ್ಣನ ಸಹಾಯವಿಲ್ಲದೆ ನೀನು ನನ್ನನ್ನು ಹೆದರಿಸಲಾರೆ. ದುರಾಸೆ ಪಡದೆ ಹಸ್ತಿನಾವತಿಗೆ ಹಿಂದಿರುಗು. ರಾಜಶ್ರೇಷ್ಠನಾದ ನನ್ನ ತಂದೆ ಹಂಸಧ್ವಜನು ಈ ಉತ್ತಮ ಕುದುರೆಯನ್ನು ಉಪಯೋಗಿಸಿಕೊಂಡು ಅಶ್ವಮೇಧಯಾಗದ ದೀಕ್ಷೆಯನ್ನು ಕೈಗೊಳ್ಳುವನು. ಅನಂತರ ನೀನು ಬೇರೆ ಕುದುರೆಯನ್ನು ಬಿಟ್ಟು, ನಿನ್ನ ಪರಾಕ್ರಮದಿಂದ ಭೂಮಂಡಲವನ್ನು ಜಯಿಸು.'

'ನಿನ್ನನ್ನು ಜಯಿಸದ ಮೇಲೆ ಈ ಗಾಂಡೀವ ಧನುಸ್ಸು, ಈ ಮಂತ್ರಾಸ್ತ್ರ, ಅಗ್ನಿದತ್ತವಾದ ಈ ದಿವ್ಯರಥ, ಕಪಿಧ್ವಜ, ಈ ದಿವ್ಯಾಶ್ವಗಳು, ನನ್ನ ಸವ್ಯಸಾಚಿತ್ವ, ಈ ದೇವದತ್ತ ಶಂಕುಗಳಿದ್ದು ಏನು ಪ್ರಯೋಜನ? ಹದಿನಾಲ್ಕು ಲೋಕಗಳನ್ನು ಅಲ್ಪವಾದುದೆಂದು ತಿಳಿದಿರುವ ನನಗೆ ನೀನು ಲಕ್ಷ್ಯವೆ? ಛಿ, ಹೋಗು' ಎನ್ನುತ್ತ ಪಾರ್ಥನು ಏಳುನೂರು ಬಾಣಗಳನ್ನು ಪ್ರಯೋಗಿಸಿದನು.

ಅವುಗಳನ್ನು ಎದುರಿಸಿದ ಸುಧನ್ವನು:

'ಎಲೈ ಮರುಳನಾದ ಪಾರ್ಥನೇ, ನಿನಗೆ ಶ್ರೀಕೃಷ್ಣನು ಸಾರಥಿಯಾಗಿದ್ದುದರಿಂದ ಎಲ್ಲವೂ ಅನುಕೂಲಿಸಿತು. ಈಗ ನೀನು ಹೊಂದಿರುವ ಸಾಧಾರಣ ಸಾರಥಿಯಿಂದ ಜಯ ಸಾಧ್ಯವಿಲ್ಲ. ಅಗ್ನಿಯ ಸ್ನೇಹಿತನಾದ ಬಿರುಗಾಳಿಯು ಹಾರಿಸುವ ಮೇಘ ಸಮೂಹವನ್ನು, ಬೀಸಣಿಗೆಯ ಗಾಳಿ ಓಡಿಸಲು ಸಾಧ್ಯವೆ?'

ಎಂದು ಹೇಳಿ ಅರ್ಜುನನನ್ನು ಬಾಣಗಳಿಂದ ಹೊಡೆದನು. ಬೇಸಗೆಯ ನಡುಹಗಲ ಮಾರ್ತಾಂಡನಂತೆ ಪ್ರಕಾಶಿಸುತ್ತಿರುವ ಶೂರ ಸುಧನ್ವನನ್ನು ನೋಡಿ ಅರ್ಜುನನು ತಾಂಡವೇಶ್ವರನಂತೆ ಕೋಪಗೊಂಡನು. ತನ್ನ ಬತ್ತಳಿಕೆಯೊಳಗಿದ್ದ ಆಗ್ನೇಯಾಸ್ತ್ರವನ್ನು ಹಿಡಿದುಕೊಂಡು ಗಾಂಡೀವಕ್ಕೆ ಹೂಡಿದನು. ಅದರಿಂದ ಹೊಮ್ಮಿದ ಕರ್ಬೊಗೆಯು ಬ್ರಹ್ಮಾಂಡವನ್ನು ತುಂಬಿಕೊಂಡಿತು. ಅದರ ಜ್ವಾಲೆಗೆ ಕುಲಪರ್ವತಗಳು ಕಾಯ್ದುಹೋದವು. ಸಮುದ್ರವು ಮಡಕೆಯಲ್ಲಿಟ್ಟ ನೀರಿನಂತೆ ಉಕ್ಕಿಹರಿಯಿತು. ಅದರಿಂದ ಹೊರಟ ಕಪ್ಪುಹೊಗೆ ದಶದಿಕ್ಕುಗಳನ್ನು ಆವರಿಸಿತು. ಕೆಂಪು ಉರಿಯ ಸಿಡಿವಕಿಡಿಗಳು ಕುದುರೆ ಮೊದಲಾದವುಗಳ ಚಕ್ಕಳದ ಪಟ್ಟಿಗಳನ್ನು ಸುಟ್ಟು ಕಮರು ವಾಸನೆ ಉಂಟಾಯಿತು. ಉಬ್ಬುಬ್ಬಿ ನುಗ್ಗುವ ಕೆಂಡದರಾಶಿಗಳಿಂದ ಸುಧನ್ವನಸೇನೆ ಬೆಂದು ಬೇಗುದಿಗೊಂಡಿತು. ಭಟರು ತಮ್ಮ ಲೋಹದ

ಆಯುಧಗಳನ್ನು ಕೈಯಲ್ಲಿ ಹಿಡಿಯದಂತಾದರು. ಆನೆ, ಕುದುರೆಗಳು ಆಗ್ನೇಯಾಸ್ತ್ರಕ್ಕೆ ಆಹುತಿಯಾದವು.

ಅರ್ಜುನನಿಂದ ತನ್ನ ಸೇನೆಯೆಲ್ಲಾ ಸುಟ್ಟುಹೋಯಿತಲ್ಲಾ ಎಂದು ಕೋಪಿಸಿಕೊಂಡ ಸುಧನ್ವನು ತಕ್ಷಣ ವಾರುಣಾಸ್ತ್ರವನ್ನು ಪ್ರಯೋಗಿಸಿದನು.ಆ ಅಸ್ತ್ರದಿಂದ ಸಮಸ್ತ ಸೈನ್ಯವು ನೀರಿನಲ್ಲಿ ನೆನೆದು ಹೋಯಿತು. ಆನೆ ಕುದುರೆಗಳ ಗುಂಪು ನೀರಿನಲ್ಲಿ ಏನಾದುವೆಂದು ತಿಳಿಯದಾಯಿತು. ನೀರಿನಲ್ಲಿ ನೆನೆದ ಸೈನಿಕರು ಚೈತನ್ಯಹೀನರಾದರು. ಅನೇಕರು ಸತ್ತರು. ವಿದ್ಯೆಯುಬಾರದ ವಟುವಿನಂತೆ ಅರ್ಜುನನು ಆಶ್ಚರ್ಯ ಚಕಿತನಾಗಿ ನೋಡತೊಡಗಿದನು. ಆ ಅಸ್ತ್ರಕ್ಕೆ ಪ್ರತಿಯಾಗಿ ವಾಯುವ್ಯಾಸ್ತ್ರವನ್ನು ಪ್ರಯೋಗಿಸಿದನು. ಅದು ನೀರನ್ನು ಹೀರಿಕೊಂಡು ಒಣಗುವಂತೆ ಮಾಡಿತು.

ಸುಧನ್ವನು ಅಂಧಕಾಸ್ತ್ರವನ್ನು ಪ್ರಯೋಗಿಸಲು ಅದನ್ನು ಬೀಭತ್ಸುನಾಮದ ಅರ್ಜುನನು ಸೂರ್ಯಾಸ್ತ್ರ ಪ್ರಯೋಗಿಸಿ ಹೀರಿಕೊಂಡನು. ಸುಧನ್ವನ ಸರ್ಪಾಸ್ತ್ರವನ್ನು ಅರ್ಜುನನು ಗರುಡಾಸ್ತ್ರದಿಂದ ನಿವಾರಿಸಿದನು. ಸುಧನ್ವಾರ್ಜುನರು ಸಮಸ್ತ ದಿವ್ಯಾಸ್ತ್ರಗಳನ್ನು ಪ್ರಯೋಗಿಸಿ ಒಬ್ಬರು ಮತ್ತೊಬ್ಬರನ್ನು ಕುಶಲ ಪರಾಕ್ರಮದಿಂದ ಎದುರಿಸಿ ಯುದ್ಧ ಮಾಡುತ್ತಿದ್ದರು.

ಶ್ವೇತ ವಾಹನನಾದ ಅರ್ಜುನನು ರೋಷಗೊಂಡು ಆರ್ಭಟಿಸಿ ಮೂರು ಲೋಕವು ತಲ್ಲಣಿಸುವ ಹಾಗೆ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು. ಅದಕ್ಕೆ ಪ್ರತಿಯಾಗಿ ಸುಧನ್ವನೂ ಬ್ರಹ್ಮಾಸ್ತ್ರವನ್ನೆ ಹೂಡಿದನು. ಅವೆರಡೂ ಒಂದಕ್ಕೊಂದು ಹೋರಾಡಿ ನಾಶವಾದವು. ಆಗ ಅರ್ಜುನನು ಈತನನ್ನು ಕೊಲ್ಲಲು ಅಕ್ಷಯಾಸ್ತ್ರವೇ ಸರಿಯೆಂದು ಅದನ್ನು ಆರೋಪಿಸಿದನು. ಅವರಿಬ್ಬರರಥಗಳ ಮಧ್ಯಪ್ರದೇಶವೆಲ್ಲ ಬಾಣಗಳಿಂದ ತುಂಬಿಹೋದವು. ಆಕಾಶ ಭೂಮಿ, ಸೂರ್ಯ ಚಂದ್ರರು, ನಕ್ಷತ್ರಗಳು, ಕುಲಪರ್ವತಗಳು ಎಲ್ಲಿವೆಯೆಂದು ಗೋಚರಿಸದಂತಾಯಿತು. ದಿಕ್ಕುಗಳೇ ಕಾಣದಂತೆ ದಿಗ್ಭ್ರಮೆಯಾಯಿತು.ಅರ್ಜುನನು ಪ್ರಯೋಗಿಸಿದ ಕೆಂಗರಿಗಳುಳ್ಳ ಬಾಣಗಳು ನಿಮಿಷ ಮಾತ್ರದಲ್ಲಿ ಸಾವಿರವಾಗಿ ಶತ್ರುಸೈನ್ಯವನ್ನು ಸಂಹರಿಸಿದವು. ಆಗ ಸುಧನ್ವನು:

'ಎಲೈ ಪಾರ್ಥನೇ, ನೀನು ಗೌರಿಯ ಅರಸ ಶಿವನೊಡನೆ ಕಾದಾಡಿದ ಪರಾಕ್ರಮ; ನಿವಾತ ಕವಚರನ್ನು ಕೊಂದ ಮಹಿಮೆ; ಭೀಷ್ಮ, ಕರ್ಣ, ದ್ರೋಣ, ಮದ್ರಪತಿ ಶಲ್ಯರನ್ನು ಗೆದ್ದ ಸಾಮರ್ಥ್ಯ ಏನು ಎನ್ನುವುದು ತಿಳಿಯಿತು' ಎಂದು ನಕ್ಕು, ಆತನ ಬಾಣಗಳನ್ನು ಕತ್ತರಿಸಿ 'ವ್ಯರ್ಥವಾಗಿ ಆಯಾಸ ಪಡಬೇಡ, ಶ್ರೀಕೃಷ್ಣನನ್ನು ಕರೆಸು' ಎಂದು ಆರ್ಭಟಿಸಿ ಬಾಣವನ್ನು ಪ್ರಯೋಗಿಸಿದನು. ಅದರಿಂದ ಪಾರ್ಥನ ರಥ ಕುಂಬಾರನ ಚಕ್ರದ ಹಾಗೆ ಗಿರ್ರನೆ ಸುತ್ತುತ್ತಿದ್ದಿತು. ಅದರ ಭ್ರಮಣೆಯಿಂದ ಧ್ವಜದ ಕಪೀಶ್ವರ ಬಲಗುಂದಿದನು. ರಥಾಶ್ವಗಳು ನಡೆಯಲಾರದೆ ನಿಶ್ಚಲವಾದವು. ಸಾರಥಿಯನ್ನು ಯಮನು ಕೊಂಡೊಯ್ದನು. ಧನಂಜಯನ ಮೈಯಲ್ಲಿ ಬಾಣಗಳು ನಟ್ಟವು.

ಅತಿರಥರಲ್ಲಿ ಶ್ರೇಷ್ಠನಾದ ಅರ್ಜುನನು ತನ್ನ ಸಾರಥಿ ಸತ್ತುದಕ್ಕೆ ತುಂಬಾ ವ್ಯಥೆಪಟ್ಟನು. ತಾನೇ ಸಾರಥ್ಯವನ್ನುವಹಿಸಿ ಸುಧನ್ವನಿಗೆ ಎದುರಾದನು. 'ಈ ಸುಧನ್ವನನ್ನು ಯುದ್ಧದಲ್ಲಿ ಕೊಲ್ಲದ ಮೇಲೆ ಕುಂತಿಯು ತನ್ನನ್ನು ಹೆತ್ತದ್ದು ಭೂಮಿಗೆ ಭಾರವಾದಂತೆ ಅಲ್ಲವೆ? ಧರ್ಮರಾಜನ ಯಜ್ಞಕ್ಕೆ ವಿಘ್ನ ಉಂಟಾಯಿತಲ್ಲ. ಅಯ್ಯೊ' ಎಂದು ಚಿಂತಿಸುತ್ತ ಅರ್ಜುನನು ಮನಸ್ಸಿನಲ್ಲಿ ಶ್ರೀಕೃಷ್ಣನನ್ನು ಧ್ಯಾನಿಸಿದನು.

**ಶ್ರೀಕೃಷ್ಣನ ಸಾರಥ್ಯ**

ಜನಮೇಜಯರಾಯನೇ ಕೇಳು, ಅರ್ಜುನನು ಶ್ರೀಕೃಷ್ಣನನ್ನು ಧ್ಯಾನಿಸಲು; ಆಗ ಹಸ್ತಿನಾಪುರದಲ್ಲಿದ್ದ ಕೃಷ್ಣನು, ಹಂಸಧ್ವಜನ ಯುದ್ಧವನ್ನು ಸುಧನ್ವನ ಪರಾಕ್ರಮವನ್ನು ತಿಳಿದನು. ಅರ್ಜುನನಿಗೆ ಈ ಯುದ್ಧವು ಸಾಗದು ಎಂದು ಧರ್ಮರಾಜನೇ ಮೊದಲಾದವರಿಗೆ ಸ್ಪಷ್ಟಪಡಿಸಿದನು. ತಕ್ಷಣ ಭಕ್ತರಧ್ಯಾನಕ್ಕೆ ಸದಾ ಸಿದ್ಧನಾಗಿರುವವನು ತಾನು ಎಂಬುದನ್ನು ತೋರಿಸುವಂತೆ ಗರುಡಾರೂಢನಾಗಿ ಅರ್ಜುನನ ಬಳಿಗೆ ಹೊರಟು ಬಂದನು.

ಕಶ್ಯಪ, ವಸಿಷ್ಠ ಮುಂತಾದ ಮಹಾಮುನಿಗಳ ಧ್ಯಾನಕ್ಕೆ ಒಮ್ಮೆಯೂ ಗೋಚರವಾಗದ ಚಿನ್ಮಯಾನಂದ ಸ್ವರೂಪನಾದ ಶ್ರೀಕೃಷ್ಣನು ಕುಂತೀ ಪುತ್ರರಿಗೆ ವಶನಾಗಿರುವ ರೀತಿ ಏನೆಂದು ತಿಳಿಯಲಾಗದು ಶಿವ ಶಿವಾ. ಶ್ಯಾಮಲವರ್ಣ ಶ್ರೀಕೃಷ್ಣನ ಲೀಲಾವಿನೋದವು ಆಶ್ಚರ್ಯಕರವಾದುದು ಎಂದು ದೇವತೆಗಳು ಪರಸ್ಪರ ಮಾತನಾಡಿಕೊಳ್ಳುತ್ತಿದ್ದರು.

ಶ್ರೀಕೃಷ್ಣನು ಸುಪರ್ಣನ ಹೆಗಲಿನಿಂದ ತನ್ನ ಭಾವ ಮೈದುನನಾದ ಅರ್ಜುನನ ರಥದ ಮೇಲ್ಭಾಗಕ್ಕೆ ಬಂದು ಇಳಿದನು. ಫಲ್ಗುಣನ ಸೇನೆಯಲ್ಲಿ ಅನೇಕ ಭೇರಿಗಳು ಮೊಳಗಿದುವು. ಎಲ್ಲರೂ ಕುತೂಹಲ ಮತ್ತು ಉತ್ಸಾಹದಿಂದ ಶ್ರೀಕೃಷ್ಣನಿಗೆ ನಮಸ್ಕರಿಸಿದರು. ಮುರರಿಪು ಶ್ರೀಕೃಷ್ಣ ತನ್ನ ಪಾದಕ್ಕೆ ಮಣಿದ ಪಾರ್ಥನನ್ನು ತಬ್ಬಿಕೊಂಡು ಮೈದಡವಿ ಆದರಿಸಿದನು. ಸಂತೋಷದಿಂದ ರಥದಲ್ಲಿ ಕುಳಿತುಕೊಂಡನು. ಕುದುರೆಗಳ ಕಡಿವಾಣ ಹಿಡಿದು ಸಾರಥ್ಯದಲ್ಲಿ ತೊಡಗಿದನು.

ಸುಧನ್ವನು ಪ್ರತಿನಿತ್ಯವೂ ತಾನು ತನ್ನ ಅಂತರಂಗದಲ್ಲಿ ಧ್ಯಾನಿಸುವ ನಿರ್ಮಲಾತ್ಮನಾದ ಶ್ರೀಕೃಷ್ಣನ ದಿವ್ಯ ಮೂರ್ತಿಯನ್ನು ಪಾರ್ಥನ ರಥಾಗ್ರದಲ್ಲಿ ಕಂಡು ರೋಮಾಂಚನಗೊಂಡನು. ತನ್ನ ಮನಸ್ಸಿನಬಯಕೆ ಈಡೇರಿತು ಎಂದು ನೆಲದ ಮೇಲೆ ಬಿದ್ದು ಶ್ರೀಕೃಷ್ಣನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದನು.

'ಜಗತ್ತಿನ ಅಂತರ್ಯಾಮಿಯೆ, ಸಮಸ್ತಪ್ರಾಣಿಗಳ ಚೈತನ್ಯಸ್ವರೂಪನೆ, ಸ್ವಾಮಿಯೆ; ನಿರ್ಲಿಪ್ತನೂ ಮಾಯಾರಹಿತನೂ ಆದ ನಿನ್ನಲ್ಲಿ ಈ ಸಮಸ್ತವೂ ನೆಲೆಗೊಂಡಿದೆ. ನಾರಾಯಣ, ಮುಕುಂದ, ಮಾಧವ, ಲಕ್ಷ್ಮೀಲೋಲನೆ ನನ್ನನ್ನು ಈ ಸಂಸಾರ ಪಾಶದಿಂದ ಬಿಡಿಸು' ಎಂದು ಸುಧನ್ವನು ಭಯ ಭಕ್ತಿಯಿಂದ ಮನಸ್ಸಿನಲ್ಲಿ ಪ್ರಾರ್ಥಿಸಿದನು. ಅನಂತರ ಪ್ರಕಟವಾಗಿ ಭಗವಂತನಲ್ಲಿ:

'ಎಲೈ ಸ್ವಾಮಿಯೇ ಕೇಳು, ನಿನ್ನ ಸರ್ವಜ್ಞತೆಯನ್ನು ನನಗೆ ತೋರಿಸಿದೆ. ಪಾಂಡವರಿಗೆ ನಿನ್ನ ಕೃಪೆಯು ಸದಾ ಇಲ್ಲದಿದ್ದರೆ ಲೋಕದಲ್ಲಿ ಅವರಿಗೆ ಜಯವೆಲ್ಲಿ ಬಂದೀತು. ಆ ವಿಷಯ ಅಂತಿರಲಿ. ವೃಥಾ ಭಂಗ ಪಡುವುದೇಕೆ? ಅರ್ಜುನನು ಶ್ರೇಯಸ್ಸನ್ನು ಅಪೇಕ್ಷಿಸುವುದಾದರೆ, ನಿನ್ನ ಎದುರಿಗೆ ಒಂದು ಪ್ರತಿಜ್ಞೆಯನ್ನು ಮಾಡಲಿ.'

ಸುಧನ್ವನು ಆಡಿದ ನುಡಿಯನ್ನು ಕೇಳಿ ಕುಪಿತನಾದ ಅರ್ಜುನನು,

'ಎಲೈ ಮರುಳೆ, ಹಾಗಾದರೆ ಇನ್ನು ಕೇಳು, ದೇವತೆಗಳೆಲ್ಲರೂ ಶ್ಲಾಘಿಸುವಂತೆ ಮೂರುಬಾಣದಿಂದ ನಿನ್ನ ತಲೆಯನ್ನು ಕತ್ತರಿಸದೆ ಹೋದರೆ; ನಾನು ಸಂಪಾದಿಸಿರುವ ಪುಣ್ಯವು ಎಳ್ಳಿನಿತು ಇಲ್ಲವಾಗಿ, ಪುಣ್ಯವರ್ಜಿತನಾದ ಪಾಪಿಯ ದುರ್ಗತಿಯು ನನಗೆ ಉಂಟಾಗಲಿ' ಎಂದು ಪ್ರತಿಜ್ಞೆ ಮಾಡಿದನು. ಆಗ ಅರ್ಜುನನನ್ನು ಗದರಿಸಿ ಶ್ರೀಕೃಷ್ಣನು ಹೇಳಿದನು. 'ಈ ಸುಧನ್ವನು ದುರ್ಜಯನು. ನಿನಗೆ ಸ್ವಾಧೀನನಾಗುವನಲ್ಲ'.

ಅರ್ಜುನನನ್ನು ಕುರಿತು ಸುಧನ್ವನು 'ಎಲೈ ಪಾರ್ಥನೇ, ಕೃಷ್ಣನ ಮುಂದೆ ಗರ್ವದಿಂದ ಶಪಥ ಮಾಡಿರುವೆ. ಈಗ ದೇವತೆಗಳೆಲ್ಲರೂ ನೋಡುತ್ತಿರಲಿ. ನೀನು ನಿನ್ನ ಸರ್ವಶಕ್ತಿಯಿಂದ ಪ್ರಯೋಗಿಸುವ ಮೂರುಬಾಣಗಳನ್ನು ನಡುಮಾರ್ಗದಲ್ಲಿಯೇ ಕತ್ತರಿಸದೆ ಹೋದರೆ, ಈ ಲೋಕದಲ್ಲಿ ಪಾತಕಿಗಳಾಗಿರುವವರ ನೀಚಗತಿಗೆ ನಾನು ಹೋಗುವೆನು' ಎಂದು ಹೇಳುತ್ತ ಒಂದು ಬಾಣವನ್ನು ತೆಗೆದು ಮೇದಿನಿಯು ಅದುರುವ ಹಾಗೆ ಪ್ರಯೋಗಿಸಿದನು. ಅರ್ಜುನನ ರಥವು ನಾನೂರು ಮೊಳಗಳ ದೂರಕ್ಕೆ ಹಿಮ್ಮೆಟ್ಟಿ ಹೋಯಿತು.

ಕೃಷ್ಣನು ಮೆಚ್ಚಿ ತಲೆದೂಗಿದನು. ಸುಧನ್ವನನ್ನು ಕೊಂಡಾಡಿದನು. ಪಾರ್ಥನ ಮುಖವನ್ನು ನೋಡಿ,

'ಹಿಂದಿನ ಸಿಂಧು ದೇಶದ ರಾಜ ಜಯದ್ರಥನ ಕಥೆಯು ಈಗ ಒದಗಿಬರುತ್ತದೆ. ಯಾರು ಕೋಪಿಸಿಕೊಂಡರೂ ಇವನು ಬಗ್ಗುವವನಲ್ಲ. ನೀನು ನನ್ನೊಡನೆ ಆಲೋಚಿಸದೆ ದುಡುಕಿ ಪ್ರತಿಜ್ಞೆಯನ್ನು ಮಾಡಿದೆ' ಎಂದು ಗದರಿ, ಸುಧನ್ವನನ್ನು ಮೆಚ್ಚಿ ನುಡಿದನು.

'ಈತ ಏಕಪತ್ನಿ ವ್ರತಸ್ಥನು. ತಂದೆಯ ಮಾತನ್ನು ತಪ್ಪದೆ ಪಾಲಿಸುವವನು. ಏಕಾಗ್ರತೆಯಿಂದ ನನ್ನನ್ನು ಪೂಜಿಸುವ ಭಕ್ತ. ಆದಕಾರಣ ಈತನು ಬ್ರಹ್ಮ, ಈಶ್ವರ, ಇಂದ್ರ ಮೊದಲಾದ ದೇವತೆಗಳಿಗೆ ಯುದ್ಧದಲ್ಲಿ ಮಣಿಯುವವನಲ್ಲ. ಇವನು ನಮ್ಮ ಶೌರ್ಯವನ್ನು; ನಮ್ಮನ್ನು ಅಲ್ಲಾಡಿಸುವನು. ಭುವನತ್ರಯವನ್ನು ಅಂಜಿಸುವ ಇವನ ಪರಾಕ್ರಮವನ್ನು ನೋಡು.'

'ಎಲೈ ವನಜಾಕ್ಷನೇ, ಗೋವರ್ಧನ ಗಿರಿಯನ್ನು ಕೊಡೆಯಂತೆ ಎತ್ತಿಹಿಡಿದು ಗೋಕುಲವನ್ನು ಅತಿವೃಷ್ಟಿಯಲ್ಲಿ ನೆನೆಯದಂತೆ ಮಾಡಿದೆ. ನೀನು ಕೃಪಾಳು. ಈ ಅರ್ಜುನನನ್ನು ಹೇಗಾದರೂ ರಕ್ಷಿಸುವೆ. ನಾವು ವ್ಯರ್ಥವಾಗಿ ಗರ್ವಿಸಿದರೆ ಏನೂ ನಡೆಯದು. ಈ ಯುದ್ಧದಲ್ಲಿ ನಾನು ನನ್ನೀದೇಹವನ್ನು ನಿನಗೊಪ್ಪಿಸದೆ ಬಿಡುವುದಿಲ್ಲ. ಅದು ಹಾಗಿರಲಿ, ಒಮ್ಮೆ ನನ್ನಮೇಲೆ ಕೋಪಗೊಂಡು ನೋಡು. ನಾನು ಹೆದರಿದರೆ ನಿನ್ನ ಕಿಂಕರನೇಅಲ್ಲ.'

ಎಂದು ಹೇಳುತ್ತ ಸುಧನ್ವನು ಅರ್ಜುನನ ರಥವು ಮುರಿಯುವಂತೆ ಬಾಣ ಪ್ರಯೋಗಿಸಿದನು. ಅರ್ಜುನನ ರಥಾಶ್ವಗಳು ಸುರ್‍ರನೆ, ಗಿರ್‍ರನೆ ಸುಳಿಸುತ್ತಿ ಬೆಂಡಾದವು. ಧ್ವಜದ ಕಪೀಶ್ವರನು ಹಲ್ಲುಬಿಡುತ್ತ ಛಿರ್‍ರನೆ ಚೀರಿಕೊಂಡನು. ಕೃಷ್ಣ ಫಲ್ಗುಣರಿಗೆ ಶಿರೋಭ್ರಮಣೆಯಾಗಿ ಕಣ್ಣಿಗೆ ಕತ್ತಲೆ ಕವಿಯಿತು. ರಥ ಚಕ್ರಗಳು ಸುಂಟರಗಾಳಿಯ ಹಾಗೆ ತಿರ್‍ರನೆ ತಿರುಗಿ ನೆಲದಿಂದ ಮೇಲಕ್ಕೆ ಹಾರಿದವು. ರಥ ಹಿಂದಕ್ಕೆ ಸರ್‍ರನೆ ಸರಿಯಿತು. ಅದನ್ನು ಕಂಡು ಅಸುರಾರಿ ಶ್ರೀಕೃಷ್ಣ ಮತ್ತೆ ಸುಧನ್ವನ ಯುದ್ಧ ಕೌಶಲ, ಸಾಮರ್ಥ್ಯವನ್ನು ಹೊಗಳಿದನು.

ಪೊಡವಿ ಪತಿಯಾದ ಜನಮೇಜಯನೇ ಕೇಳು, ಅರ್ಜುನನು ಕೋಪಗೊಳ್ಳಲು ಅವನ ಕಣ್ಣುಗಳು ಕೆಂಡದಂತೆ ಕೆಂಪಾದವು. ತಾನು ಪ್ರಳಯಕಾಲದ ಧನಂಜಯ ಎಂಬಂತೆ ಕಿಡಿ ಹೊಮ್ಮುವ ಕೋಪವನ್ನು ಹೊಂದಿದನು. ಸೇನೆಯು ನಡುಗುವಂತೆ ಆರ್ಭಟಿಸಿ ತನ್ನ ಗಾಂಡೀವ ಧನುವಿನಲ್ಲಿ ಬಾಣವನ್ನು ಹೂಡಿದನು. ಅದನ್ನು ಕಂಡ ಶತಪತ್ರ ಲೋಚನನಾದ ಕೃಷ್ಣನು ಪೂರ್ವದಲ್ಲಿ ತಾನು ಅಸದೃಶವಾದ ಗೋವರ್ಧನ ಪರ್ವತವನ್ನು ಎತ್ತಿಹಿಡಿದು ಗೋಕುಲವನ್ನು ರಕ್ಷಿಸಿದ ಪುಣ್ಯದ ಫಲವನ್ನು, ಅತಿಶಯವಾದ ಶಕ್ತಿಯನ್ನು ಆ ಬಾಣದಲ್ಲಿ ನೆಲೆಗೊಳಿಸಿದನು. 'ಇನ್ನು ಬೇಗನೆ ಶತ್ರುವಿನ ತಲೆಯನ್ನು ಕತ್ತರಿಸು' ಎಂದು ಆಜ್ಞಾಪಿಸಿದನು.

ಉನ್ನತ ಪರಾಕ್ರಮಿಯಾದ ಧನಂಜಯನು ಆರ್ಭಟಿಸಿ ಆ ಶರವನ್ನು ಆಕರ್ಣಾಂತವಾಗಿ ಎಳೆದು ಪ್ರಯೋಗಿಸಿದನು.

'ಅಹಹ ಮುರಹರನೇ, ಪಾರ್ಥನು ಪ್ರಯೋಗಿಸುವ ಬಾಣಕ್ಕೆ ನೀನು ಸಂಪಾದಿಸಿದ ಬಹಳ ಪುಣ್ಯವನ್ನು ಕೊಟ್ಟೆ. ಒಳ್ಳೆಯದಾಯಿತು. ಈ ಬಾಣವನ್ನು ನಾನು ಕತ್ತರಿಸಬಹುದೆ? ನಿನಗೇನೂ ವ್ಯಥೆಯಾಗುವುದಿಲ್ಲವೆ?'ಎನ್ನುತ್ತ ಸುಧನ್ವನು ತನ್ನ ಕೊರಳಿಗೆದುರಾಗಿ ಆಕಾಶದಲ್ಲಿ ಬರುತ್ತಿರುವ ಬಾಣವನ್ನು ನಿಮಿಷಾರ್ಧದಲ್ಲಿ ಕತ್ತರಿಸಿಹಾಕಿದನು. ಭಕ್ತಿಯಿಂದ ನಮಿಸುತ್ತ ನಕ್ಕನು. ಅವನ ಸೈನ್ಯದಲ್ಲಿ ಕಹಳೆಗಳು ಮೊಳಗಿದುವು. ಅಚ್ಯುತನು ಬೆರಗಾದನು. ದೇವತೆಗಳು ಮೆಚ್ಚಿ ಶ್ಲಾಘಿಸಿದರು.

ಮೂರು ಬಾಣಗಳಿಂದ ಈ ಸುಧನ್ವನ ತಲೆಯನ್ನು ಕತ್ತರಿಸುವೆನೆಂದು ತಾನು ಮಾಡಿದ ಪ್ರತಿಜ್ಞೆಯಲ್ಲಿ ಒಂದು ಬಾಣ ವ್ಯರ್ಥವಾಯಿತಲ್ಲ ಎಂದು ಅರ್ಜುನನು ವ್ಯಥೆಪಟ್ಟನು. ಇನ್ನೆರಡು ಬಾಣಗಳಲ್ಲಿ ಶತ್ರುವಿನ ಶಿರವನ್ನು ಹಾರಿಸಬೇಕು ಎನ್ನುತ್ತ ಬಾಣವನ್ನು ಶರಾಸನಕ್ಕೆ ಹೂಡಿದನು. ಆಗ ಶ್ರೀಕೃಷ್ಣನು ಕೃಷ್ಣಾವತಾರದಲ್ಲಿ ತಾನು ಭೂಮಿಯನ್ನು ರಕ್ಷಿಸಿದ ಪುಣ್ಯವನ್ನು ಆ ಬಾಣದಲ್ಲಿ ನೆಲೆಗೊಳಿಸಿದನು. ಫಲ್ಗುಣನು ಆ ಕಣೆಯನ್ನು ಪ್ರಯೋಗಿಸಿದನು.

ಅತಿರೋಷದಿಂದ ಸುಧನ್ವನ ಕಣ್ಣುಗಳು ಕೆಂಪಾದುವು. ಕೃಷ್ಣನನ್ನು ಕುರಿತು 'ದೇವ, ಈಗ ಅರ್ಜುನನ ಬಾಣಕ್ಕೆ ನಿನ್ನ ಪುಣ್ಯವನ್ನು ವ್ಯರ್ಥವಾಗಿ ಕಳೆದುಕೊಂಡೆಯಲ್ಲವೆ? ನೋಡು, ಈಗ ಬರುತ್ತಿರುವ ದಿವ್ಯಾಸ್ತ್ರವನ್ನು ಕತ್ತರಿಸದಿದ್ದರೆ ನಾನು ಅರುಂಧತೀ ಸಹಿತನಾದ ವಸಿಷ್ಠನನ್ನು ಕೊಂದವನ ದುರ್ಗತಿಗೆ ಬೀಳುವೆನು' ಎಂದು ಹೇಳುತ್ತ ಆಕಾಶದಲ್ಲಿ ಅರ್ಕನಂತೆ ಜ್ವಲಿಸುತ್ತ ಬರುತ್ತಿರುವ ಸರಳನ್ನು ಸುಧನ್ವನು ತುಂಡು ಮಾಡಿದನು. ಹಂಸಧ್ವಜನ ಸೇನೆಯಲ್ಲಿ ಜಯಭೇರಿಯಾಯಿತು. ಆಕಾಶದಲ್ಲಿ ನಿಂತು ದೇವತೆಗಳು ಕೊಂಡಾಡಿದರು.

ಪಾರ್ಥನು ಕೃಷ್ಣನನ್ನು ನೋಡಿ,

'ಎರಡು ಬಾಣಗಳು ಮುರಿದು ಹೋದುವು. ಉಳಿದಿರುವ ಇನ್ನೊಂದು ಬಾಣದಲ್ಲಿ ಈ ಸುಧನ್ವನ ಶಿರವನ್ನು ಕತ್ತರಿಸದಿದ್ದರೆ, ನನಗೆ ಹರಿಹರರಿಗೆ ಭೇದವನ್ನು ಕಲ್ಪಿಸಿದವನ ದುರ್ಗತಿಯೂ ಒದಗಲಿ' ಎಂದು ಶಪಥಮಾಡಿ ಕೋದಂಡದಲ್ಲಿ ಬಾಣವನ್ನು ಹೂಡಿದನು.

ನೃಪತಿ ಜನಮೇಜಯರಾಯನೇ ಅದ್ಭುತವನ್ನು ಕೇಳು, ಶ್ರೀಕೃಷ್ಣನು ಅರ್ಜುನನು ಹೂಡಿದ ಆ ಬಾಣದ ಬುಡದಲ್ಲಿ ಬ್ರಹ್ಮನನ್ನು ಸ್ಥಾಪಿಸಿ, ತುದಿಗೆ ಈಶ್ವರನನ್ನು ತಂದಿರಿಸಿ ಮಧ್ಯಭಾಗದಲ್ಲಿ ತಾನೇ ವ್ಯಾಪಿಸಿಕೊಂಡನು. ಅದಕ್ಕೆ ಹೆಚ್ಚಾಗಿ ರಕ್ಷಣೆಯನ್ನು ಏರ್ಪಡಿಸಿದನು. ತಾನು ರಾಮಾವತಾರದಲ್ಲಿ ಅರ್ಜಿಸಿದ ಪುಣ್ಯವನ್ನು ಆಕಾರಗೊಳಿಸಿ ಅದಕ್ಕೆ ಧಾರೆಯೆರೆದು ಶಕ್ತಿಯುನ್ನು ನೆಲೆಗೊಳಿಸಿದನು. ಕೋಟಿ ಸಿಡಿಲುಗಳು ಒಮ್ಮೆಗೆ ಗರ್ಜಿಸುವಂತೆ ಪಾಂಚಜನ್ಯವನ್ನು ಊದಿದನು. ಪಾರ್ಥನ ಸೈನ್ಯದಲ್ಲಿ ಅನೇಕ ವಾದ್ಯಗಳು ಮೊಳಗಿದುವು.

ಅದೆಲ್ಲವನ್ನು ನೋಡಿದ ಸುಧನ್ವನು.

'ಎಲೈ ಪುಂಡರೀಕಾಕ್ಷನೇ; ನಿನ್ನ ಪುಣ್ಯವನ್ನು ಸೂರೆಗೊಂಡವನು ನಾನೊ, ಧನಂಜಯನೊ ಸುಳ್ಳಾಡದೆ ಹೇಳು. ವ್ಯರ್ಥವಾಗಿ ಕೊಂಡಾಡಬೇಡ. ಅರ್ಜುನನಿಂದ

ಬಾಣವನ್ನು ಬಿಡಿಸು. ಅದನ್ನು ಮಧ್ಯದಲ್ಲಿಯೇ ಕತ್ತರಿಸದೆಹೋದರೆ ನನ್ನನ್ನು ನನ್ನ ತಾಯಿ–ಮಗನೆಂದು ಹೇಳಿಕೊಳ್ಳುವಳೆ? ನನ್ನ ಸತಿಯು–ನನ್ನನ್ನು ಗಂಡನೆಂದು ಭಾವಿಸುವಳೆ?'

ಅಷ್ಟರಲ್ಲಿ ಫಲ್ಗುಣನು ತ್ರಿಮೂರ್ತಿಗಳ ದಿವ್ಯಶಕ್ತಿಯಿಂದಲೂ, ರಾಮಾವತಾರದ ಪುಣ್ಯ ಬಲದಿಂದಲೂ, ಅನುಪಮ ಧನುರ್ವೇದದ ವಿದ್ಯಾಮಂತ್ರ ಶಕ್ತಿಯಿಂದಲೂ ಕೂಡಿದ–ಆ ಮಹಾಶರವನ್ನು ತನ್ನ ಮಹಾಬಲದಿಂದ ಆಕರ್ಣಾಂತವಾಗಿ ಸೆಳೆದು ಸುಧನ್ವನ ಮೇಲೆ ಪ್ರಯೋಗಿಸಿದನು.

ಆ ಬಾಣದ ತಾಪಕ್ಕೆ ಉಭಯ ಸೇನೆಗಳು ಹೆದರಿದವು. ದೇವತೆಗಳ ಸ್ತೋಮ ಚದುರಿತು. ಸೂರ್ಯಮಂಡಲವು ಒದರಿತು. ಮೂರುಲೋಕವು ಗಾಬರಿಪಟ್ಟಿತು. ಕುಲಪರ್ವತಗಳು ಚೆಲ್ಲಾಡಿದವು. ನಕ್ಷತ್ರರಾಶಿಯು ಕೆಳಗೆ ಉದುರಿತು. ಮಹಾಸಾಗರವು ಕದಡಿತು. ಕೂರ್ಮನು ಅಲ್ಲಾಡಿದನು. ಅಷ್ಟದಿಗ್ಗಜಗಳು ಕುಗ್ಗಿಹೋದವು. ಆದಿಶೇಷನು ಜಗ್ಗಿದನು. ಬ್ರಹ್ಮಾಂಡವು ಕಂಪಿಸಿತು.

ತನ್ನ ಮೇಲೆ ಬರುತ್ತಿರುವ ಆ ಮಹಾಶರವನ್ನು ನೋಡಿ ಸುಧನ್ವನು ಬೆಚ್ಚಲಿಲ್ಲ. ಬೆದರಲಿಲ್ಲ. ಅವನ ಮನಸ್ಸಿನೊಳಗಿನ ಕಲಿತನ ಕಡಿಮೆಯಾಗಲಿಲ್ಲ. ಆರ್ಭಟಿಸಿ ಅದಕ್ಕೆ ಬಾಣ ಪ್ರಯೋಗ ಮಾಡಿದನು. ಪಾರ್ಥನಶರ ಎರಡುತುಂಡಾಗಿ ಕತ್ತರಿಸಿ ಹೋಯಿತು. ಹಿಂದಣ ಅರ್ಧಭಾಗವು ನೆಲಕ್ಕೆ ಬಿದ್ದುಹೋಯಿತು. ಮುಂದಣ ಅರ್ಧಭಾಗ ಹಾರಿಬಂದು ಸುಧನ್ವನ ಕೊರಲನ್ನು ಕತ್ತರಿಸಿ ನುಗ್ಗಿ ಆ ಕಡೆಗೆ ನೆಲದಲ್ಲಿ ಹೂತು ಹೋಯಿತು. ಸುಧನ್ವನ ತಲೆಯು ಆಕಾಶಕ್ಕೆ ಹಾರಿ ಅಚ್ಯುತ, ಮುರಾರಿ, ಕೇಶವ, ರಾಮ ಎನ್ನುತ್ತ ಹರಿಸ್ಮರಣೆ ಮಾಡುತ್ತಿದ್ದಿತು.

ಮುರಹರಿಯ ಧ್ಯಾನ ಮಾಡುತ್ತ ಆಕಾಶದಿಂದ ಇಳಿದುಬಂದ ಸುಧನ್ವನ ತಲೆ ಶ್ರೀಕೃಷ್ಣನ ಪಾದಕಮಲಗಳ ಮೇಲೆ ಬಿದ್ದಿತು. ದೇವತೆಗಳೆಲ್ಲರೂ ಶ್ರೀಕೃಷ್ಣನು ತಪ್ಪು ಮಾಡಿದನಲ್ಲಾ, ಅಯ್ಯೋ ಎಂದು ಕೂಗಿಕೊಳ್ಳುತ್ತಿದ್ದರು.

ಸುಧನ್ವನ ತಲೆಯು ಮೇಲಕ್ಕೆ ಚಿಗಿಯಲು ಅವನ ಮುಂಡವು ತೋಳುಗಳನ್ನು ತಟ್ಟಿಕೊಂಡು ಎದ್ದು ನಿಂತಿತು. ಸಕಲ ಸೈನ್ಯವನ್ನು ಬಡಿದು, ಕೊಂದು ನಾಶ ಮಾಡಿತು. ಮೆಟ್ಟಿ, ಆಯಾಸಪಡಿಸಿ, ನೆಗ್ಗಿ; ಅಡ್ಡಗಟ್ಟಿ ಹಿಂದಕ್ಕೆ ಅಟ್ಟಿಸಿಕೊಂಡು ಹೋಗಿ ಸೈನ್ಯವನ್ನು ಚಿಪ್ಪು ಚೂರಾಗಿಸಿತು. ಅದನ್ನು ಕಂಡು ಮುರಹರನು ಬೆರಗಾದನು.

ವೀರರಸದ ಉಂಡೆಯಂತೆ ಶೋಭಿಸುತ್ತಿರುವ ಸುಧನ್ವನ ತಲೆಯನ್ನು ನಳಿನ ಲೋಚನನು ಎರಡುಕೈಗಳಿಂದಲೂ ಎತ್ತಿಕೊಂಡು ನೋಡಿದನು. ಆ ಸುಧನ್ವನು ಎಂತಹ ಸುಕೃತನೋ!

ಮುರಮಥನ ಶ್ರೀಕೃಷ್ಣನು ತನ್ನ ಅಂಗೈಯಲ್ಲಿ ಶೋಭಿಸುತ್ತಿರುವ ಆ ತಲೆಯನ್ನು ನಾಸಿಕಾಗ್ರದೆಡೆಗೆ ತೆಗೆದುಕೊಂಡು ಆಘ್ರಾಣಿಸಿದನು. ಸುಧನ್ವನ ಮುಖದಿಂದ ಹೊರಟ ಆತ್ಮವು ಶ್ರೀಕೃಷ್ಣನ ಮುಖದಲ್ಲಿ ಅತಿ ತೇಜದಿಂದ ಸೇರಿಕೊಂಡಿತು. ದೇವತೆಗಳು ಸುಧನ್ವನನ್ನು ಕೊಂಡಾಡಿದರು. ಅಸುರಾಂತಕನು ತನ್ನ ಮೈದುನನಾದ ಪಾರ್ಥನಿಗೆ ಅದನ್ನು ಚೆನ್ನಾಗಿ ತೋರಿಸಿದನು. ಅನಂತರ ಅದನ್ನು ಹಂಸಧ್ವಜನ ಮುಂದಕ್ಕೆ ಎಸೆದನು.

ಭೂಪಾಲನಾದ ಜನಮೇಜಯನೇ ಕೇಳು. ಮರಾಳಧ್ವಜನು ಯುದ್ಧದಲ್ಲಿ ತನ್ನ ಮಗ ಸುಧನ್ವನ ದರ್ಪವನ್ನು ನೋಡುತ್ತ ಹೆಮ್ಮೆ ಪಡುತ್ತಿದ್ದನು. ಆ ವೀರ ಕುವರನ

ತಲೆಯು ಅರ್ಜುನನ ಬಾಣದಿಂದ ಕತ್ತರಿಸಿ ಹೋಗಲು ಸಂತಾಪದಿಂದ ವ್ಯಥೆಪಟ್ಟನು. ನೆಲದಮೇಲೆಬಿದ್ದು ಹೊರಳಾಡಿದನು. ತಲೆಯು ತನ್ನ ಬಳಿಗೆ ಬಂದು ಬೀಳಲು 'ಅಯ್ಯೋ ಮಗನೇ' ಎನ್ನುತ್ತ ಎತ್ತಿಕೊಂಡು ಮುದ್ದಿಸಿದನು. ತನ್ನ ಹಣೆಯನ್ನು ಅದರ ಹಣೆಗೆ ಒಂದಿಸಿ, ಹೊಟ್ಟೆಯನ್ನು ಕಿವುಚಿಕೊಳ್ಳುತ್ತ ಚೀರಿದನು. ಅಲ್ಲಿ ಸಮೀಪದಲ್ಲಿದ್ದ ಅಚೇತನ ವಸ್ತುಗಳಾದ ಕಲ್ಲು ಮರಗಳು ಕರಗುವಂತೆ ದುಃಖಿಸಿದನು.

'ಎಲೈ ಮಗನೇ, ಬೆಟ್ಟದ ಶಿಖರವನ್ನೇರಿ ಬೀಳಲೇ, ಆಳವಾದ ಮಡುವಿನಲ್ಲಿ ಮುಳುಗಲೇ, ನಿನ್ನನ್ನು ಈ ಸ್ಥಿತಿಯಲ್ಲಿ ನೋಡುತ್ತಿರುವ ಈ ನನ್ನ ಕಣ್ಣುಗಳನ್ನು ಕಿತ್ತು ಹಾಕಲೇ, ಬಯಸಿ ಪಡೆದ ಈ ದೇಹವನ್ನು ಸೀಳಿಹಾಕಲೇ, ನೀನು ನನ್ನೊಡನೆ ಮಾತನಾಡದೆ ಸುಮ್ಮನಿರುವುದೇಕೆ?

'ಎಲೈ ಸುಧನ್ವನೇ, ನಾನು ಹೀಗೆ ಹಲುಬಿದರೆ, ನನ್ನನ್ನು ಲೋಕದ ಜನರು– ಈತ ಮಗನ ಮೇಲೆ ಪ್ರೀತಿಯಿದ್ದಿದ್ದರೆ ತೈಲ ಕುದಿಯುವ ಕೊಪ್ಪರಿಗೆಯಲ್ಲಿ ಹಾಕಿಸುತ್ತಿದ್ದನೇ. ಇದು ಸುಮ್ಮನೆ ಹೊರಗೆ ತೋರ್ಪಡಿಸುವ ದುಃಖ ಎಂದು ಜರೆಯುವುದಿಲ್ಲವೇ? ನಾನು ನಿನಗೆ ದ್ರೋಹವನ್ನು ಮಾಡಿದೆ. ಅದಕ್ಕಾಗಿ ನನ್ನ ಮೇಲೆ ಕೋಪಿಸಿಕೊಂಡು ಯುದ್ಧದಲ್ಲಿ ಹೋರಾಡಿ ಮೃತನಾದೆಯಾ? ಕಾದಎಣ್ಣೆಯಲ್ಲಿ ನಿನ್ನ ಶರೀರವನ್ನು ಯಾವ ಬಾಧೆಯೂ ಉಂಟಾಗದಂತೆ ರಕ್ಷಿಸಿದ ಕೃಷ್ಣನು; ನೀನು ಯುದ್ಧ ಮಾಡಿದಾಗ ನಿನಗೆ ಶತ್ರುವಾಗಲು ಕಾರಣವೇನು?

'ಎಲೈ ಮಗನೇ, ನಮ್ಮ ಅಣ್ಣನು ಯುದ್ಧವನ್ನು ಗೆದ್ದುಬರುವನೆಂದು ನಿರೀಕ್ಷಿಸುತ್ತ ಬಣ್ಣದಸೊಡರುಗಳಲ್ಲಿ ಆರತಿಎತ್ತಲು ಬಂದ ನಿನ್ನ ತಂಗಿಯನ್ನೂ; ಹುಣ್ಣಿಮೆಯ ಶಶಿಯಂತಹ ಮುಖದಿಂದ ಶೋಭಿಸುತ್ತ ಎಳನಗೆಯಿಂದಕೂಡಿ ನಿನ್ನನ್ನು ಎದುರುಗೊಳ್ಳಲು ಬರುವ ನಿನ್ನ ವಲ್ಲಭೆಯುನ್ನೂ; ಯುದ್ಧ ಜಯೋತ್ಸಾಹದಿಂದ ಹೊಟ್ಟೆಯುನ್ನು ತಂಪಾಗಿಸಿಕೊಂಡು ಬರುವ ನಿನ್ನ ತಾಯಿಯನ್ನೂ ನಾನು ಯಾವ ಕಣ್ಣಿನಿಂದ ನೋಡಲಿ?' ಎಂದು ಹಂಸಧ್ವಜನು ಹಲುಬಿದನು.

'ನೀನು ಇಲ್ಲದಿರುವುದರಿಂದ, ನಮ್ಮ ಸೇನೆಯು ಉತ್ತಮಜಾತಿಯ ಮಧ್ಯರತ್ನವನ್ನು ತೆಗೆದು ಹಾಕಿದ ಕಂಠಾಭರಣದಂತೆ ಕಳಾಹೀನವಾಗಿದೆ. ಧೈರ್ಯಗುಂದಿದೆ' ಎಂದು ಆ ದೊರೆಯು ಮರುಗಿ ಗೋಳಾಡಿ ನೆಲದ ಮೇಲೆ ಬಿದ್ದು ಹೊರಳಾಡಿದನು. ಅವನ ಸ್ಥಿತಿಯನ್ನು ಕಂಡ ಸಮಸ್ತ ಪರಿವಾರವು ಮರುಗಿತು. ಸುಧನ್ವನ ಸೈನಿಕರು ಆತನನ್ನು ನೆನೆ ನೆನೆದು ಗೋಳಾಡಿದರು. ಆನೆ ಕುದುರೆಗಳು ಕಿವಿಗಳನ್ನು ಜೋಲು ಹಾಕಿಕೊಂಡು ಕಣ್ಣೀರು ಸುರಿಸಿದವು.

ಬಹಳ ದುಃಖಾಕ್ರಾಂತನಾಗಿದ್ದ ಸುರಥನೆಂಬ ಸುಧನ್ವನ ತಮ್ಮನು ದುಃಖವನ್ನು ತೊರೆದು ಎಚ್ಚೆತ್ತನು. ಕಡುಗೋಪದಿಂದ ಬಿಲ್ಲನ್ನು ತೆಗೆದುಕೊಂಡು,

'ಎಲೈ ತಂದೆಯೇ, ಸುಧನ್ವನು ತನ್ನ ಪ್ರತಿಜ್ಞೆಯನ್ನು ಪೂರೈಸಿ ಯುದ್ಧದಲ್ಲಿ ಸತ್ತನು. ಇದಕ್ಕೆ ವ್ಯಥೆ ಪಡುವುದೇತಕ್ಕೆ? ದುಃಖಿಸಬೇಡ' ಎಂದು ಸಮಾಧಾನಪಡಿಸಿ ಹೇಳಿದನು 'ಯುದ್ಧದಲ್ಲಿ ನನ್ನ ಪರಾಕ್ರಮವನ್ನು ನೋಡು'.

'ಸುಧನ್ವ ತನ್ನ ಪ್ರತಿಜ್ಞೆಯನ್ನು ಕೃಷ್ಣನ ಮುಂದೆ ನೆರವೇರಿಸಿ ದೇಹವನ್ನು ಬಿಟ್ಟು

ಮುಕ್ತಿರಾಜ್ಯವನ್ನು ಆಕ್ರಮಿಸಿದನು. ಅದಕ್ಕಾಗಿ ನಾನು ಧೈರ್ಯಹೀನನಾಗಿ ವ್ಯಥೆ ಪಡುತ್ತಿಲ್ಲ. ಕತ್ತರಿಸಿದಶಿರ ಧೈರ್ಯಗೆಡದೆ ಪೌರುಷದಿಂದ ತನ್ನ ಸಮೀಪಕ್ಕೆ ಬರಲು ಶ್ರೀಕೃಷ್ಣನು ಅದನ್ನು ಕೈಗೆ ತೆಗೆದುಕೊಂಡು, ಮತ್ತೆ ಎಸೆದುಬಿಟ್ಟನಲ್ಲಾ ಎಂಬುದಕ್ಕೆ ನನಗೆ ವ್ಯಥೆಯಾಗಿದೆ.'

'ಎಲೈ ತಂದೆಯೇ, ಚಿತ್ತೈಸು. ಈ ತಲೆಯಿಂದ ಏನು ಪ್ರಯೋಜನ? ಕೃಷ್ಣನ ಪಾದದೆಡಗೇ ಇದನ್ನು ಎಸೆದುಬಿಡು. ನನ್ನ ಸಹೋದರನನ್ನು ಕೊಂದವನನ್ನು ಸಂಹರಿಸುವೆನು' ಎಂದು ರಥವನ್ನು ಹತ್ತಿದನು.

ಹಂಸಧ್ವಜನು ಕೋಪದಿಂದ ಆ ಶಿರವನ್ನು ಪೀತಾಂಬರಧಾರಿಯಾದ ಶ್ರೀಕೃಷ್ಣನ ಹತ್ತಿರಕ್ಕೆ ಎಸೆದನು. ಆ ಮುರಹರನು ಅದನ್ನು ಪ್ರೀತಿಯಿಂದ ನಭಕ್ಕೆ ಎಸೆಯಲು, ಆ ಶಿರವನ್ನು ಶಿವನು ತೆಗೆದುಕೊಂಡು ತನ್ನ ರುಂಡಮಾಲೆಯಲ್ಲಿ ಧರಿಸಿಕೊಂಡನು.

ಸುಧನ್ವನ ತಲೆ ಆಕಾಶದಲ್ಲಿ ಅಡಗಿತು. ಹಂಸಧ್ವಜನು ಸೇನಾಸಹಿತನಾಗಿ ಯುದ್ಧಕ್ಕೆ ನಿಂತನು.

**ಸುರಥನ ರಣೋತ್ಸಾಹ**

ಎಲೈ ಜನಮೇಜಯರಾಯನೆ ಇದುವರೆಗೆ ಸುಧನ್ವನ ಶೌರ್ಯವನ್ನು ಕೇಳಿರುವೆ. ಇನ್ನು ಮುಂದೆ ಅವನ ತಮ್ಮ ಸುರಥನ ಯುದ್ಧೋತ್ಸಾಹವನ್ನು ಹೇಳುವೆನು ಕೇಳು.

ಸುರಥನು ಅತಿರೋಷದಿಂದ ರಥವನ್ನುಹತ್ತಿ ಧನುಷ್ಟಂಕಾರಮಾಡಿ, 'ಅರ್ಜುನನು ಬದುಕುವನೇ, ಧರ್ಮರಾಜನು ಭೂಮಂಡಲವನ್ನು ಆಳುವನೇ – ನೋಡೋಣ. ಈಗ ನನ್ನ ತೋಳಿನ ತೀಟೆಯನ್ನು ಹೋಗಲಾಡಿಸಿಕೊಳ್ಳುವೆನು' ಎಂದು ಹೇಳುತ್ತ ಕೃಷ್ಣಾರ್ಜುನರ ಎದುರಾಗಿ ಬಂದನು.

ಅವನು ರಣೋತ್ಸಾಹದಿಂದ ಬರುತ್ತಿರುವುದನ್ನು ಕಂಡ ಕೃಷ್ಣನು ಆಲೋಚಿಸಿ ಅರ್ಜುನನೊಡನೆ ಹೀಗೆ ಹೇಳಿದನು:

'ಎಲೈ ಪಾರ್ಥನೇ, ಈತನು ಈ ಲೋಕದಲ್ಲಿ ಮಾಡದಿರುವ ಯಾವ ಪುಣ್ಯ ಕಾರ್ಯವೂ ಇಲ್ಲ. ಈತನು ಮರೆತಾದರೂ ಮಾಡಿರುವ ಪಾಪಲೇಶವನ್ನು ನಾನು ಕಂಡಿಲ್ಲ. ಇವನನ್ನು ಯುದ್ಧದಲ್ಲಿ ಗೆಲ್ಲುವವರು ಯಾರೂ ಇಲ್ಲ. ಇವನೆದುರಿಗೆ ನಾವು ನಿಂತರೆ ನಮ್ಮನ್ನು ಅನಾದರದಿಂದ ಅಲಕ್ಷ್ಯ ಮಾಡುವನು. ಆದುದರಿಂದ ಇವನೊಡನೆ ಪ್ರದ್ಯುಮ್ನ ಮೊದಲಾದ ಶೂರಯೋಧರು ಯುದ್ಧ ಮಾಡಲಿ.'

ಅಂಧಕ, ವೃಷ್ಣಿ, ಕಾಂಭೋಜ ಮೊದಲಾದ ಯಾದವಕುಲದ ಸೇನೆಯ ವೀರಭಟರೊಡನೆ ಪ್ರದ್ಯುಮ್ನನನ್ನು ಸುರಥನ ರಥಕ್ಕೆ ಎದುರಾಗಿ ನಿಲ್ಲಿಸಿದನು. ಅರ್ಜುನನ ರಥದ ಕಡಿವಾಣವನ್ನು ಹಿಡಿದು ತಿರುಗಿಸಿ, ಮೂರುಗಾವುದ ದೂರದಲ್ಲಿರುವ ವಿಸ್ತಾರವಾದ ಸೇನೆಯ ಮಧ್ಯಕ್ಕೆ ಬಂದು ಸೇರಿದನು. ಸುತ್ತಲೂ ರಕ್ಷಣೆಯನ್ನು ಏರ್ಪಡಿಸಿದನು.

ಪ್ರದ್ಯುಮ್ನನು ಯುದ್ಧದ ಮುಂದಕ್ಕೆ ಹೋಗಿ ನಿಂತು ಸುರಥನನ್ನು ಬಾಣದಿಂದ ನಾಟಿಸಿದನು. ಸುರಥನು ಅದಕ್ಕೆ ಪ್ರತಿಯಾಗಿ ಪ್ರದ್ಯುಮ್ನನನ್ನು ಬಾಣಗಳಿಂದ ಮುಚ್ಚಿದನು.

'ಪಾರ್ಥನು ಶೌರಿ ಸಹಿತ ಎಲ್ಲಿಯೋ ತಪ್ಪಿಸಿಕೊಂಡಿದ್ದಾನೆ. ಈ ಚತುರಂಗ ಸೇನೆ ನನ್ನನ್ನು ಮುತ್ತಿಗೆ ಹಾಕಿದೆ. ನನ್ನ ಶೌರ್ಯವು ಮದಿಸಿದ ಆನೆಯ ಶೌರ್ಯವು ನೊಣದ ಮೇಲೆ ಆದಂತೆ ಆಗುವುದಲ್ಲ. ಈ ಸೈನ್ಯದೊಡನೆ ಕಾಲವನ್ನು ಕಳೆದರೆ ಸುಧನ್ವನ

ಕಾರ್ಯವನ್ನು ನಡೆಯಿಸಿದಂತಾಗುವುದಿಲ್ಲ' ಎಂದುಕೊಳ್ಳುತ್ತ ಆ ಯೋಧರನ್ನು ಬಾಣಗಳಿಂದ ಹೊಡೆದನು.

ಸುರಥನು ಆತುರದಿಂದ ಪ್ರದ್ಯುಮ್ನನನ್ನು ಗೆದ್ದನು. ಸಾತ್ಯಕಿಯನ್ನು ಕೆಡವಿದನು. ಕೃತವರ್ಮ, ಸಾಂಬ, ಅನುಸಾಲ್ವರ ಸಾಮರ್ಥ್ಯವನ್ನು ಹಾಳುಗೆಡಹಿದನು. ಕಲಿ ಯೌವನಾಶ್ವನನ್ನು ಸದೆಬಡಿದನು. ನೀಲಧ್ವಜನನ್ನು ಘಾತಿಸಿದನು. ಕರ್ಣನ ಮಗ ವೃಷಕೇತುವನ್ನು ಅಲಕ್ಷಿಸಿದನು. ಉಳಿದ ಯಾದವಶೂರರನ್ನು ಗೆದ್ದನು. ಚತುರಂಗ ಸೈನ್ಯವನ್ನು ಕೊಂದುಹಾಕಿದನು. ಸಮರ್ಥ ಮಹಾರಥರನ್ನು ತನ್ನ ಒಂದು ರಥದಿಂದಲೇ ಒಡೆದುಹಾಕಿದನು.

ಸುರಥ ಯುದ್ಧರಂಗದಲ್ಲಿ ತಡೆಯಲಸಾಧ್ಯವಾದ ಮಹಾ ಪ್ರವಾಹದಂತೆ ಪರಾಕ್ರಮದಿಂದ ನುಗ್ಗಿದನು. ಮದಿಸಿದ ಆನೆಯು ಸರೋವರವನ್ನು ಹೊಕ್ಕು ಕಲಕಿ ಕೆಸರಾಗಿ ಮಾಡುವಹಾಗೆ ಆ ಸೈನ್ಯವನ್ನೆಲ್ಲ ತುಳಿದು ಧ್ವಂಸ ಮಾಡಿದನು. ಬಾಧೆಪಟ್ಟಕಾಡುಹಂದಿ ಸ್ವೇಚ್ಛೆಯಾಗಿನುಗ್ಗಿ ಮೃಗಗಳನ್ನು ಅಟ್ಟುವಂತೆ ವೈರಿಸೈನ್ಯವನ್ನು ಓಡಿಸಿದನು. ಕಠಿಣವಾಗಿ ಒಮ್ಮೆಲೆ ನುಗ್ಗಿಬಂದ ವೀರರನ್ನು ಒಟ್ಟಾಗಿ ಕೆಡವಿದನು.

ಅದ್ಭುತ ಪರಾಕ್ರಮದಿಂದ, ತಮ್ಮ ಸೇನೆಗೆ ಅತಿ ಭೀತಿಯನ್ನುಂಟು ಮಾಡುತ್ತ ಬರುತ್ತಿರುವ ಸುರಥನನ್ನು ಕಂಡು ಅರ್ಜುನನು ಅತಿ ರೋಷಗೊಂಡನು. ಧನುಷ್ಟಂಕಾರ ಮಾಡಿ ಶತ್ರುವಿಗೆ ಎದುರಾದನು.

'ಎಲಾ ಸುರಥನೇ, ನಿಮ್ಮ ಅಣ್ಣನು ಸತ್ತ ಅಳಲಿನಿಂದ ನಮ್ಮೊಡನೆ ಯುದ್ಧಕ್ಕೆ ಬರುವ ನಿನ್ನನ್ನು ಹೊಡೆಯುವುದು ಯುಕ್ತವಲ್ಲವೆಂದು ನಾವು ಇಲ್ಲಿಂದ ಹೊರಟು ಹೋದೆವು. ಅವಿವೇಕಿಯಾಗಬೇಡ, ಕುದುರೆಯನ್ನುಬಿಟ್ಟು, ಭೂಪತಿಯಾದ ಧರ್ಮರಾಜನನ್ನು ಕಂಡು ಬದುಕುವುದು ಒಳ್ಳೆಯದು.'

'ನಮ್ಮಣ್ಣನಿಗೆ ನೀನು ಯಾವ ಲೆಕ್ಕ? ತ್ರಿಮೂರ್ತಿಗಳು ಕೋಪಿಸಿಕೊಂಡು ಯುದ್ಧಕ್ಕೆ ನಿಂತರೂ ಅವನು ಸಾಯುವವನಲ್ಲ. ನಿನ್ನನ್ನು ಉಳಿಸಬೇಕೆಂದು ಅಚ್ಯುತನು ಕಾರುಣ್ಯದಿಂದ ತನ್ನ ರಾಮಾವತಾರದ ಪುಣ್ಯವನ್ನು ನಿನಗೆ ಕೊಟ್ಟನು. ಆ ಪುಣ್ಯಶಕ್ತಿ ಅವನ ಸಾವಿಗೆ ಕಾರಣವಾಯಿತು. ಇದಕ್ಕೆ ನಾನು ದುಃಖಪಡುವುದಿಲ್ಲ. ಇನ್ನು ಕುದುರೆಯನ್ನು ಬಿಡಲು ನಾವು ಮುನಿಗಳಲ್ಲ. ನಮ್ಮ ಸಾಮರ್ಥ್ಯವನ್ನು ನೋಡು'ಎಂದು ಸುರಥನು ಬಾಣವನ್ನು ಪ್ರಯೋಗ ಮಾಡಿದನು.

ಸುರಥನ ಬಾಣದ ಗರಿಯ ಗಾಳಿಯು ಬೀಸಿದುದರಿಂದ ಅರ್ಜುನನ ಕೋಪಾಗ್ನಿಯು ಭುಗಿಲ್ಲೆಂದು ಹೊತ್ತಿ ಉರಿಯಿತು. ಅವನು ಧನಂಜಯ ಎಂಬ ಹೆಸರಿಗೆ ಅನ್ವರ್ಥನೆಂಬಂತೆ ರೋಷದಜ್ವಾಲೆಯಿಂದ ಕ್ರೂರವಾದ ಬಾಣಗಳನ್ನು ಬಿಟ್ಟನು. ಅವು ಸೂರ್ಯಮಂಡಲ. ದಿಕ್ಕುಗಳು, ಆಕಾಶ, ಭೂಮಿ ಯಾವುವೂ ತೋರದ ಹಾಗೆ ಅಡಗಿ ಹೋಗುವಂತೆ ಮುಚ್ಚಿದುವು. ಸುರಥನ ಧ್ವಜ, ಕುದುರೆಗಳು ಧ್ವಂಸವಾಗಿ ಅವನು ವಿರಥನಾದನು.

ಸುರಥನು ಕೂಡಲೇ ಮತ್ತೊಂದು ಹೊಸ ರಥವನ್ನು ತರಿಸಿ ಏರಿ ಬಾಣವನ್ನು ಬಲವಾಗಿ ಪ್ರಯೋಗ ಮಾಡಿದನು. ಅದಕ್ಕೆ ಅರ್ಜುನನ ರಥವು ಮುದುರಿಕೊಂಡು ಕುಗ್ಗಿ ಐನೂರು ಬಿಲ್ಲುಗಳ ದೂರ ಹಿಂದಕ್ಕೆ ಹೋಯಿತು. ಅವನು ಕೃಷ್ಣನ ಶರೀರದಲ್ಲಿ

ಗಾಯವನ್ನುಮಾಡಿ, ಕುದುರೆಗಳ ಹೊಟ್ಟೆಯನ್ನುಬಗೆದು, ಅರ್ಜುನನನ್ನು ಬಾಣಗಳಿಂದ ಹೊಡೆದು ನೋಯಿಸುತ್ತ ಹೇಳಿದನು:

'ಈ ಬಗೆಯ ಯುದ್ಧದಿಂದ ಏನೂ ಆಗುವುದಿಲ್ಲ. ಪ್ರತಿಜ್ಞೆಯನ್ನು ಮಾಡಿ ಬಾಣ ಪ್ರಯೋಗಿಸಬೇಕು'.

'ಇಷ್ಟು ಮಾತ್ರಕ್ಕೆ ಶಪಥವೇಕೆ? ನಿನ್ನನ್ನು ಕೊಲ್ಲದಿದ್ದರೆ, ನನಗೆ ಮಹಾಪಾಪವು ಪ್ರಾಪ್ತವಾಗಲಿ,' ಎಂದು ನುಡಿದ ಅರ್ಜುನನು ಅವನ ಮೇಲೆ ಬಾಣ ಹೂಡಿದನು. ಅದನ್ನು ಸುಲಭವಾಗಿ ಮಧ್ಯದಲ್ಲಿಯೇ ಕತ್ತರಿಸಿದ ಸುರಥನು ಪರಿಹಾಸ್ಯ ಮಾಡುತ್ತ,

'ನಿನ್ನನ್ನು ಈ ರಥದಿಂದ ನೆಲಕ್ಕೆ ಕೆಡಹದೆ ಹೋದರೆ ನನಗೆ ಪರಲೋಕದಲ್ಲಿ ದುರ್ಗತಿಯುಂಟಾಗಲಿ.'

ಎಂದು ಬೊಬ್ಬಿರಿದು ಬಾಣವನ್ನು ಎಸೆದನು. ಅದರ ಹೊಡೆತಕ್ಕೆ, ಅರ್ಜುನನು ಮುಂಗಾಣದಾದನು. ಮುರಾಂತಕನಾದ ಕೃಷ್ಣನು 'ದಿವ್ಯಾಸ್ತ್ರವನ್ನು ಹೂಡು. ಇವನ ತೋಳ್ಗಳನ್ನು ಕತ್ತರಿಸು' ಎಂದು ಹೇಳಿ ತಾನು ಪಾಂಚಜನ್ಯವನ್ನು ಊದಿದನು. ಅರ್ಜುನನು ಸುರಥನ ತೋಳನ್ನು ಕತ್ತರಿಸಿ ಕೆಡವಿದನು. ಕತ್ತರಿಸಿಬಿದ್ದ ಆ ತೋಳು ಐದು ಹೆಡೆಗಳುಳ್ಳ ಸರ್ಪರಾಜನಂತೆ ನೆಲದಮೇಲೆ ಹೊರಳಾಡುತ್ತ, ಕೂಡಲೇ ಶತ್ರು ಸೈನ್ಯವನ್ನು ಹೊಡೆದು ಕೊಂದಿತು.

ಒಂದು ಭುಜವನ್ನು ಕತ್ತರಿಸಲು, ಇನ್ನೊಂದು ತೋಳಿನ ಬಲದಿಂದ ಸುರಥನು ರೇಗುತ್ತ ಮದಿಸಿದ ಆನೆಯಂತೆ ಅರ್ಜುನನ ಹತ್ತಿರಕ್ಕೆ ನುಗ್ಗಿದನು. ಅದನ್ನು ಕಂಡ ಕೃಷ್ಣನು ಅರ್ಜುನನ್ನು ಹೀಯಾಳಿಸಿದನು. ಅರ್ಜುನನು ತನ್ನ ಹತ್ತಿರಕ್ಕೆ ಬಂದು ಸಾಹಸ ತೋರುವ ಸುರಥನ ಇನ್ನೊಂದು ತೋಳನ್ನೂ ಕತ್ತರಿಸಿದನು. ಅದರಿಂದ ರಕ್ತವು – ಮೃತ್ಯುವು ತನ್ನ ಜೀರ್ಕೊಳವೆಯಿಂದ ಓಕುಳಿಯಾಡುತ್ತಿದೆಯೊ ಎಂಬಂತೆ ಆಕಾಶಕ್ಕೆ ಚಿಮ್ಮಿತು.

ತೊಳುಗಳೆರಡೂ ಕತ್ತರಿಸಿ ಬಿದ್ದು ಹೋಗಲು, ಕಟ್ಟಾಳ್ಗಳ ಶಿರೋಮಣಿಯಾದ ಸುರಥನು ಕಿರೀಟಿಯನ್ನು ಕಾಲ್ಗಳಿಂದ ಒದೆದು ಕೆಡಹುವೆ ಎಂದು ಬೊಬ್ಬಿರಿಯುತ್ತ ಬಂದನು. ಅವನ ಕಾಲುಗಳನ್ನು ಅರ್ಜುನನು ಬಾಣಗಳಿಂದ ಕತ್ತರಿಸಿದನು. ಆ ರಕ್ತದಿಂದ ನೆಲದಮಣ್ಣು ಕೆಸರಾಯಿತು. ಗಂಡುಗಲಿಯಾದ ಸುರಥನು ಎದೆಯಿಂದ ತೆವಳಿಕೊಂಡು ಸರ್ಪದಂತೆ ಧನಂಜಯನಮೇಲೆ ಬಿದ್ದನು. ಆಗ ಅರ್ಜುನನು ಮುರಹರನ ಆಜ್ಞೆಯಂತೆ ಬಾಣ ಪ್ರಯೋಗಿಸಿ ಸುರಥನತಲೆಯನ್ನು ಕತ್ತರಿಸಿದನು.

ಸುರಥನ ಶಿರವು ಅತಿಬಲದಿಂದ ಬಂದು ಅರ್ಜುನನ ಎದೆಗೆ ಬಡಿಯಿತು. ಅವನು ರಥದಿಂದ ಕೆಳಕ್ಕೆಬಿದ್ದು ಪ್ರಜ್ಞಾ ಹೀನನಾದನು. ಅನಂತರ ಆ ತಲೆಯು ಕೃಷ್ಣನ ಚರಣಗಳ ಮೇಲೆಬಿದ್ದು ಸಂತೋಷದಿಂದ ಹಿಗ್ಗಿತು. ಹರಿ, ರಾಘವ, ಜನಾರ್ದನ, ಮುಕುಂದ ಎಂದು ಹರಿನಾಮವನ್ನು ಜಪಿಸುತ್ತಿತ್ತು.

**ಗರುಡನ ಕರ್ತವ್ಯ ನಿಷ್ಠೆ**

ಕಮಲಾಕಾಂತನಾದ ಕೃಷ್ಣನು ಆ ಶಿರವನನ್ನು ತನ್ನೆರಡು ಕೈಗಳಿಂದಲೂ ಎತ್ತಿಕೊಂಡನು. ಕೃಪಾದೃಷ್ಟಿಯಿಂದ ನೋಡಿದನು. ಅಂತರಿಕ್ಷದಲ್ಲಿರುವ ಗರುಡನನ್ನು ಕರೆದು ಆ ಶಿರವನ್ನು ಕೊಟ್ಟನು. 'ಬೇಗನೆ ಪ್ರಯಾಗಕ್ಕೆ ಹೋಗಿ ಈ ಕಪಾಲವನ್ನು ಅಲ್ಲಿ ಗಂಗೆಯಲ್ಲಿ ಹಾಕಿಬಿಡು' ಎಂದು ಅಪ್ಪಣೆ ಮಾಡಿದನು.

ಗರುಡನು ಆಕಾಶ ಮಾರ್ಗದಲ್ಲಿ ತೆಗೆದುಕೊಂಡು ಹೋಗುತ್ತಿರುವಾಗ, ಶಿವನು ಅದನ್ನು ನೋಡಿದನು. ಪ್ರೀತಿಯಿಂದ ಆ ಶಿರವನ್ನು ತರಿಸಿಕೊಳ್ಳಲು, ಭೃಂಗೀಶ್ವರನನ್ನು ಕರೆದು ಹೇಳಿದನು:

'ಗರುಡನು ಸುರಥನ ಈ ತಲೆಯನ್ನು ಎಲ್ಲಿಗೆ ಒಯ್ಯುತ್ತಿರುವನು? ಇವನ ಅಣ್ಣನ ಕೋಮಲತಲೆ ನನ್ನ ರುಂಡಮಾಲೆಯಲ್ಲಿದೆ. ಇದರ ಜೊತೆಗೆ ಸೇರಿಸಿಕೊಳ್ಳಲು ಅದನ್ನು ತೆಗೆದುಕೊಂಡು ಬಾ.'

ತಕ್ಷಣ ಹೊರಟ ಭೃಂಗೀಶ್ವರನು ಗರುಡನಬಳಿಗೆ ಬಂದು ಆ ತಲೆಯನ್ನು ನೀಡಲು ಕೇಳಿದನು. ಗರುಡನು ತನ್ನೊಡೆಯನ ಅಪ್ಪಣೆಮೀರಿ ನಡೆಯುವುದಿಲ್ಲ ಎಂದು ಮುಂದಕ್ಕೆ ಹೊರಟುಹೋದನು.

ಭೃಂಗೀಶ್ವರನು ಗರುಡನ ರೆಕ್ಕೆಯ ಹೊಡೆತದ ರಭಸಕ್ಕೆ ಬಲಗುಂದಿದನು. ಭೃಂಗೀಶ್ವರನು ಗರುಡನ ಗರಿಯ ಗಾಳಿಗೆಸಿಕ್ಕಿ ಬಳಲಿ ಹಿಂತಿರುಗಿ ಬಂದನು. ಅದನ್ನು ಶಿವನಿಗೆ ವಿಜ್ಞಾಪಿಸಿದನು. ಆ ನುಡಿ ಕೇಳಿ ನಸುನಕ್ಕ ಗಿರಿಜೆ ಗರುಡನ ಶಕ್ತಿಯನ್ನು ಹೊಗಳಿ ಭೃಂಗಿಯನ್ನು ಜರೆದಳು. ಶಿವನು ಅವನನ್ನು ಸಮಾಧಾನಪಡಿಸಿ ವೃಷಭರಾಜ ನಂದೀಶ್ವರನಿಗೆ ಅಪ್ಪಣೆ ಮಾಡಿದನು.

ನಂದೀಶ್ವರನು ಗರುಡನನ್ನು ಬೆಂಬತ್ತಿ ಹೋದನು. ಗರುಡನನ್ನು ಕೂಗುತ್ತ :

'ಅಯ್ಯಾ, ಹೋಗಬೇಡ. ಸುರಥನ ತಲೆಯನ್ನು ರುಂಡಮಾಲೆಯಲ್ಲಿ ಧರಿಸುವುದಕ್ಕಾಗಿ ತೆಗೆದುಕೊಂಡು ಬಾ ಎಂದು ಶಿವನು ನನ್ನನ್ನು ಕಳುಹಿಸಿದ್ದಾನೆ. ಕೊಡದೆ ಹೋದರೆ ನಿನಗೆ ತೊಂದರೆಯಾಗುತ್ತದೆ.'

'ಆಗಲಿ, ಅದಕ್ಕೇನು? ಈ ಶಿರವನ್ನು ನನ್ನೊಡೆಯ ಕೃಷ್ಣನ ಆಜ್ಞೆಯ ಪ್ರಕಾರ ಪ್ರಯಾಗದಲ್ಲಿ ಬಿಡಬೇಕಾಗಿದೆ. ನೀನು ಹಿಂದಕ್ಕೆಹೋಗು.'

ಎಂದು ತ್ರಿಭುವನವನ್ನು ಅಲ್ಲಾಡಿಸುವ ರಭಸದಿಂದ ಗರುಡನು ಹಾರಿ ಹೋಗುತ್ತಿದ್ದನು. ಅವನನ್ನು ಹಿಂಬಾಲಿಸುತ್ತಿದ್ದ ವೃಷಭನು ತನ್ನ ಮುಖದಿಂದ ಉಚ್ಛ್ವಾಸ, ನಿಶ್ವಾಸದಲ್ಲಿ ಬಿಟ್ಟ ಗಾಳಿಯು ಗರುಡನನ್ನು ಆಕಡೆ ಈಕಡೆಗೆ ಎಳೆದಾಡುತ್ತಿತ್ತು. ಮೆಲ್ಲಗೆ ಆಯಾಸದಿಂದ ಶ್ರಮಪಟ್ಟು ಗರುಡನು ಪ್ರಯಾಗ ಕ್ಷೇತ್ರಕ್ಕೆ ಹೋದನು. ಸುರಥನ ತಲೆಯನ್ನು ಆ ಕ್ಷೇತ್ರದಲ್ಲಿ ನೀರಿಗೆಹಾಕಿ ಕೃಷ್ಣಇದ್ದ ಸ್ಥಳಕ್ಕೆ ಹಿಂದಿರುಗಿ ಬಂದನು.

ವೃಷಭನು ಆ ತಲೆಯನ್ನು ಅಲ್ಲಿಂದಲೇ ತೆಗೆದುಕೊಂಡು ಈಶ್ವರನ ಸಭೆಗೆ ಬಂದು ನೀಡಿದನು. ವೃಷಭನನ್ನು ಪಾರ್ವತಿಯು ಕೊಂಡಾಡಿದಳು. ಶಿವನು ಆ ತಲೆಯನ್ನು ರುಂಡಮಾಲೆಗೆ ಸೇರಿಸಿಕೊಂಡು ನಲಿದನು.

**ಹಂಸಧ್ವಜ ಶ್ರೀಕೃಷ್ಣರ ಸ್ನೇಹ**

ಹಂಸಧ್ವಜನು ತನ್ನ ಇನ್ನೋರ್ವ ಮಗ ಸುರಥನು ಅರ್ಜುನ ಕೃಷ್ಣರಿಂದ ಮಡಿದ ಸುದ್ದಿಯನ್ನು ತಿಳಿದನು. ಕಡುನೊಂದು ದುಃಖಿಸಿದನು. ಒದಗಿರುವ ಯುದ್ಧದಲ್ಲಿ ಹೋರಾಡಿ ತಾನು ಮುರಹರನನ್ನು ಮೆಚ್ಚಿಸುವೆನು. ಉತ್ತಮ ಗತಿಯನ್ನು ಸಂಪಾದಿಸುವೆನು ಎಂದು ರಥವೇರಿ ಬಿಲ್ಲನ್ನು ಠೇಂಕಾರ ಮಾಡುತ್ತ ಸೇನೆಯೊಡನೆ ಪಾರ್ಥನ ಎದುರಿಗೆ ನಿಂತನು.

ಕೋಪೋದ್ದೀಪಿತನಾದ ಹಂಸಧ್ವಜನು ಯುದ್ಧಮಾಡಿದರೆ ಎಂತಹ ಅನರ್ಥ

ವಾಗುವುದೋ ಎಂದು ಕಂಸಾಂತಕನು ಆಲೋಚಿಸಿದನು. ಇಂದ್ರಸುತನಾದ ಅರ್ಜುನನಿಗೆ ಸ್ವಲ್ಪ ಸೈರಿಸು ಎಂದು ಕುದುರೆಯ ಕಡಿವಾಣವನ್ನು ನೀಡಿದನು. ಜಾರುವ ಪೀತಾಂಬರವನ್ನು ಭುಜದಲ್ಲಿ ಸೇರಿಸಿಕೊಂಡನು. ರಥದಿಂದ ಇಳಿದನು. ತನ್ನನ್ನು ಆರಾಧಿಸುವವರಿಗೆ ತಾನು ಸೇವಕ ಎಂಬುದನ್ನು ತೋರುತ್ತ, ಸಿಂಹದಂತೆ ಗಂಭೀರ ನಡಿಗೆಯಲ್ಲಿ ಹಂಸಧ್ವಜನ ಬಳಿಗೆ ನಡೆದನು.

ಪ್ರಕಾಶಿಸುವ ಕಿರೀಟವನ್ನು ಧರಿಸಿದ, ಪೀತಾಂಬರದ ಉಡಿಗೆ ತೊಡಿಗೆಗಳಿಂದ ಶೋಭಿಸುವ, ನೀಲೋತ್ಪಲದಂತೆ ಶ್ಯಾಮಲ ವರ್ಣನಾದ ಶ್ರೀಕೃಷ್ಣನನ್ನು ಹಂಸಧ್ವಜನು ಕಣ್ತುಂಬಿಕೊಂಡನು. ತನಗೆ ಇದಿರಾಗಿ ಬರುತ್ತಿರುವ ದನುಜಮಥನ ಕೃಷ್ಣನನ್ನು ನೋಡುತ್ತ, ತನ್ನ ಮನೋವ್ಯಥೆಯೆಲ್ಲವನ್ನು ಮರೆತು ಹರ್ಷಹೊಂದಿದನು. ತಾನು ಹಿಡಿದಿದ್ದ ಶರಧನುಗಳನ್ನು ಪಕ್ಕದಲ್ಲಿರಿಸಿದನು. ರಥದಿಂದ ನೆಲಕ್ಕೆ ಧುಮುಕಿ ಕೃಷ್ಣನ ಮುಂಭಾಗಕ್ಕೆಬಂದು ಅಡ್ಡಬಿದ್ದನು. ಎದ್ದು ಕೈಮುಗಿದು ನಿಂತು,

'ಎಲೈ ದೇವ, ನನ್ನ ಬಳಿಗೆ ದಯೆಮಾಡಿಸಿದ ಕಾರ್ಯವೇನು? ಅಪ್ಪಣೆ ಕೊಡಿ.'

'ಎಲೈ ಹಂಸಧ್ವಜನೇ, ಪಾರ್ಥನಿಗೆ ನಾವು ಮಾಡುವ ಸಹಾಯವನ್ನು ನೋಡಿರುವೆ. ಹೀಗಿದ್ದರೂ ಸಂಗ್ರಾಮದಲ್ಲಿ ಅರ್ಜುನನನ್ನು ಗೆಲ್ಲುವೆನೆಂಬ ಕ್ಷಾತ್ರತಾಮಸಗುಣ ನಿನಗೇತಕ್ಕೆ? ನೀನು ನಿನ್ನ ಮಕ್ಕಳನ್ನು ವ್ಯರ್ಥವಾಗಿ ಕೊಲ್ಲಿಸಿ ಕೆಲಸವನ್ನು ಕೆಡಿಸಿಬಿಟ್ಟೆ. ಎಚ್ಚೆತ್ತುಕೊ. ವೈರಭಾವವನ್ನು ಸಾಕುಮಾಡು. ನಮ್ಮನ್ನು ಮಿತ್ರಭಾವದಿಂದ ಆಲಿಂಗಿಸು. ಬಾ. ವೃಥಾ ಮನೋವ್ಯಥೆಬೇಡ. ಕುದುರೆಯನ್ನು ಬಿಡು. ಯಜ್ಞಕ್ಕೆಸಹಾಯಕನಾಗು.'

'ಕ್ಷತ್ರಿಯರು–ಯಜ್ಞಾರ್ಥವಾಗಿ ಬಿಟ್ಟ, ಬಿರುದು ಹೊತ್ತುಬಂದ ಕುದುರೆಯನ್ನು ಕಟ್ಟಿಹಾಕುವ ಸಾಮರ್ಥ್ಯಇಲ್ಲದಿದ್ದರೆ – ರಾಜ್ಯವನ್ನು ಆಳುವುದು ಹೇಗೆ? ಯುದ್ಧದಲ್ಲಿ ಗೆದ್ದರೆ ಕೀರ್ತಿ, ಸತ್ತರೆ ಸದ್ಗತಿ ದೊರಕುವುದು. ಅದು ಹಾಗಿರಲಿ. ಮಿತ್ರ ಭಾವದಲ್ಲಿ ನಿನ್ನನ್ನು ಅಪ್ಪಿಕೊಂಡಮೇಲೆ, ನನಗೆ ಇನ್ನುಮುಂದೆ ಪುತ್ರಶೋಕಾದಿ ಮನೋವ್ಯಥೆಗಳು ಎಲ್ಲಿ ಉಳಿಯುವುದು? ಇದು ಆಶ್ಚರ್ಯವೇ ಸರಿ! ಗಂಗೆಯಲ್ಲಿ ಮುಳುಗಿದವನಿಗೆ ತಾಪವೆಲ್ಲಿಯದು ಹೇಳು!'

'ಎಲೈ ನೃಪನೇ, ಹಾಗಾದರೆ ನೀನು ಈಗ ನಮ್ಮಲ್ಲಿ ಸ್ನೇಹಭಾವದಿಂದ ಆದರಿಸು. ಅರ್ಜುನನನ್ನುಕಂಡು ಧರ್ಮರಾಜನ ಅಶ್ವಮೇಧಯಾಗಕ್ಕೆ ಸಹಾಯಕನಾಗಿರು.'

ಎಂದು ಹೇಳಿ ಶ್ರೀಕೃಷ್ಣನು ಹಂಸಧ್ವಜನನ್ನು ಬಾಚಿತಬ್ಬಿಕೊಂಡನು. ರಾಜನು ಯುದ್ಧದಲ್ಲಿ ಕಾದಿಮಡಿದ ತನ್ನ ಮಕ್ಕಳ ಶೋಕವನ್ನುಮರೆತು ಮಧುಸೂದನನಿಗೆ ಎರಗಿದನು. ದಯಾನಿಧಿಕೃಷ್ಣನು ಮತ್ತೆ ಆಲಂಗಿಸಿಕೊಂಡನು. ಪಾರ್ಥನನ್ನು ಕರೆದು ಮೈತ್ರಿಯಿಂದ ಅವರಿಬ್ಬರನ್ನೂ ಸೇರಿಸಿದನು.

ಅರಸ ಜನಮೇಜಯನೇ ಕೇಳು. ಬಳಿಕ ಹಂಸಧ್ವಜನು ಉಳಿದ ಸೈನಿಕರು, ಮಕ್ಕಳು, ಅಣ್ಣ ತಮ್ಮಂದಿರು, ಬಂಧು ಬಾಂಧವರು, ಮಂತ್ರಿ ಸಾಮಂತರು, ಗುರು ಪುರೋಹಿತರು ಎಲ್ಲರನ್ನೂ ಕರೆಯಿಸಿ ಹರಿಪಾರ್ಥರ ದರ್ಶನ ಮಾಡಿಸಿದನು. ರಾಜಧಾನಿಯಿಂದ ಧನ ಕನಕ ರತ್ನ ಅಮೂಲ್ಯವಸ್ತುಗಳನ್ನೂ; ಆನೆ ಕುದುರೆಯಿಂದೊಡಗೂಡಿದ ಚತುರಂಗ ಸೇನೆಯನ್ನೂ; ಹಸು, ಎಮ್ಮೆ, ದಾಸಿಯರನ್ನು ತರಿಸಿದನು. ಕಡೆಯ ಮಾತಾಗಿ ಹೇಳುವುದು ಇನ್ನೇನು!

ಹಂಸಧ್ವಜನು ರಾಜ್ಯ ಸಪ್ತಾಂಗ ಸಹಿತವಾಗಿ (ಸ್ವಾಮಿ, ಅಮಾತ್ಯ, ಸುಹೃತ್ತು, ಕೋಶ, ರಾಷ್ಟ್ರ, ದುರ್ಗ, ಬಲ) ಸರ್ವಸ್ವವನ್ನೂ ಕೃಷ್ಣಾರ್ಜುನರಿಗೆ ಒಪ್ಪಿಸಿದನು.

ಅವರೆಲ್ಲರೂ ಚಂಪಕಾನಗರಿಯಲ್ಲಿ ಐದು ದಿನಗಳವರೆಗೆ ಇದ್ದರು. ಅನಂತರ ಕುದುರೆಯು ಮುಂದಕ್ಕೆ ಹೊರಡಲು; ಅದರ ಕಾವಲಿಗೆ ಹಂಸಧ್ವಜನನ್ನೂ, ಪಾರ್ಥನನ್ನೂ ಶ್ರೀಕೃಷ್ಣನು ಕಳುಹಿಸಿದನು. ತಾನು ಚಂಪಕಾನಗರಿಯ ಅಮೂಲ್ಯ ವಸ್ತುಗಳಸಹಿತವಾಗಿ ಹಸ್ತಿನಾವತಿಗೆಬಂದು ಧರ್ಮರಾಜನನ್ನು ಕಂಡನು.

* * *

# ಪಾರ್ವತಿಯ ತಪಸ್ಸು

ನೃಪರ ಮಸ್ತಕದವೌಳಿ ಜನಮೇಜಯರಾಮನೇ ಇನ್ನು ಮುಂದಣ ಕಥೆಯನ್ನು ವಿವರಿಸುವೆನು ಆಲಿಸು, ಅಸುರಾರಿ ಹಸ್ತಿನಾವತಿಗೆ ಬಂದು ಹಂಸಧ್ವಜನ ರಾಜ್ಯದಿಂದ ತೆಗೆದುಕೊಂಡುಬಂದಿದ್ದ ಎಲ್ಲವಸ್ತುಗಳನ್ನು ದೊರೆಧರ್ಮರಾಜನಿಗೆ ನೀಡಿದನು. ಅಲ್ಲಿ ನಡೆದ ಸಮಸ್ತವೃತ್ತಾಂತವನ್ನು ವಿವರಿಸಿದನು.

ಇತ್ತ ಅರ್ಜುನನು ಕುದುರೆಯ ಹಿಂದೆ ಚತುರಂಗ ಸೇನೆಯೊಡನೆ ಉತ್ತರಾಭಿಮುಖವಾಗಿ ಹೊರಟನು. ವಾಜಿಯು ಅಲ್ಲಿಂದ ಮುಂದೆ ಗ್ರೀಷ್ಮ ಕಾಲದಲ್ಲಿ ಪರಿಪ್ಲವ ದೇಶಕ್ಕೆ ನಡೆದು ಹೋಯಿತು. ಆ ಬಿರುಬೇಸಗೆಯಲ್ಲಿ ಪಾಂಥರು ನೀರುನೆಳಲುಗಳನ್ನು ಹುಡುಕಿಕೊಂಡು ಹೋಗುತ್ತಿದ್ದರು. ಎಲ್ಲಾ ಕಡೆಯಲ್ಲಿಯೂ ಕೆರೆತೊರೆಗಳು ಬತ್ತಿ ಹೋಗಿದ್ದುವು. ಭೂಮಿಯಕಾವು ಪಾತಾಳದವರೆಗೆ ಇಳಿದಿತ್ತು. ಪಾತಾಳದ ಸರ್ಪರಾಜನಾದ ಆದಿಶೇಷನಹೆಡೆಯಲ್ಲಿರುವ ರತ್ನಗಳಕಾಂತಿಯು ಆ ಬಿಸಿಲಿನಹಾಗೆ ತಾಪಕರವಾಗದೆಇರದು ಎಂಬಂತೆ ತೋರುತ್ತಿತ್ತು. ಬೇಸಗೆಯ ಬಿಸಿಲಿನಿಂದ ಮೂರುಲೋಕವು ತಲ್ಲಣಗೊಂಡಿತು.

ಸೂರ್ಯನು ಒಂದು ದಿಕ್ಕಿನಿಂದ ಕತ್ತಲೆಯನ್ನು ಓಡಿಸಲು ಅದು ತನಗೆ ಮರೆಯಾಗಿರುವ ಮೇರು ಪರ್ವತದ ಮತ್ತೊಂದು ದಿಕ್ಕಿನಲ್ಲಿ ಸೇರುತ್ತಿತ್ತು. ಅದನ್ನು ಕಂಡ ರವಿ ಆ ಮೇರು ಪರ್ವತವನ್ನೇ ಕರಗಿಸಿಬಿಡುವೆ ಎಂಬಂತೆ ತನ್ನ ಕಿರಣದಿಂದ ಅದನ್ನು ಸುಡುತ್ತಿದ್ದನು. ಅಷ್ಟು ತೀಕ್ಷ್ಣವಾದ ಉರಿಯನ್ನು ಸಹಿಸಲಾರದೆ; ಕುಲ ಪರ್ವತಗಳು ನಿಟ್ಟುಸಿರು ಬಿಡುತ್ತಿವೆಯೊ ಎಂಬಂತೆ, ಗುಹೆಗಳಬಾಯಿಯಿಂದ ಬಿಸಿಯಾದಗಾಳಿ ಹೊಮ್ಮುತ್ತಿತ್ತು. ಸೂರ್ಯಕಿರಣಗಳು ಬೃಹತ್‌ಪರ್ವತ ಪ್ರದೇಶದಲ್ಲಿರುವ ಸಖಲ ಪ್ರಾಣಿಪಕ್ಷಿಗಳಿಗೆ ತಾಪವನ್ನುಂಟು ಮಾಡುತ್ತಿದ್ದವು.

ಅರವಟ್ಟಿಗೆಯಲ್ಲಿ ನೀರನ್ನು ಎರೆಯುವ ಸ್ತ್ರೀಯರನ್ನುನೋಡಿ ವೃಥಾವಿರಹಕ್ಕೆ ಒಳಗಾದ ದಾರಿ ಹೋಕರು; ಬಿಸಿಲ್ಗುದುರೆಯನೀರಿಗೆ ಆಸೆಯಿಂದ ಓಡಿಬಂದು ಆಯಾಸಗೊಳ್ಳುತ್ತಿರುವ ಜಿಂಕೆಗಳು ; ಉಪ್ಪರಿಗೆಯಲ್ಲಿ ಕಾಂತೆಯ ಗಾಢಆಲಿಂಗನದಲ್ಲಿ ಅಧರ ಅಮೃತವನ್ನುಸವಿಯುತ್ತ ಸೊಗಸುವ ಸುಖಿಪುರುಷರು – ಅತಿಶಯ ತಾಪವನ್ನುಂಟು ಮಾಡುವ ಬೇಸಗೆಯನ್ನು ನಿಂದಿಸುತ್ತಿದ್ದರು. ಆ ದಿನಗಳಲ್ಲಿ ಪಾರ್ಥನ ಸೇನೆಯು ಅಧ್ವರಾಶ್ವದಹಿಂದೆ ನಡೆದು ಹೋಯಿತು.

ಕುದುರೆಯು ಉತ್ತರ ದಿಕ್ಕಿಗೆ ಹೊರಟು ಪಾರಿಪ್ಲವ ದೇಶದಲ್ಲಿ ಪ್ರವೇಶಿಸಿತು. ಆಗ ಅದು ಹೆಣ್ಣು ಕುದುರೆಯಾಗಿ ಬಳಿಕ ಹುಲಿಯಾಯಿತು. ಅದನ್ನು ಕಂಡ ಅರ್ಜುನನು ಆಶ್ಚರ್ಯಪಟ್ಟು ಭಯ ಭೀತನಾದನು. ಶ್ರೀಕೃಷ್ಣನ ಮಹಿಮೆಯಿಂದ ಅದು ಮುನ್ನಿನಂತೆ ಯಜ್ಞಾಶ್ವವಾಯಿತು ಎಂಬುದಾಗಿ ಜೈಮಿನಿ ನುಡಿದನು. ಸಂಶಯಗೊಂಡ ಜನಮೇಜಯನು ಆ ಕಥನವನ್ನು ವಿವರವಾಗಿ ತಿಳಿಸಬೇಕೆಂದು ಮುನಿವರನನ್ನು ಪ್ರಾರ್ಥಿಸಿಕೊಂಡನು.

**ಪಾರ್ವತಿಯ ತಪಸ್ಸು**

ಎಲೈ ಜನಪತಿ ಜನಮೇಜಯನೇ ಕೇಳು. ಪೂರ್ವದಲ್ಲಿ ಗಿರಿತನುಜೆಯಾದ ಪಾರ್ವತಿಯು ಇಂದುಧರನಾದ ಈಶ್ವರನನ್ನು ಮನಃಪೂರ್ವಕವಾದ ಶ್ರದ್ಧಾಭಕ್ತಿಗಳಿಂದ ಅರ್ಚಿಸಲು ಸಂಕಲ್ಪಿಸಿದಳು. ತನ್ನ ತಪಸ್ಸಿಗೆ ಪುಣ್ಯಾರಣ್ಯವು ಯಾವುದಿರುವುದೆಂದು

ಹುಡುಕುತ್ತ ಹೋದಳು. ಹಾಗೆ ಸಾಗುತ್ತಿರಲು ಆಕೆಗೆ ಎದುರಾಗಿ ಹಂಸ, ಕಾರಂಡ, ತುಂಬಿ, ಚಕ್ರವಾಕಗಳ ಮಧುರ ಮನೋಹರ ಧ್ವನಿಯಿಂದಲೂ; ಕಮಲ, ಕನ್ನೈದಿಲೆಗಳಿಂದ ಪ್ರಕಾಶಮಾನವಾಗಿ ಕಾಂತಿಯಿಂದಕೂಡಿದ ಒಂದು ದಿವ್ಯಸರೋವರವು ಕಂಡಿತು.

ಆ ಕೊಳವು ಪ್ರಕಾಶಮಾನವಾದ, ಪರಿಶುದ್ಧರತ್ನಗಳಿಂದಾದ ಮೆಟ್ಟಿಲುಗಳನ್ನು ಹೊಂದಿತ್ತು. ಅದು ಮೀನು, ತಾವರೆಯದಂಟನ್ನು ಸವಿಯುವ ಚಕ್ರವಾಕ, ಮೊಸಳೆಗಳು, ದೆಸೆದೆಸೆಗೆ ಪಕ್ವವಾಸನೆಯನ್ನುಹರಡುವ ಪುಷ್ಪಗಳಿಂದ ಕೂಡಿತ್ತು. ಅಲ್ಲಿರುವ ಕೆಂದಾವರೆಗಳು ಬುಡದಲ್ಲಿ ಹಸಿರುದಳದಿಂದ ಮಧ್ಯೆ ಕೆಂದಳದಿಂದ, ಮೇಲ್ಭಾಗದಲ್ಲಿ ಹೊಂಬಣ್ಣದ ಕೇಸರ ಕಾಂತಿಯಿಂದಿದ್ದು; ಅದಕ್ಕೆ ಎರಗುವ ತುಂಬಿಗಳ ಕಪ್ಪಾದ ಬಣ್ಣದ ಹೊಳಪಿನಿಂದ ಇಂದ್ರಧನುವಿನಂತೆ ಕಾಣುತ್ತಿತ್ತು. ಅದು ಪಾರ್ವತಿಯ ಕಣ್ಣುಗಳಿಗೆ ರಮ್ಯವಾಗಿ ಕಂಡಿತು. ಆ ತಿಳಿಗೊಳದ ದಡದಲ್ಲಿ ಪಾರ್ವತಿಯು ಪರ್ಣಶಾಲೆಯನ್ನು ಕಟ್ಟಿಕೊಂಡಳು. ಸುಧಾಸೂತಿಮೌಳಿಯನ್ನು ಭಕ್ತಿಯಿಂದ ಧ್ಯಾನಿಸಿದಳು. ಆತನು ಮೆಚ್ಚಿ 'ಈ ಸ್ಥಳದಲ್ಲಿ ನಿನ್ನ ತಪೋನಿಷ್ಠೆಗೆ ವಿಘ್ನ ಉಂಟಾಗದಿರಲಿ' ಎಂದು ವರವನ್ನು ಕೊಟ್ಟನು.

ಆ ವನದಲ್ಲಿ ಈಶ್ವರನರಾಣಿಯು ಯೋಗಿಣಿಯಾಗಿರುವಳು ಎಂಬ ಮಾತು ಪ್ರಚಲಿತವಾಯಿತು. ಪಾರ್ವತಿಯು ಶಿವನ ಅರ್ಧಾಂಗಿಯಾಗಿ ಹೊಂದಿದ್ದ ಸುಖವನ್ನು ಮರೆತು ತಪಸ್ವಿನಿಯಾಗಿದ್ದಳು. ತಿಳಿಗೊಳದಲ್ಲಿ ಸ್ನಾನಮಾಡಿ; ಪ್ರತಿ ದಿನ ಜಪ, ಸಮಾಧಿ, ಯಮನಿಯಮಗಳಿಂದ ಚಿತ್ತೈಕಾಗ್ರತೆ ಹೊಂದಿದ್ದಳು. ಅಂತರಾತ್ಮನಾಗಿರುವ, ಸಕಲದೇವತೆಗಳಿಂದ ವಂದಿತನಾದ, ಸುಜ್ಞಾನದ ನೆಲೆಯಾದ ಶಿವನನ್ನು ಸದಾ ಧ್ಯಾನಿಸುತ್ತಿದ್ದಳು.

ಅಚಲೇಂದ್ರತನುಜೆ ಹಾಗೆ ತಪಸ್ಸು ಮಾಡುತ್ತಿರಲು ಆ ಅರಣ್ಯದಲ್ಲಿ ಬಿರುಗಾಳಿ ಬೀಸುತ್ತಿರಲಿಲ್ಲ. ಬಿಸಿಲು ತೀವ್ರವಾಗಿ ನೆಲವನ್ನು ಸುಡುತ್ತಿರಲಿಲ್ಲ. ಕಾಡ್ಗಿಚ್ಚು ಒಂದು ಹುಲ್ಲು ಕಡ್ಡಿಯನ್ನೂ ಸುಡುತ್ತಿರಲಿಲ್ಲ. ಮೇಘವು ಗುಡುಗು, ಸಿಡಿಲ್ಮಿಂಚುಗಳಿಂದ ಭಯಂಕರವಾಗಿ ಮಳೆ ಸುರಿಸುತ್ತಿರಲಿಲ್ಲ. ತರುಗಳಲ್ಲಿ ಎಲೆ, ಹೂ ಚಿಗುರುಗಳ ಇಂಪು, ಸೊಂಪು ಮಾಸದೆ ಅವು ಹಣ್ಣು ಕಾಯಿಗಳಿಂದ ಸದಾ ತುಂಬಿರುತ್ತಿದ್ದುವು. ಹೀಗೆ ಎಲ್ಲ ಋತುಗಳು ಸಮತೋಲದಲ್ಲಿ ಇದ್ದವು.

ಪಾರ್ವತಿಯು ತಪಸ್ಸು ಮಾಡುವಾಗ ಅಷ್ಟ ಯೋಗಿಣಿಯರು, ಅಷ್ಟ ಸಿದ್ಧಿಗಳು, ಚೌಷಷ್ಟಿಕಲೆಗಳು; ಸಪ್ತಮಾತೃಕೆಯರು, ಶ್ರೇಷ್ಠನದಿಗಳು; ಹಗಲು, ರಾತ್ರಿ, ತಿಥಿ ವಾರಗಳು; ತುಷ್ಟಿ, ದಯೆ, ಪುಷ್ಟಿ, ಧೃತಿ, ಮತಿ, ಸೈರಣೆ ದಾಂತಿಗಳು; ಕೃತಿ, ನಿಷ್ಠೆ, ಸ್ತೋತ್ರಗಳು, ಸಕಲ ಮಂತ್ರಶಕ್ತಿಗಳು; ಅಪ್ಸರಸ್ತ್ರೀಯರು, ಸಮಸ್ತವಸ್ತುಗಳ ಅಭಿಮಾನಿ ದೇವತೆಯರು ಶುಶ್ರೂಷೆಯನ್ನು ಮಾಡುತ್ತಿದ್ದರು. ಕಾತ್ಯಾಯಿನಿಯು ಮೋಕ್ಷದಾಯಕಿ, ಸಕಲಮಂತ್ರದಾಯಕಿ, ಮಾಯೆ, ಸಾಕ್ಷಾತ್ ಜಗನ್ಮಾತೆ, ಮಹಾಶಕ್ತಿ ತಾನೇ ಆಗಿದ್ದರೂ ಈ ತಪಸ್ಸನ್ನು ಏತಕ್ಕಾಗಿ ಮಾಡುತ್ತಿರುವಳು ಎಂದು ಬ್ರಹ್ಮಾದಿದೇವತೆಗಳು ಆಕ್ಷೇಪದ ನುಡಿ ಆಡುತ್ತಿದ್ದರು. ಹಾಗಿದ್ದರೂ ಗಿರಿಜೆಯು ಭಾಳಾಕ್ಷನಾದಶಿವನನ್ನು ಬಿಡದೆ ಧ್ಯಾನಿಸುತ್ತಿದ್ದಳು. ಆಗ ಒಬ್ಬ ರಾಕ್ಷಸನು ಕಾಡಿನಲ್ಲಿ ಸಂಚರಿಸುತ್ತ ಅಲ್ಲಿಗೆ ಬಂದು ಪಾರ್ವತಿಯನ್ನು ಕಂಡನು.

ಎಲೈ ಜನಮೇಜಯರಾಯನೇ ಕೇಳು. ಆ ರಾಕ್ಷಸನು ಯೋಗಿಣಿ ಪಾರ್ವತಿಯನ್ನು ನೋಡಿ ನಮಸ್ಕರಿಸಲಿಲ್ಲ. ಆಕೆಯರೂಪಕ್ಕೆ ಮೋಹಗೊಂಡ. ಮನ್ಮಥನ ಹೂವಿನಬಾಣದ

ಕಾಮಬಾಧೆಯಿಂದ ಕಂಗೆಟ್ಟ. ಆಕೆಯೊಡನೆ ಬೇಟದ ಕಟಕಿಯಿಂದ ಮಾತಾಡಿದ. ಭುವನ ಲೋಕಮಾತೆಯಾದ ಪಾರ್ವತಿಯು ಕುಪಿತಳಾಗಿ ಅವನನ್ನು ನೋಡಲು; ಆಕೆಯ ನೇತ್ರಾಗ್ನಿಯಿಂದ ಅವನು ಸುಟ್ಟು ಬೂದಿಯಾದನು.

ಅನಂತರ ದೇವಿಪಾರ್ವತಿಯು ತುಬಾ ವ್ಯಥೆ ಪಟ್ಟಳು. ಅಂತಹ ಅನರ್ಥಗಳನ್ನು ಹೋಗಲಾಡಿಸಲು ಶಾಪ ನೀಡಿದಳು:

'ಇಂದು ಮೊದಲಾಗಿ ಈ ವನವನ್ನು ಯಾವ ಗಂಡುಪ್ರಾಣಿ ಪ್ರವೇಶ ಮಾಡಿದರೆ, ಆಗಲೇ ಆ ಜೀವಿಗೆ ಸ್ತ್ರೀತ್ವವು ಪ್ರಾಪ್ತವಾಗಲಿ.'

ಆ ವನದಲ್ಲಿಯೇ ಆಕೆ ಬಹುಕಾಲ ತಪಸ್ಸುಮಾಡುತ್ತಇದ್ದು ತನ್ನ ಇಷ್ಟಾರ್ಥವನ್ನು ಪೂರೈಸಿಕೊಂಡಳು. ಆಗಿನಿಂದ ಈವರೆಗೆ ಆ ವನಕ್ಕೆ ಗಂಡಾಗಿರುವ ಸರ್ಪ, ಮೃಗ, ಪಶು, ಪಕ್ಷಿ ಯಾವ ಪ್ರಾಣಿಯು ಪ್ರವೇಶಿಸಿದರೂ ಅದು ಹೆಣ್ಣಾಗಿ ಹೋಗುವುದು.

**ಯಜ್ಞಾಶ್ವ ಹೆಣ್ಣು ಕುದುರೆಯಾಗಿ ಹುಲಿಯಾದುದು**

ರಾಜೇಂದ್ರ ಜನಮೇಜಯನೇ ಕೇಳು. ಫಲ್ಗುಣನ ಕುದುರೆಯು ಪಾರ್ವತಿ ತಪಸ್ಸನ್ನಾಚರಿಸುತ್ತಿದ್ದ ಆ ವನಕ್ಕೆ ಹೋಗಿ, ಅಲ್ಲಿ ರಾರಾಜಿಸುವ ತಿಳಿಗೊಳದ ನೀರನ್ನು ಕುಡಿಯಿತು. ಅಲ್ಲಿಂದ ಹೊರಟು ಬರುವಾಗ ಹೆಣ್ಣು ಕುದುರೆಯಾಗಿತ್ತು. ಅದನ್ನು ಏನೆಂದು ಹೇಳಲಿ? ಎಲ್ಲ ಜನರು ಅದನ್ನು ನೋಡಿ ಆಶ್ಚರ್ಯಕ್ಕೊಳಗಾದರು. ಅರ್ಜುನನು 'ಈ ಜಗತ್ತಿನಲ್ಲಿ ಇಂಥ ಕಥೆ ಹೊಸದಾಗಿದೆ, ಶಿವ ಶಿವ' ಎಂದು ವಿಸ್ಮಿತನಾದನು. ಶ್ರೀಕೃಷ್ಣನನ್ನು ಅನನ್ಯವಾಗಿ ಧ್ಯಾನಿಸಿದನು.

ಯಜ್ಞಾಶ್ವವು ಹೆಣ್ಣು ಕುದುರೆಯಾದುದರಿಂದ ಅರ್ಜುನನು ಚಿಂತಾಕ್ರಾಂತನಾದನು.

**ಸರಸಿಗೆ ಅಕೃತವರ್ಣನ ಶಾಪ**

ಪೂರ್ವದ ಕೃತಯುಗದ ಆದಿಭಾಗದಲ್ಲಿ ಅಕೃತವರ್ಣನೆಂಬ ಬ್ರಾಹ್ಮಣನಿದ್ದನು. ಆತ ತೀರ್ಥಯಾತ್ರೆ ಹೊರಟು ಲೋಕದಲ್ಲಿರುವ ಪುಣ್ಯಕ್ಷೇತ್ರಗಳನ್ನು ಸುತ್ತಿ ಒಂದು ಸರೋವರದಲ್ಲಿ ಸ್ನಾನಕ್ಕೆ ಇಳಿದನು. ಆ ಶುದ್ಧನೀರಿನಲ್ಲಿ ನಿಂತು ವರುಣಮಂತ್ರಗಳನ್ನು ಪಠಿಸುತ್ತಿದ್ದನು. ಆಗ ಒಂದು ಮೊಸಳೆಯು ಬಂದು ಅವನಕಾಲನ್ನು ಬಲವಾಗಿ ಹಿಡಿದುಕೊಂಡಿತು.

ಅಕೃತವರ್ಣನು ತನ್ನ ಕಾಲನ್ನುಹಿಡಿದು ನೀರಿನಮಧ್ಯಕ್ಕೆ ಎಳೆಯುತ್ತಿರುವ ಜಂತು ಯಾವುದು? ಇದು ಸರ್ಪವೋ ಅಥವಾ ರಾಕ್ಷಸರ ಮಾಯೆಯೋ? ಜಲದಲ್ಲಿ ಹುಟ್ಟಿರುವ ಮೀನೋ, ದೊಡ್ಡ ಮೊಸಳೆಯೋ? ಶಿವ ಶಿವಾ. ಇದು ದುಸ್ಸತ್ತ್ವಕ್ಕೆ ನೆಲೆಯಾಗಿದೆ. ಇದಕ್ಕೆ ಉಪಾಯವೇನೆಂದು ಚಿಂತಿಸಿದನು. ತನ್ನ ಉನ್ನತ ತಪೋಬಲದಿಂದ ಕಾಲನ್ನು ಒದರಿದನು. ಕಾಲನ್ನು ಬಿಡದೆ ಹಿಡಿದಿದ್ದ ಮೊಸಳೆಯ ಬಲವಾದ ಹಲ್ಲುಗಳು ಮುರಿದುಹೋದವು. ಅದರಿಂದ ಬಿಡಿಸಿಕೊಂಡು ತಕ್ಷಣ ದಡಕ್ಕೆ ಬಂದನು. ಕೋಪಗೊಂಡು, ನೀರಿನಲ್ಲಿದ್ದ ಜಲದೇವತೆಗಳನ್ನು ಉದ್ದೇಶಿಸಿ ನುಡಿದನು:

'ಕ್ರೂರ ಸತ್ವಕ್ಕೆ ಆಶ್ರಯವಾದ ನೀರು ಇದು. ನನ್ನನ್ನು ಕಡು ಭಯಂಕರವಾಗಿ ಬಾಧಿಸಿದೆ. ಇನ್ನು ಮೇಲೆ ಇಲ್ಲಿ ನೀರನ್ನುಕುಡಿದ ಪ್ರಾಣಿಗಳು ಅತಿ ಭಯಂಕರವಾಗಿ ಲೋಕಕ್ಕೆ ಭೀತಿಯನ್ನುಂಟುಮಾಡುವ ಹುಲಿಯಾಗಲಿ.'

ಆ ಸರಸಿಗೆ ಅಕೃತವರ್ಣನ ಶಾಪ ಎಂದು ಬಂದಿತೋ ಅಂದಿನಿಂದ, ಅದು ಲೋಕಕ್ಕೆ ಭಯಂಕರವಾಯಿತು. ಉಗ್ರವಾದ ಹುಲಿಯಾಗಿಹೋಗುವ ಭಯದಿಂದ ಯಾವ ಪ್ರಾಣಿಯೂ

ಅದರಲ್ಲಿ ನೀರನ್ನು ಕುಡಿಯುತ್ತಿರಲಿಲ್ಲ. ಅಂದು ಹೆಣ್ಣುಕುದುರೆಯಾಗಿದ್ದ ಅರ್ಜುನನ ಯಜ್ಞಾಶ್ವವು ಬಂದು–ಆ ಸರೋವರದಲ್ಲಿ ನೀರನ್ನು ಕುಡಿದ ತಕ್ಷಣವೇ ಹುಲಿಯಾಗಿ ಯಾರಿಗೂ ದಿಕ್ಕುತೋಚದಂತೆ ಮಾಡಿತು. ಫಲ್ಗುಣನು ಮತ್ತೆ ಆಶ್ಚರ್ಯಗೊಂಡು ಚಿಂತೆಗೀಡಾದನು.

ಯಜ್ಞಾಶ್ವವೇ ಹೀಗಾದರೆ ಧರ್ಮರಾಯನ ಅಶ್ವಮೇಧವು ನಡೆಯುವುದು ಹೇಗೆ? ಮೂರುಲೋಕದಲ್ಲಿಯೂ ಹಾಸ್ಯಾಸ್ಪದವಾಗುವಂತೆ ಆಯಿತಲ್ಲ! ಇದು ಯಾರ ಶಾಪದ ಫಲ? ಇದು ವಿಪರೀತವಾಗಿದೆ! ಶಿವ ಶಿವಾ ಎಂದು ಪಾರ್ಥನು ಭಯದಿಂದ ಗಡಗಡ ನಡುಗಿದನು.

ಹಿಂದೆ ದುರ್ಯೋಧನಾದಿಗಳು ಮೋಸದಿಂದ ಮಾಡಿದ ಎಲ್ಲ ಕೇಡುಗಳನ್ನು ಪರಿಹಾರಮಾಡಿ ಪ್ರಾಣಉಳಿಸಿದ ಶ್ರೀಕೃಷ್ಣನೇ ನನಗೆ ಕೃಪೆತೋರು ಎಂದು ಮುರವೈರಿಯನ್ನು ಧ್ಯಾನಿಸುತ್ತ ಆಲೋಚನೆಗೆ ತೊಡಗಿದನು.

ಭಯ ನಿವಾರಣ, ಸಕಲ ಸೃಷ್ಟಿಕಾರಣ, ಜಗನ್ಮಯ, ಜನಾರ್ದನ, ದುಷ್ಟದೈತ್ಯಮರ್ದನ, ನತಾಶ್ರಯ, ಕೃಪಾಕರ, ಕೃಷ್ಣ ಈಗ ಬಂದಿರುವ ಈ ಭಯವನ್ನು ಪರಿಹರಿಸು ಎಂದು ಅರ್ಜುನನು ಮೊರೆಯಿಟ್ಟನು. ಅತಿ ಭಯಭಕ್ತಿಯಿಂದ, ಸದ್ಭಾವದೊಡನೆ ಅಸುರಾರಿಯನ್ನು ಪ್ರಾರ್ಥಿಸಿದನು. ಆಗ ಆ ಹುಲಿಗೆ ದೈವಾಧೀನದಿಂದ ತಾನಾಗಿಯೇ ಪೂರ್ವದ ಅಶ್ವರೂಪವು ಉಂಟಾಯಿತು. ಶ್ರೀಕೃಷ್ಣನು ತನ್ನ ಮಿತ್ರನಾದ ಪಾರ್ಥನಿಗೆ ಕೇಡಾಗುವುದನ್ನು ಎಂದಿಗೂ ಸೈರಿಸುವುದಿಲ್ಲ ಎಂದು ಸೈನಿಕರೆಲ್ಲರೂ ಕೊಂಡಾಡಿದರು.

ನಾಟಕದಲ್ಲಿ ಪಾತ್ರಧಾರಿಯು ನಾನಾವೇಷಗಳನ್ನು ಧರಿಸಿ, ನಾಟಕಆಡಿ ಮುಗಿಸಿದ ನಂತರ ತನ್ನರೂಪದಿಂದ ನೋಟಕರಿಗೆ ಕಾಣಿಸಿಕೊಳ್ಳುತ್ತಾನೆ. ಹಾಗೆ ಆ ಯಜ್ಞಾಶ್ವವು ಹೆಣ್ಣುಕುದುರೆಯಾಗಿ, ಹುಲಿಯಾಗಿ ಮತ್ತೆ ಯಾವಾಗಲೂ ಇದ್ದ ಹಾಗೆ ಉತ್ತಮಾಶ್ವವಾಯಿತು. ಸೇನೆಯಲ್ಲಿ ಸಂತೋಷಾಭಿವ್ಯಕ್ತಿಗಾಗಿ ವಿವಿಧವಾದ್ಯಗಳು ಮೊಳಗಿದವು.

ಪಾಂಡುಪುತ್ರರಿಗೆ ಆಗಾಗ ಒದಗುವ ವಿಧವಿಧವಾದ ಆಪತ್ತುಗಳನ್ನು ಪರಿಹರಿಸಿ ರಕ್ಷಿಸುವುದೇ ಕೃಷ್ಣನಕಾರ್ಯ ಎಂದು ಅಸುರಾರಿಯನ್ನು ಸೈನ್ಯ ಹೊಗಳಿತು. ಅದನ್ನು ಕೇಳಿ ಪಾರ್ಥನು ಸಂತೋಷದಿಂದ ಉಬ್ಬಿಹೋದನು.

* * *

# ವೀರ ಮಹಿಳೆ ಪ್ರಮೀಳೆ

ಯಜ್ಞಾಶ್ವವು ಪಾರಿಪ್ಲವ ದೇಶವನ್ನುಬಿಟ್ಟು ಅತಿವೇಗದಿಂದ ಹಲವು ದೇಶಗಳನ್ನುದಾಟಿ ಬರೀ ಸ್ತ್ರೀಯರೇ ವಾಸಿಸುತ್ತಿರುವ ರಾಜ್ಯದ ಒಳಸೀಮೆಯನ್ನು ಹೊಕ್ಕಿತು. ಫಲ್ಗುಣನಸೇನೆಯು ಕುದುರೆಯಹಿಂದೆ ಹೊರಟಿತು.

ದೊರೆ ಜನಮೇಜಯನೇ ಕೇಳು. ಆ ರಾಜ್ಯದಲ್ಲಿ ನಾರಿಯರು ಮಾತ್ರವೇ ವಾಸಿಸುತ್ತಿದ್ದರು. ಅವರು ಇಂದ್ರಿಯ ನಿಗ್ರಹವುಳ್ಳವರಾಗಿದ್ದರು. ಮದ್ಯಪಾನದಿಂದ ಮದಿಸಿದವರೂ, ಮನ್ಮಥನ ಕಲೆಯನ್ನು ಚೆನ್ನಾಗಿ ತಿಳಿದವರೂಆಗಿ ರೂಪ ಲಾವಣ್ಯಗಳಿಂದ ಪ್ರಕಾಶಿಸುತ್ತಿದ್ದರು. ಅವರು ಸಂಗೀತ, ನೃತ್ಯ, ವೇಣು, ಕೊಳಲುವಾದಕರಾಗಿ ವಿನೋದದಿಂದಿದ್ದು; ಮನೋಹರವಾದ ಸುಖದಿಂದ ಕೂಡಿದ್ದರು. ಅವರಲ್ಲೊಬ್ಬಳು ಅರಸು ಆಗಿರಲು ಅವಳ ಆಜ್ಞೆಯಂತೆ ಎಲ್ಲರೂ ನಡೆದುಕೊಳ್ಳುತ್ತ ಬಹಳ ವೈಭವದಿಂದ ಜೀವಿಸುತ್ತಿದ್ದರು.

ಆ ಸ್ತ್ರೀಯರ ಬಳಿಗೆಹೋದ ಪುರುಷರು ಒಬ್ಬರೂಬದುಕುತ್ತಿರಲಿಲ್ಲ.

ಲತಾಂಗಿಯರಾದ ಆ ಸ್ತ್ರೀಯರು ತಮ್ಮ ಚೆಲ್ಲೆಗಂಗಳಿಂದ ಗಂಡಸರಲ್ಲಿ ಮೋಹವನ್ನುಬೀರಿ ಸೆಳೆದು ಅವನ ಜೊತೆ ಸುಖಿಸುತ್ತಿದ್ದರು. ಆ ಸ್ತ್ರೀಯರ ಜೊತೆ ಒಮ್ಮೆಕೂಡಿದ ಪುರುಷ ಮತ್ತೆಮತ್ತೆ ಆಕೆಯೊಡನೆಯೇ ಭ್ರಾಂತಿಯಿಂದ ಇದ್ದುಬಿಡುತ್ತಿದ್ದನು.

ಆ ಕಾಮಿನಿಯರು ಒಂದುತಿಂಗಳಕಾಲ ಆ ಪುರುಷನೊಡನೆ ರಮಿಸುತ್ತಿದ್ದರು. ಆ ವಿಶಾಂಗನೆಯರ ಸಂಗದಿಂದ ತನಗೆ ಮರಣ ಒದಗುವುದೆಂದು ತಿಳಿದ ಪುರುಷನು ಮಧ್ಯದಲ್ಲಿ ಬಿಟ್ಟುಹೋಗಲು ಪ್ರಯತ್ನಿಸುತ್ತಿದ್ದನು. ಆಗ ಆ ಅಂಗನೆಯರು ತಮ್ಮನ್ನು ಮೆಚ್ಚದೆ ಹೋಗುವ ಅವನ ಕಾಲಿಗೆ ಬಿದ್ದು ಅವರ ಜೊತೆಯೇ ಉಳಿಯುವಂತೆ ಒಪ್ಪಿಸುತ್ತಿದ್ದರು. ಅವನು ಅದಕ್ಕೆ ಒಪ್ಪದಿದ್ದರೆ ಕೋಪದಿಂದಗದರಿ, ಉಗುರುಗಳಿಂದ ಘಾತಿಸಿ, ತುಡುಕಿ ಅವನಜೊತೆ ಬೆರೆತು ಅವನ ಪ್ರಾಣ ಹೋಗುವವರೆಗೂ ಬಿಡುತ್ತಿರಲಿಲ್ಲ.

ಆ ದೇಶದ ಸ್ತ್ರೀಯನ್ನು ಮೋಹಿಸಿದ ಪುರುಷನು, ಸಂಪಿಗೆ ಹೂವನ್ನು ಮುತ್ತಿದ ತುಂಬಿಯಂತೆ ಮೆಚ್ಚಿ ಒಂದುತಿಂಗಳಾದಕೂಡಲೇ ಸಾಯುತ್ತಿದ್ದನು. ಆಗ ಆ ಹೆಂಗಸು ಅಗ್ನಿ ಪ್ರವೇಶ ಮಾಡುತ್ತಿದ್ದಳು. ಅಲ್ಲದಿದ್ದರೆ ಗರ್ಭವತಿಯಾಗಿ ಹೆಣ್ಣು ಮಗುವನ್ನು ಪಡೆಯುತ್ತಿದ್ದಳು. ಆ ಕಾರಣದಿಂದ ಅಲ್ಲಿ ಹೆಂಗಸರು ಹೆಚ್ಚು ಇದ್ದರು.

ಅಲ್ಲಿಗೆ ಬಂದ ಅರ್ಜುನನು ಆ ವೃತ್ತಾಂತವನ್ನು ಕೇಳಿ ಎಚ್ಚರಿಕೆಯಿಂದ ಇರಬೇಕೆಂದು ತನ್ನ ಸೇನೆಗೆ ತಿಳಿಯಪಡಿಸಿದನು. ಪಾಳೆಯದ ಎಲ್ಲರೂ ಮೈ ಮರೆಯದಂತಿರಲು ಸೇನೆಯಲ್ಲಿ ಡಂಗುರ ಹಾಕಿಸಿದನು. ವೃಷಕೇತು ಮೊದಲಾದ ವೀರರನ್ನು ಕರೆದು ವಿವೇಕದ ನುಡಿ ಹೇಳಿದನು:

'ಈ ವಿಷಕನ್ಯೆಯರು ಗಂಡಸರನ್ನು ಕಂಡ ಕೂಡಲೇ ತಮ್ಮ ಹಾವ ಭಾವಗಳಿಂದ ತಮ್ಮ ಕಡೆಗೆ ಸೆಳೆದುಕೊಳ್ಳುತ್ತಾರೆ. ಅವರೊಡನೆ ಸೇರಿದ ಪುರುಷನ ಆಯುಷ್ಯವನ್ನು ಅಪಹರಿಸುತ್ತಾರೆ. ಅವನು ಸಾವಿಗೀಡಾಗುತ್ತಾನೆ. ಆದಕಾರಣ ವಿಷಯ ಸುಖಕ್ಕೆ ಅಪೇಕ್ಷಿಸದೆ ಬುದ್ಧಿವಂತರಾಗಿರಬೇಕು.'

ಅವನಿಪಾಲ ಕುಲತಿಲಕ ಜನಮೇಜಯನೇ ಕೇಳು. ಯಜ್ಞಾಶ್ವವು ತಮ್ಮ ರಾಜ್ಯದಲ್ಲಿ

ಸ್ವೇಚ್ಛೆಯಾಗಿ ತಿರುಗುತ್ತಿರುವುದನ್ನು ಆ ಸ್ತ್ರೀಯರು ಕಂಡರು. ಅದರ ಭಾಳ ಪಟ್ಟದ ಲಿಖಿತವನ್ನು ಓದಿದರು. ಕೂಡಲೆ ಬಂದು ತಮ್ಮ ಅರಸಿಯಾಗಿರುವ ಪ್ರಮೀಳೆಗೆ ಸಂಭ್ರಮದಿಂದ ಹೀಗೆ ಹೇಳಿದರು: 'ಈ ಕುದುರೆ ಚಂದ್ರವಂಶದ ರಾಜ ಧರ್ಮರಾಯನದಂತೆ. ಇದನ್ನು ಬಲಶಾಲಿಗಳು ಕಟ್ಟಬಹುದಂತೆ. ಅದರ ಹಿಂದೆ ಕಾವಲಿಗಾಗಿ ಅರ್ಜುನನು ಸೇನೆಸಮೇತ ಬಂದಿರುವನಂತೆ, ಇದು ನಮಗೆ ಹೊಸತಾಗಿದೆ. ಆಶ್ಚರ್ಯಕರವಾಗಿದೆ.' ಪ್ರಮೀಳೆಯು ನಸುನಗುತ್ತ ಆ ಕುದುರೆಯನ್ನು ಲಾಯದಲ್ಲಿ ಕಟ್ಟಿಹಾಕಿಸಿದಳು. ಸಿಂಹಾಸನದಿಂದಇಳಿದು ಸಂಗ್ರಾಮಕ್ಕೆಹೊರಟಳು.

ಅರ್ಜುನನೊಡನೆ ಯುದ್ಧಕ್ಕೆ ಹೊರಟ ಪ್ರಮೀಳೆಯ ಸೈನ್ಯದಲ್ಲಿ ಇದ್ದವರೆಲ್ಲಾ ಸ್ತ್ರೀಯರೇ. ಒಂದುಲಕ್ಷ ಕುದುರೆ, ಒಂದುಲಕ್ಷ ಆನೆ, ಒಂದುಲಕ್ಷ ರಥ, ಮೂರು ಲಕ್ಷ ಕಾಲಾಳುಗಳಿಂದ ಆ ಚತುರಂಗಬಲ ಕೂಡಿತ್ತು. ಯುದ್ಧ ವೀರರಾದ ಆ ಹೆಂಗಸರು ಚಡ್ಡಿಗಳನ್ನು ಹಾಕಿಕೊಂಡಿದ್ದರು. ಸ್ತನಾವರಣವಾದ ಕವಚಗಳನ್ನು ತೊಟ್ಟಿದ್ದರು. ಕಾಂತಿಯಿಂದ ಕೂಡಿದ ಜಡೆ, ಕಸ್ತೂರಿ ತಿಲಕ, ಶ್ರೀಗಂಧದ ಲೇಪದಿಂದ ಮಘಮಘಿಸುತ್ತ, ಝುಗಝುಗಿಸುವ ಆಭರಣಗಳನ್ನು ತೊಟ್ಟಿದ್ದರು. ನಗೆಮೊಗದಲ್ಲಿ ಮಿಂಚುವ ಕಣ್ಣುಗಳಿಂದ, ಹೊಳೆಯುವ ಪಾದಗಳನ್ನು ಹೊಂದಿ, ಸೊಗಸು ಬೀರುವ ತೋಳುಗಳಿಂದ ವಿವಿಧ ಆಯುಧಗಳನ್ನು ಹಿಡಿದು ಆ ಸಮರ್ಥೆಯರು ಯುದ್ಧದಲ್ಲಿ ಮುನ್ನಡೆದರು.

ಆನೆಗಳ ಮೇಲೆ ಕುಳಿತು ಬರುವ ಯುದ್ಧ ವೀರೆಯರು ಮಂದಗಮನೆಯರಾಗಿ, ಕೋಮಲ ತೋಳುಗಳಿಂದ, ಕುಂಭ ಕುಚದಿಂದ ಯೌವನಮದದೊಡನೆ ಸುಂದರಿಯರಾಗಿದ್ದರು. ಅವರ ಕಪ್ಪು ತುಂಬಿಗಳಂತಹ ಮುಂಗುರುಳು ಸಿಂಧೂರದಿಂದ ಪ್ರಕಾಶಿಸುವ ಬೈತಲೆ, ಮನೋಹರವಾದ ಕಿಂಕಿಣಿಗಳ ನಡುಪಟ್ಟಿ ಅವರ ಠೀವಿಗೆ ಶೋಭಾಯಮಾನವಾಗಿದ್ದವು.

ಪ್ರಕಾಶಿಸುವ ಕಡೆಗಣ್ಣಿನಿಂದ, ಕೋಮಲ ತೊಡೆಗಳಿಂದ, ದೊಡ್ಡದಾದ ಸ್ತನಯುಗ್ಮಗಳಿಂದ – ಪ್ರಣಯ ಕಲಹದಲ್ಲಿ ಕೋಪಗೊಂಡ ಪ್ರಿಯರನ್ನು ಗೆಲ್ಲಲು ಮನೋರಥವೇರಿ ಹೋಗುವ ಸ್ತ್ರೀಯರು – ಈಗ ಪಾರ್ಥನೊಡನೆ ಯುದ್ಧ ಮಾಡಲು ಸುವರ್ಣರಥಗಳನ್ನೇರಿ ಹೊರಟಿದ್ದರು. ಅದನ್ನು ಅರ್ಜುನನ ಸಕಲಪರಿವಾರದ ವೀರರು ಆಶ್ಚರ್ಯಚಕಿತರಾಗಿ ನೋಡುತ್ತಿದ್ದರು.

ಚಂಚಲವಾದ ಕಣ್ಣುಗಳುಳ್ಳ ಆ ಸ್ತ್ರೀಯರ ತಳತಳಿಸುವ ಕುಡಿಮಿಂಚು, ಅವರು ಹತ್ತಿದ್ದ ಕುದುರೆಗಳ ವೇಗವನ್ನು ಮೀರಿಸಿದ್ದುವು. ಅವರು ನಳಿತೋಳ್ಗಳಿಂದ ಹಿಡಿದು ಝುಳಪಿಸುವ ಆಯುಧಗಳ ಕಾಂತಿಯು, ಅವರು ಧರಿಸಿದ ವಜ್ರ ರತ್ನಗಳಿಂದ ಕೂಡಿದ ಆಭರಣಗಳನ್ನು ಪರೀಕ್ಷಿಸುವಂತಿದ್ದುವು. ಅವರು ತಮ್ಮ ಸೌಂದರ್ಯದಿಂದ ಮೋಹಗೊಳಿಸುತ್ತಿದ್ದ ಮನ್ಮಥನ ಐದು ಬಾಣಪ್ರಯೋಗದಲ್ಲಿ ವಿವಿಧ ಅಸ್ತ್ರಗಳ ಸಮೂಹ ಅಡಗಿತ್ತು. ಅವರು ಹಿಡಿದಿದ್ದ ಬಿಲ್ಲಿನ ಡೊಂಕನ್ನು ಮೀರಿ ಅವರ ಹುಬ್ಬು ಸುಂದರವಾಗಿತ್ತು.

ಪ್ರಮೀಳೆಯ ಚತುರಂಗ ಸೇನೆಯು ಸಾಲು ಸಾಲಾಗಿ ಹೊರಟಿತು. ನಾನಾ ಪ್ರಕಾರದ ಆಯುಧಗಳನ್ನು ಝುಳಪಿಸುತ್ತ ವಿನೋದದಿಂದ ಆ ಹೆಂಗಸರು ಅರ್ಜುನನ ಸೈನ್ಯವನ್ನು ಮುತ್ತಿದರು. ಆ ಸೇನೆಯ ಮಧ್ಯದಲ್ಲಿ ನಗುಮೊಗದಿಂದ ಚಿನ್ನದ ರಥದಲ್ಲಿ ಕುಳಿತು

ಪ್ರಮೀಳೆಯು ಬರುತ್ತಿದ್ದಳು. ರಥವು ಬಾಲಸೂರ್ಯನಂತೆಯೂ, ಪ್ರಮೀಳೆಯ ಮುಖವು ಬಾಲಚಂದ್ರನಂತೆಯೂ ಇದ್ದು – ಒಮ್ಮೆಗೆ ಅವರಿಬ್ಬರೂ ಉದಯಿಸಿದಂತೆ ಕಾಣುತ್ತಿತ್ತು.

ಪ್ರಮೀಳೆಯು ಬಂದು, ಎತ್ತರವಾದ ಕಪಿಧ್ವಜದಿಂದ ಕೂಡಿದ ಮಣಿರಥದಲ್ಲಿ ಪ್ರಕಾಶಿಸುವ ಕಿರೀಟಿಯನ್ನು ಕಂಡು ನಗುನಗುತ್ತ ಮಾತಾಡಿಸಿದಳು:

'ಫಲ್ಗುಣನು ನೀನೇನೋ? ನಾನು ಅಶ್ವವನ್ನು ಹಿಡಿದುಕಟ್ಟಿದೆನು. ನೀನು ಬಿಡಿಸಿಕೊಳ್ಳುವ ರೀತಿ ವಿರೋಧದಿಂದಲೋ. ವಿನಯದಿಂದಲೋ? ಇನ್ನು ಯುದ್ಧದಲ್ಲಿ ಕಾಣಬಹುದು.'

'ನನಗೆ ನಾರಿಯೊಡನೆ ಯುದ್ಧವೇ? ಕೋಪದಿಂದ ಶಿವನೊಡನೆ ಯುದ್ಧ ಮಾಡಿದ ಭಯಂಕರ ಧನುವಿನ ಹೆದೆಯಲ್ಲಿ ಬಾಣವನ್ನು ನಿನ್ನ ಮೇಲೆ ಹೇಗೆ ಹೂಡಲಿ?' ಎಂದು ರಸಿಕನಾದ ಅರ್ಜುನನು ನಗುನಗುತ್ತ ಅವಳಿಗೆ ಹೇಳಿದ, 'ನೀನು ಮಂಚವನ್ನು ಹತ್ತಿದರೆ ಮನ್ಮಥನ ಯುದ್ಧದಲ್ಲಿ ನಿನ್ನ ಸಾಮರ್ಥ್ಯವನ್ನು ತೋರಿಸಿದರೆ, ಅದು ನೀರಸವೆನಿಸುವುದಿಲ್ಲ. ಅಲ್ಲವೇ?'

'ನೀನು ನನ್ನನ್ನುವರಿಸಿ ಮಂಚದಲ್ಲಿಸೇರಿದರೆ, ನಿನಗೆ ಮನ್ಮಥ ಕ್ರೀಡಾಯುದ್ಧದಲ್ಲಿ ಅಪರಿಮಿತ ಸುಖವನ್ನುಂಟು ಮಾಡುವೆನು. ರತಿತಂತ್ರದ ಕ್ರಮವನ್ನು ತೋರಿಸುವೆನು' ಎಂದು ನುಡಿಯುತ್ತ, ತುಸು ಕೋಪವನ್ನು ಪ್ರಕಟಿಸಿ ಪ್ರಮೀಳೆಯು 'ನನ್ನನ್ನು ವರಿಸದಿದ್ದರೆ ನಿನ್ನ ತುರಗವನ್ನು ಬಿಡುವುದಿಲ್ಲ. ಪರಾಕ್ರಮದಿಂದ ಕಾದುವ ಕುತೂಹಲವಿದ್ದರೆ ನನಗೆ ಎದುರಾಗಿ ನಿಂತು ನೋಡು' ಎಂದು ಅರ್ಜುನನ ಮೇಲೆ ಬಾಣಪ್ರಯೋಗ ಮಾಡಿದಳು.

ಆ ಬಾಣವನ್ನು ಸಹಿಸಿಕೊಂಡು ಅರ್ಜುನನು.'

'ಎಲೈ ಪ್ರಮೀಳೆಯೇ, ವಿಷಯ ಸುಖದಿಂದ ನಿನ್ನನ್ನು ಬಯಸಿ ಒಲಿದರೆ ನಿನ್ನ ಸಂಸರ್ಗದಿಂದ ನನಗೆ ವಿಷವೇರದಿರುವುದೇ' ಎಂದು ನಿಜ ಸಂಗತಿಯನ್ನು ತಿಳಿಸುತ್ತ 'ಈ ದೇಶದಲ್ಲಿ ಹುಟ್ಟಿದ ಸ್ತ್ರೀಯರನ್ನು ಕೂಡಿ ಬದುಕುವ ಗಂಡಸರು ಉಂಟೇ? ಅದು ಹಾಗಿರಲಿ, ಬಿಡು. ಗೂಳಿಯಂತೆ ನುಗ್ಗಿ ಎದುರಿಗೆ ನಿಲ್ಲುವ ಭಟರೊಡನೆ ಕಠಿಣ ನುಡಿಗಳನ್ನು ಆಡುವ ನಾನು, ಅಬಲೆಯಾದ ನಿನ್ನೊಡನೆ ಅಂತಹ ನುಡಿ ಆಡುವುದು ಯುಕ್ತವಲ್ಲ. ಸ್ತ್ರೀ ಹತ್ಯೆಗೆ ನಾನು ಹೆದರುವೆ. ಕುದುರೆಯನ್ನು ಬಿಡು'

'ನೀನು ನನ್ನೊಡನೆ ಯುದ್ಧಮಾಡಿದರೆ ಈಗಲೇ ಬಾಣದಿಂದಕೊಲ್ಲುವೆನು. ಹಾಗಲ್ಲದೆ ನೀನು ನನಗೆ ಪತಿಯಾದರೆ, ರತಿಯಮೋಹಕ್ಕೆ ಪಕ್ಕಾದ ಸೊಗಸಿನ ಸುಖವನ್ನುಅನುಭವಿಸಿ ಮರಣಹೊಂದುವೆ. ನಿನ್ನನ್ನು ಸಾವು ಹೇಗಾದರೂ ಬಿಡದು. ಪ್ರೀತಿಯಿಂದ ನನ್ನಲ್ಲಿ ರಮಿಸುವುದು ಇಷ್ಟವಾದರೆ ಹಾಗೆ ಮಾಡು. ಅಥವಾ ಯುದ್ಧ ಮಾಡುವುದೇ ಒಳ್ಳೆಯದೆನಿಸಿದರೆ ನಿನ್ನ ಪರಾಕ್ರಮವನ್ನು ತೋರಿಸು'.

ಎಂದು ಹೇಳಿ ಅರ್ಜುನನ ಮೇಲೆ ಬಾಣದಮಳೆಯನ್ನು ಸುರಿಸಿದಳು. ಪಾರ್ಥನು ಹಿಂದೆ ಶೂರ್ಪಣಖಿಯೆಂಬ ರಾಕ್ಷಸಿಯು ಲಕ್ಷ್ಮಣನನ್ನು ಬಹಳವಾಗಿಪೀಡಿಸಿ ಹೊಂದಿದ ದುರ್ಗತಿಯನ್ನು ನೆನೆದನು. ಇವಳನ್ನು ಈ ಕ್ಷಣವೆ ಭಂಗಿಸುವೆ ಎಂದು ಸಮ್ಮೋಹನಾಸ್ತ್ರವನ್ನು ಗಾಂಡೀವದಲ್ಲಿಹೂಡಿ ಪ್ರಯೋಗಿಸಿದನು. ಅದನ್ನು ಪ್ರಮೀಳೆ ಮುಗುಳು ನಗೆಯಿಂದಲೇ ಕತ್ತರಿಸಿ, ಅವನ ಬಿಲ್ಲಿನ ಹಗ್ಗವನ್ನು ತುಂಡರಿಸಿದಳು. ತನ್ನ ಬಾಣಗಳಿಂದ ಇಂದ್ರಸುತನನ್ನು ತುಂಬಾ ನೋಯಿಸಿದಳು. ಕೋಪಗೊಂಡ ಪಾರ್ಥನು ಬಿಲ್ಲಿಗೆ ಮತ್ತೊಂದು ಮೌರ್ವಿಯನ್ನು ಬಿಗಿದು, ಒಂದು ಮಂತ್ರಾಸ್ತ್ರವನ್ನು ಹೂಡಿದನು.

'ಎಲೈ ಪಾರ್ಥನೇ, ಸ್ತ್ರೀಹತ್ಯೆಗೆ ಹೇಸದೆ ಮಹಾಸ್ತ್ರವನ್ನು ಹೂಡುತ್ತಿರುವುದು ಸರಿಯಲ್ಲ, ಬಿಡು' ಎಂಬ ಅಶರೀರವಾಣಿ ಎಲ್ಲರಿಗೂ ಕೇಳುವಂತೆ ಗಂಭೀರ ಧ್ವನಿಯಲ್ಲಿ 'ನೀನು ಕೋಪಿಸಿಕೊಂಡು, ಒಂದು ವೇಳೆ ಇವಳೊಡನೆ ಹತ್ತುಸಾವಿರ ವರ್ಷಗಳ ಕಾಲ ಬಿಡದೆ ಯುದ್ಧಮಾಡಿದರೂ ಅದು ಮುಗಿಯುವುದಿಲ್ಲ. ಮನಸ್ಸಿನಹಟವನ್ನು ಬಿಡು. ಈಕೆಯನ್ನು ಸತಿಯಾಗಿ ಸ್ವೀಕರಿಸು. ಮುಂದೆ ನಿನಗೆ ಒಳ್ಳೆಯದಾಗುವುದು' ಎಂದು ಹೇಳಿತು.

ಅಶರೀರವಾಣಿಯನ್ನು ಆಲಿಸಿದ ಪಾರ್ಥನು ಬಾಣವನ್ನು ಬಿಲ್ಲಿನಿಂದ ಕೆಳಕ್ಕಿಳಿಸಿದನು. ಮುಂದಣ ಕಾರ್ಯವನ್ನುಕುರಿತು ಆಪ್ತರೊಡನೆ ಆಲೋಚಿಸಿದನು. ಪ್ರಮೀಳೆಯನ್ನು ತನ್ನ ಬಳಿಗೆ ಕರೆಸಿಕೊಂಡನು. ಆಗಿನ ಸಮಯಕ್ಕೆ ತಕ್ಕಹಾಗೆ ಆಕೆಯನ್ನು ಪಾಣಿಗ್ರಹಣ ಮಾಡಿಕೊಂಡನು. ಆಕೆಯು ತನಗೆ ಅನುಕೂಲವಾಗಿರಲು, ನಸುನಗುತ್ತ ನಯವಾಗಿ ಹೇಳಿದನು:

'ಎಲೈ ಅಬಲೆಯೇ ಕೇಳು. ನಮ್ಮ ಅಣ್ಣ ಧರ್ಮರಾಜನು ಯಜ್ಞದೀಕ್ಷೆಯನ್ನು ವಹಿಸಿರುವನು. ನಾನೂಕೂಡ ಅವನು ದೀಕ್ಷಿತನಾಗಿರುವವರೆಗೆ ಸ್ತ್ರೀಸಂಗವನ್ನು ಮಾಡುವುದಿಲ್ಲವೆಂದು ವ್ರತವನ್ನುಕೈಗೊಂಡು ಅಶ್ವರಕ್ಷಣೆಗೆಬಂದಿರುವೆನು. ಹಾಗಾಗಿ ಈ ಸಂದರ್ಭವು ನಾನು ನಿನ್ನೊಡಗೂಡಲು ಸಾಧ್ಯವಾಗಿ ತೋರುತ್ತಿಲ್ಲ. ಮುಂದೆ ಹಸ್ತಿನಾವತಿಯಲ್ಲಿ ನಡೆಯುವಅಧ್ವರಕ್ಕೆ ನೀನುಬಂದು ಮುರಾರಿಯ ದರ್ಶನವನ್ನು ಮಾಡು. ಅವನ ಅನುಗ್ರಹದಿಂದ ನಿನ್ನ ವಿಷವಧುತನದ ಕ್ರೌರ್ಯವನ್ನು ಹೋಗಲಾಡಿಸಿಕೊ. ನನ್ನೊಡನೆಸೇರು. ಇಬ್ಬರಿಗೂ ಸುಖ ಉಂಟಾಗುವುದು. ಆದ ಕಾರಣ ನೀನು ಅಲ್ಲಿಗೆ ಬರಲೇಬೇಕು.'

ಪಾರ್ಥನ ನುಡಿಗೆ ಪ್ರಮೀಳೆಯು ಒಪ್ಪಿದಳು. ತನ್ನ ಹಸ್ತಕಮಲವನ್ನು ನೀಡಿ ನಂಬುಗೆಯಿಂದ ವಾಗ್ದಾನವನ್ನು ತೆಗೆದುಕೊಂಡಳು. ಮನೆಯಿಂದ ಕುದುರೆಯನ್ನು ತರಿಸಿ ಅರ್ಜುನನಿಗೆ ಒಪ್ಪಿಸಿದಳು. ತನ್ನಲ್ಲಿದ್ದ ವಿವಿಧ ರತ್ನರಾಶಿಗಳನ್ನೂ, ತನ್ನ ದೇಶದಲ್ಲಿಯ ಅಮೂಲ್ಯವಸ್ತುಗಳನ್ನೂ ತರಿಸಿಕೊಟ್ಟಳು. ಯಮತನಯ ಧರ್ಮರಾಜನನ್ನು ಕಣ್ತುಂಬ ನೋಡುವ ತವಕದಿಂದ ಅತಿಸಂಭ್ರಮದೊಡನೆ ಹಸ್ತಿನಾವತಿಗೆ ಹೊರಟಳು.

* * *

# ದಾನವೇಂದ್ರ ಭೀಷಣ

ವಿಜಯನು ಪ್ರಮೀಳೆಯನ್ನು ಹಸ್ತಿನಾವತಿಗೆ ಕಳುಹಿಸಿ ಕುದುರೆಯ ಕೂಡೆ ಹೊರಟುಬರುತ್ತಿದ್ದನು. ಕುದುರೆಯು ಭೀಷಣನೆಂಬ ರಾಕ್ಷಸನ ಪುರಕ್ಕೆ ಹೋಯಿತು. ಆ ಪಟ್ಟಣದಲ್ಲಿ ಭೀಷಣನ ಮಾತಿಗೆ ಮರುಮಾತಾಡದೆ ಹಸಾದ ಎಂದು ಸಿದ್ಧವಾಗಿರುವ ಮೂರುಕೋಟಿ ರಾಕ್ಷಸರಿದ್ದರು. ಅವರು ಭೂಮಿಯಲ್ಲಿ ಅಯೋಗ್ಯವಾದ ಎಲ್ಲ ಕೃತ್ಯಗಳನ್ನು ಚೆನ್ನಾಗಿಮಾಡಬಲ್ಲ ಬಲಿಷ್ಠರಾಗಿದ್ದರು.

ದಾನವೇಂದ್ರ ಭೀಷಣನಿಗೆ ಮೇದೋಹೋತೃವೆಂಬ ಬ್ರಹ್ಮರಾಕ್ಷಸನು ಪುರೋಹಿತನಾಗಿದ್ದನು. ಅವನು ಕಾಡಿನಲ್ಲಿ ಆಹಾರವನ್ನು ಹುಡುಕಿಕೊಂಡು ಸುತ್ತಾಡುತ್ತಿರುವಾಗ ಕುದುರೆಯನ್ನು ಕಂಡನು. ಅದರ ಲಕ್ಷಣಗಳಿಂದ ಯಜ್ಞಾಶ್ವವೆಂದು ತಿಳಿದನು. ಕುದುರೆಯ ಕಾವಲಿಗೆ ಸೈನ್ಯವಿದೆಯೆಂದು, ಅದರ ಕಾವಲಿಗೆ ಕುದುರೆಯ ಒಡೆಯ ಅರ್ಜುನನಿರುವನೆಂದು ಊಹಿಸಿ ತಿಳಿದನು. ತೋಳನ್ನು ತಟ್ಟುತ್ತ ಸಂಭ್ರಮದಿಂದ ಭೀಷಣನ ಸಭೆಗೆ ಓಡಿಬಂದನು.

ಮೇದೋಹೋತೃವಿನ ವೇಷಭೂಷಣ ತುಂಬ ಭಯಂಕರವಾಗಿತ್ತು. ನರಗಳಿಂದ ಮಾಡಿದ ಯಜ್ಞೋಪವೀತ, ಕಣ್ಣುಗುಡ್ಡೆಗಳನ್ನು ಪೋಣಿಸಿ ಮಾಡಿದ ಕಂಠಾಹಾರ, ನರರ ತಲೆಬುರುಡೆಗಳನ್ನು ಪೋಣಿಸಿ ಮಾಡಿದ ಜಪಸರ, ಒಂಟೆಯ ಮೂಳೆಗಳಿಂದ ಮಾಡಿದ ಕರ್ಣಕುಂಡಲ, ಹಸಿಯಚರ್ಮದ ಧೋತ್ರ, ಆನೆಯ ತಲೆ ಬುರುಡೆಯನ್ನು ತೋಡಿ ಮಾಡಿದ ಜಲಕಮಂಡಲ, ಆನೆಯ ದೊಡ್ಡ ಬೆನ್ನು ಮೂಳೆಯ ಕೈ ದೊಣ್ಣೆಯಿಂದ ಅವನು ರೂಪಿಗೆ ತಕ್ಕಂತೆ ಕ್ರೂರವಾಗಿದ್ದನು.

ಮೇದೋಹೋತೃ ಪುರೋಹಿತನು ಭೀಷಣನ ಸಭೆಗೆ ಬರಲು, ದಾನವೇಂದ್ರ ಸಿಂಹಾಸನದಿಂದೆದ್ದು ಎದುರುಗೊಂಡು ಕೇಳಿದನು:

'ತಾವು ದಯಮಾಡಿಸಿದ ಕಾರಣವೇನು?'

'ಏತಕ್ಕೆ ಇನ್ನೂ ಸುಮ್ಮನಿರುವೆ? ಎಡವಿ ನಿಧಿಯನ್ನು ಕಂಡಂತಾಗಿದೆ. ನಿಮ್ಮ ತಂದೆಯಾದ ಬಕಾಸುರನನ್ನು ಕೊಂದ ಭೀಮನೆಂಬ ಮಾನವನ ತಮ್ಮನಾದ ಅರ್ಜುನ ನಮ್ಮ ಸೀಮೆಗೆ ಈಗ ಬಂದಿದ್ದಾನೆ. ನೀನು ಆತನನ್ನು ಹಿಡಿದುಕೊಂಡು ಬಂದು ಉತ್ತಮವಾದ ನರಮೇಧವನ್ನು ಮಾಡು'.

'ಎಲೈ ಮೇದೋಹೋತೃವೇ, ಹಾಗಾದರೆ ಅರ್ಜುನನನ್ನು ಹೊಡೆದು ಧ್ವಂಸ ಮಾಡುವೆನು. ನೀನು ಹೇಳಿದ ನರಮೇಧಕ್ಕೆ ಅರ್ಜುನನನ್ನು ಸೀಳಿಹಾಕುವೆನು. ನಿನ್ನ ಮಾತಿಗೆ ನಾನು ಹಿಂದೆಗೆಯುವುದಿಲ್ಲ' ಎಂದು ಗರ್ಜಿಸಿದನು. ನರಮೇಧವನ್ನು ನೆನೆದು, 'ಅಯ್ಯಾ ಪೂರ್ವದಲ್ಲಿ ಈ ಮನುಷ್ಯ ಯಜ್ಞವನ್ನು ಕೈಕೊಂಡ ರಾಕ್ಷಸೋತ್ತಮರು ಯಾರು? ಅದಕ್ಕೆ ಋತ್ವಿಜರು ಯಾರು? ಬೇಕಾಗುವ ಪದಾರ್ಥಗಳು ಏನೇನು? ಅದರಿಂದ ಯಾರಿಗೆ ತೃಪ್ತಿಯಾಗುವುದು ತಿಳಿಸು'.

ಪುರೋಹಿತನು ತನ್ನ ಭಯಂಕರವಾದ ಬಾಯನ್ನು ತೆರೆದು ಅಟ್ಟಹಾಸದಿಂದ ಕೇಕೆ ಹಾಕಿ,

'ಎಲೈ ಮರುಳೇ, ಆ ಯಜ್ಞವನ್ನುನಡೆಸಿ ಮೂರುಲೋಕಗಳನ್ನು ಸಂಪೂರ್ಣವಾಗಿ ಜಯಿಸಿದ ರಾವಣನೇ ಅದಕ್ಕೆ ಸಾಕ್ಷಿ' ಎಂದನು. ಆ ಸಭೆಯಲ್ಲಿ ಆಸೀನರಾಗಿದ್ದ ಬ್ರಹ್ಮರಾಕ್ಷಸರನ್ನು ಭೀಷಣನಿಗೆ ಭೀಕರ ನುಡಿಯಲ್ಲಿ ಪರಿಚಯಿಸಿದನು.

'ಇವರಲ್ಲದೆ, ಇನ್ನೂ ಪೂರ್ವಯುಗದ ಹಿರಿಯರಾದ ಮಹಾ ಬ್ರಹ್ಮರಾಕ್ಷಸರಿದ್ದಾರೆ. ಅವರು ಎತ್ತರವಾದ ಆಲದ ಮರಗಳಮೇಲೆ ವಾಸಮಾಡುತ್ತ ಬಹುಸಂಖ್ಯೆಯಲ್ಲಿದ್ದಾರೆ. ಅವರೆಲ್ಲರೂ ನೀನು ಮಾಡುವ ನರಮೇಧಕ್ಕೆ ಋತ್ವಿಜರಾಗುವರು. ನೀನು ಈ ನರಮೇಧಕ್ಕೆ ನನ್ನನ್ನು ಆಚಾರ್ಯನನ್ನಾಗಿ ಗೊತ್ತುಮಾಡಿಕೊಂಡು ಯಜ್ಞವನ್ನು ನಡೆಸು. ರಾಕ್ಷಸರೆಲ್ಲರಿಗೂ ತೃಪ್ತಿಯುಂಟಾಗಿ ನಿನಗೆ ಜಯವು ಲಭಿಸುವುದು'.

'ನರನನ್ನು ಹಿಡಿದುತಂದು ನರಮೇಧಕ್ಕೆ ಬಲಿಕೊಡವೆನು. ಯಜ್ಞಮಂಟಪವನ್ನು ಬೇಗಕಟ್ಟಿಸು' ಎಂದು ದೊರೆ ಭೀಷಣನು ಪುರೋಹಿತನಿಗೆ ಹೇಳಿದನು.

ಅವನ ಅನುಮತಿ ಪಡೆದು ದಾನವೇಂದ್ರನು ರೋಷದಿಂದ ಎದ್ದು ಹೊರಟನು. ಆ ದಾನವನ ಜೊತೆಯಲ್ಲಿ ಮೂರುಕೋಟಿ ರಕ್ಕಸರು ಪ್ರೀತಿಯಿಂದ ಯುದ್ಧೋತ್ಸಾಹದಲ್ಲಿ ನಡೆದರು. ಅದನ್ನು ನೋಡಿದರೆ ಈ ಪ್ರಪಂಚವನ್ನೆಲ್ಲ ಒಂದೇಬಾರಿ ನುಂಗುವೆನೆಂದು ಕಾಲಭೈರವನು ಅನೇಕ ರೂಪವನ್ನು ತಾಳಿರುವನೋ ಎಂಬಂತೆ ಕಾಣುತ್ತಿತ್ತು.

ಯುದ್ಧ ಸನ್ನದ್ಧರಾಗಿ ನಡೆದ ರಾಕ್ಷಸರನ್ನು ಕಂಡ ಭಯಂಕರ ಆಕಾರದ ಮಹಾರಾಕ್ಷಸಿಯರು ತಮ್ಮ ಹೊಟ್ಟೆಯನ್ನು ರಕ್ತಮಾಂಸಗಳಿಂದ ತುಂಬಿಕೊಳ್ಳುವ ತವಕದಿಂದ ತಾವೂ ಹೊರಟುಬಂದರು. ಸಂತೋಷದಿಂದ ಬೆಟ್ಟದತುದಿಗಳಲ್ಲಿ ಹತ್ತಿನಿಂತು–ಸಮುದ್ರಘೋಷವನ್ನು ಮೀರುವಂತೆ ಸದ್ದು ಮಾಡುತ್ತ, ವಿಸ್ತಾರವಾಗಿ ಬರುತ್ತಿರುವ ಪಾರ್ಥನ ಸೈನ್ಯವನ್ನು ನೋಡಿದರು.

ಧನಂಜಯನ ಸುವರ್ಣರಥದ ಧ್ವಜದಲ್ಲಿದ್ದ ಹನುಮಂತನನ್ನು ಕಂಡ ರಾಕ್ಷಸಿಯರು ಭಯಭೀತರಾದರು. ಪೂರ್ವದಲ್ಲಿ ಲಂಕಿಣಿಯನ್ನುಕೊಂದ ಕಪಿ ಇದೆಂದು ಓರ್ವಳು ದೂರಕ್ಕೆಓಡಿದಳು. ಮತ್ತೋರ್ವಳು ಇದು ಊರನ್ನು ಸುಟ್ಟು ಹಾಕುವುದೆಂದು ಹೆದರಿ ತನ್ನ ಮನೆಯಸಾಮಾನುಗಳನ್ನು ರಕ್ಷಿಸಿಕೊಳ್ಳಲು ಓಡಿದಳು. ಮಗದೋರ್ವಳು ಹಾಗೆಯೇ ಆಲೋಚಿಸುತ್ತ ಈ ಕಪಿಯ ಮೈಯ ನೆಳಲನ್ನು ಕಂಡರೆ ಸಹಿಸಲಾಗದು ಎಂದು ಅಲ್ಲಿಂದ ನೆಟ್ಟಗೆ ಓಡಿದಳು.

**ಯೋಜನ ಸ್ತನಿ, ಲಂಬೋದರಿ ರಕ್ಕಸಿಯರು**

ದೊಡ್ಡ ಬೆಟ್ಟಗಳನ್ನು ಹೊತ್ತುತಂದ ಅಸಾಧ್ಯ ಹನುಮಂತ ಇವನು. ಈಗ ಈತನನ್ನುನೋಡಿ ಹೆದರದಿರುವುದು ಹೇಗೆ ಎಂದೊಬ್ಬ ರಾಕ್ಷಸಿಯು ಹೇಳಿದಳು. ಆಗ ಯೋಜನ ಸ್ತನಿ ಎಂಬ ರಕ್ಕಸಿಯ 'ಈ ಕೋತಿಯನ್ನು ಕಂಡು ಹೆದರಬೇಡಿ. ಇದನ್ನು ನನ್ನ ಸ್ತನಾಗ್ರದಿಂದ ಅಪ್ಪಳಿಸಿ, ಅರ್ಜುನನ ಸೇನೆಯನ್ನು ಸದೆಬಡೆಯುವೆ'ಎಂದು ಹೇಳಿದಳು.

ಅದನ್ನು ಕೇಳಿದ ಲಂಬೋದರಿಯೆಂಬ ಮಹಾಭಯಂಕರ, ನಿಶಾಚರಿ ಅಸುರೆಯು 'ನೀವು ಹೆದರಿ ತೊದಲು ಮಾತಾಡಬೇಡಿ' ಎಂದು ರೋಷದಿಂದ 'ಸುಮ್ಮನೆ ನೋಡುತ್ತಿರಿ. ಸುಲಭವಾಗಿ ಎಲ್ಲರನ್ನೂನುಂಗಿ ದೊಡ್ಡಹೊಟ್ಟೆಯಲ್ಲಿ ತುಂಬಿಕೊಳ್ಳುವೆ' ಎಂದಳು.

ಉಳಿದ ರಕ್ಕಸಿಯರೆಲ್ಲರೂ ಪಾರ್ಥನ ಸೇನೆಯನ್ನು ಹೊಡೆದು ನುಂಗಲೆಂದು

ಬಾಯ್ದೆರೆದುಕೊಂಡು ಆರ್ಭಟಿಸುತ್ತ ಬಂದರು. ಕೂಡಲೇ ಲಂಬೋದರಿಯು ನರನಸೈನ್ಯವನ್ನು ಎಳೆದೆಳೆದು ಗಂಟಲಿಗೆ ತುರುಕಿಕೊಳ್ಳುತ್ತಿದ್ದಳು. ಒಡನೆ ಆ ಕ್ಷಣದಲ್ಲಿ ಯೋಜನ ಸ್ತನಿ ಕೋಪಿಸಿಕೊಂಡಳು. ಆಕಾಶಕ್ಕೆ ವ್ಯಾಪಿಸಿ ನೆಗೆಯುತ್ತಿರುವ ನಿಡುಮೊಲೆಗಳನ್ನು ತಿರುತಿರುಗಿಸಿ ಬೀಸುತ್ತ ಸೈನ್ಯವನ್ನು ಬಡಿದಪ್ಪಳಿಸಿದಳು.

ರಾಕ್ಷಸರು ಮಾಯೆಯಿಂದ ಉರಿ, ಹೊಗೆ, ಸಿಡಿಲು, ಮಿಂಚು, ಕತ್ತಲೆ, ಗಾಳಿ, ಮೇಘಗಳ ಗುಂಪು, ಧೂಳನ್ನು ಸೃಷ್ಟಿಸಿ ಪಾರ್ಥನ ಸೇನೆಯನ್ನು ದಿಕ್ಕುಗೆಡಿಸಿದರು. ಅವರು ಸರ್ಪ, ಸಿಂಹ, ಶರಭ, ಆನೆ, ಹಸಿದ ಹುಲಿಗಳಾಗಿ ಗರ್ಜಿಸಿದರು. ಭೂತಗಳಾಗಿ ಬಾಯ್ದೆರೆದು ಆರ್ಭಟಿಸಿದರು. ಅರ್ಜುನನಸೇನೆ ದಿಗ್ಭ್ರಮೆಗೊಂಡಿತು.

ರಣಭಯಂಕರನಾದ ಭೀಷಣನು ಪ್ರಳಯಕಾಲದ ಯಮನಂತೆ ಕೋಪಗೊಂಡು ಅರ್ಜುನನ ಮುಂದೆನಿಂತು 'ನೀನು ನನ್ನತಂದೆಯನ್ನುಕೊಂದ ಭೀಮನ ತಮ್ಮನಲ್ಲವೇ? ನಿನ್ನನ್ನು ಹಿಡಿದುಕೊಂಡು ಹೋಗಿ ನರಮೇಧಕ್ಕೆ ಪಶುವನ್ನಾಗಿಸುವೆನು' ಎಂದು ಹೇಳುತ್ತ ಅವನ ರಥವನ್ನು ಆಕ್ರಮಿಸಿದನು.

ರಕ್ಕಸನನುಡಿ ಕೇಳಿ ನಗುತ್ತ ಅರ್ಜುನನು ರಕ್ಷೋಘ್ನವೆಂಬ ಅಸ್ತ್ರವನ್ನು ಅವನ ಮೇಲೆ ಹೂಡಿದನು. ಅದರ ಹೊಡೆತಕ್ಕೆ ಭೀಷಣನು ನಿತ್ರಾಣನಾದನು. ಬಿರುಗಾಳಿ ಬೀಸಿದರೆ ದಟ್ಟವಾದ ಮೋಡಗಳಗುಂಪು ನಿಲ್ಲದೆ ಹಾರಿಹೋಗುವಹಾಗೆ ಆ ರಾಕ್ಷಸನ ಸೈವ್ಯವು ಕಂಡಕಂಡಕಡೆಗೆ ಚದುರಿಹೋಯಿತು.

ಅರ್ಜುನನ ರಕ್ಷೋಘ್ನ ಬಾಣ ಪ್ರಯೋಗದಿಂದ ರಾಕ್ಷಸರಲ್ಲಿ ಕೆಲವರು ಸತ್ತರು. ಕೆಲವರು ಅಂಗಹೀನರಾದರು. ಕೆಲವರ ದೇಹದಲ್ಲಿ ಬಾಣಗಳು ನಾಟಿಕೊಂಡವು. ಇನ್ನು ಕೆಲವರು ವೇದನೆಯನ್ನುಸಹಿಸಲಾರದೆ ಕಂಠಗಳಲ್ಲಿಯೇ ಪ್ರಾಣವನ್ನು ಹಿಡಿದುಕೊಂಡರು. ಮತ್ತೆ ಕೆಲವರು ಬದುಕಿದರೆಸಾಕೆಂದು ಓಡಿಓಡಿ ಹೋದರು.

ತಮ್ಮ ಸೇನೆಯನ್ನು ಅಟ್ಟಾಡಿಸಿ ಹೊಡೆಯುತ್ತಿರುವ ಯೋಜನ ಸ್ತನಿ. ಬಾಯ್ದೆರೆದು ತುತ್ತಂತೆ ನುಂಗುತ್ತಿರುವ ಲಂಬೋದರಿ ಕ್ರೂರ ರಾಕ್ಷಿಸಿಯರನ್ನು ಕಂಡು ಹನುಮಂತನು ಆಶ್ಚರ್ಯಗೊಂಡನು. ತನ್ನ ಹಿಂದಿನ ಲಂಕಾಪಟ್ಟಣದ ಸಂದರ್ಭವನ್ನು ನೆನೆಸಿಕೊಂಡನು. ನಸುನಗುತ್ತ ಬಾಲದತುದಿಯನ್ನುಚಾಚಿ ಆ ರಕ್ಕಸಿಯರನ್ನೆಲ್ಲ ನೆಲಕ್ಕೆಅಪ್ಪಳಿಸಿ ಕೊಂದುಹಾಕಿದನು.

ಅರ್ಜುನನ ಶರಜಾಲದಿಂದಲೂ, ಹನುಮಂತನ ಬಾಲದ ಹೊಡೆತದಿಂದಲೂ ರಾಕ್ಷಸರ ಗುಂಪು ಪುಡಿಪುಡಿಯಾಗಿ ಬರಿದಾಯಿತು. ಅದನ್ನು ಕಂಡು ಹೆದರಿದ ಭೀಷಣನು ಒಂದುಯುಕ್ತಿಯನ್ನು ಯೋಚಿಸಿ ಅಂತರ್ಧಾನನಾದನು. ಕೂಡಲೆ ತನ್ನ ರಾಕ್ಷಸ ಮಾಯೆಯಿಂದ ಅಲ್ಲಿ ಗಂಗಾನದಿಯ ತೀರವನ್ನು ಸೃಷ್ಟಿಸಿದನು. ತಪೋವನವಿರುವಂತೆ ಕಾಣಿಸಿದನು. ತಾನೇ ಮುನಿವೇಷಧಾರಿಯಾದನು.

ಅರ್ಜುನನ ಕಣ್ಣುಗಳಿಗೆ ಅಲ್ಲಿ ಎಲ್ಲಿನೋಡಿದರೂ ಕಾಣುತ್ತಿದ್ದುದು ಗಂಗಾಪ್ರವಾಹದ ನೀರು. ಪುಣ್ಯಾಶ್ರಮದ ಪರ್ಣಶಾಲೆಗಳು, ಮರಗಿಡಗಳ ತಣ್ಣೆಳಲು. ಪಕ್ಕಿಗಳ ಮನೋಹರ ಇಂಚರ. ಜಿಂಕೆ ಮೊದಲಾದ ಸಾಧು ಪ್ರಾಣಿಗಳ ಗುಂಪು. ಋಷಿಕುಮಾರರ ಸಂಚಾರದಿಂದ ಕೂಡಿದ ಪುಣ್ಯಾಶ್ರಮ.

ಆ ಕೃತಕಆಶ್ರಮದಿಂದ ಓರ್ವಮುನಿಯು ಪ್ರೀತಿಯನ್ನು ಹೊಮ್ಮಿಸುತ್ತ ಬಂದನು.

ಫಲ್ಗುಣನನ್ನು ಕಂಡು ಗೌರವಗಳೊಡನೆ 'ಸ್ವಾಮೀ, ನೀವು ಈ ರಾಕ್ಷಸರನ್ನು ಕೊಂದರೆ ಏನು ಪ್ರಯೋಜನ? ಇತರರನ್ನು ಬಾಧಿಸುವುದು ತಿಳಿದವರಿಗೆ ಯುಕ್ತವಲ್ಲ. ಇದು ಪುಣ್ಯಕ್ಷೇತ್ರ' ಎಂದನು. ಅರ್ಜುನನು ಅದೆಲ್ಲವನ್ನು ನೋಡಿ ಆಶ್ಚರ್ಯಪಟ್ಟನು. ರಾಕ್ಷಸರ ಮೋಸವೆಂದು ತಿಳಿದುಕೊಂಡನು.

ಋಷಿಯಾಗಿರುವ ಭೀಷಣನನ್ನು ಹಿಡಿದುಕೊಂಡನು. ತಕ್ಷಣ ಅವನ ಮಾಯೆ ತಪ್ಪಿಹೋಯಿತು. ಪೂರ್ವದ ರಾಕ್ಷಸನಾಗಿ ಅವನು ನಿಂತನು. ಪಾರ್ಥನು ಎಲ್ಲರನ್ನೂ ಸೆರೆಹಿಡಿದನು. ಅವರ ಮನೆಯಲ್ಲಿದ್ದ ವಿವಿಧ ಆಭರಣ, ಧನಕನಕಗಳನ್ನು, ಅಮೂಲ್ಯ ವಸ್ತುಗಳನ್ನು ತೆಗೆದುಕೊಂಡನು. ಆ ರಾಕ್ಷಸರನ್ನು ದೆಸೆದೆಸೆಗೆ ಓಡಿಸಿಬಿಟ್ಟನು.

ಬಳಿಕ ಕುದುರೆಯು ದಕ್ಷಿಣ ದಿಕ್ಕಿಗೆ ಹೊರಟು ಮಣಿಪುರ ಎಂಬ ಪಟ್ಟಣವನ್ನು ಸೇರಿತು. ಆ ಪಟ್ಟಣವನ್ನು ಅರ್ಜುನನ ಮಗನಾದ ಬಭ್ರುವಾಹನನು ಆಳುತ್ತಿದ್ದನು.

# ಮಣಿಪುರದ ರಾಜ ಬಭ್ರುವಾಹನ

ಭೂಭುಜ ಲಲಾಮ ಜನಮೇಜಯನೇ ಕೇಳು. ಇಂದ್ರಪುತ್ರನಾದ ಅರ್ಜುನನ ಕುದುರೆಯು ಭೀಷಣನ ಸೀಮೆಯನ್ನು ದಾಟಿ ಮುಂದೆಬಂದಿತು. ಆಗ ವರ್ಷಋತುವು ಆರಂಭವಾಯಿತು. ಅದು ಧರೆಯ ಬೇಸಿಗೆಯ ಬೇಸರವನ್ನು ಕಳೆಯಿತು. ಚಾತಕ ಪಕ್ಷಿಗಳು ಮಳೆಯಿಂದ ಸಂತೋಷಪಟ್ಟು ನಲಿಯುತ್ತಿದ್ದವು. ಮುಗಿಲುಗಳು ಎಂಟು ದಿಕ್ಕುಗಳಲ್ಲಿಯೂ ಸಾಲುಸಾಲಾಗಿ ಎದ್ದುನಿಂತಿದ್ದವು. ದಿಗ್ವಧುಗಳು ಇಂದ್ರನನ್ನು ಸೆಣಸಿ ನೋಡುವ ಕಡೆಗಣ್ಣಿನ ನೋಟದಂತೆ ಮಿಂಚುಗಳು ಕಂಡವು. ಮುಂಗಾರಿನ ಮಳೆಯ ಹನಿಗಳ ಕಂಪಿಗೆ ಆನೆಗಳು ಸಂತೋಷಪಟ್ಟವು. ಮುಂಗಾರಿ ಮಳೆಗೆ ಕೃಷಿಕರುನಲಿದರು.

ಮಳೆಯಿಂದ ನದಿಗಳುತುಂಬಿ ಆರ್ಭಟಿಸುವುದು ದೊರೆಗಳ ದಂಡಯಾತ್ರೆಯಂತೆ ಶೋಭಿಸುತ್ತಿತ್ತು. ಜಾಜಿ ಕೊಡಸಿಗೆ ಹೂಗಳ ಕಂಪನ್ನು ಕೇದಗೆಯ ಸುಗಂಧ ಧೂಳನ್ನು ಕೊಂಡೊಯ್ಯುವ ಗಾಳಿ; ಹೊಸತಾಗಿ ನೀರಿನಿಂದಕೂಡಿ ನಡೆಯಲಾಗದ ದಾರಿಗಳಿಂದ ವರ್ಷಋತುವು ಮನೋಹರವಾಗಿತ್ತು.

ಯಜ್ಞಕುದುರೆಯು ಮಣಿಪುರಕ್ಕೆ ಬಂದಿತು.

ಜನಮೇಜಯರಾಯನೇ ಕೇಳು. ಆ ಮಣಿಪುರವು ಕನಕ ರಜತದ ಕೋಟೆ ಕೊತ್ತಲಗಳಿಂದ ಕೂಡಿತ್ತು. ಮಾಣಿಕ್ಯ, ವಜ್ರ, ವೈಡೂರ್ಯ, ಗೋಮೇಧಿಕಗಳಿಂದ ನಿರ್ಮಿಸಿದ ಬುರುಜುಗಳ ಸಾಲನ್ನು ಹೊಂದಿತ್ತು. ಕೆಂಪಾದ ಹವಳದ ತೋರಣವನ್ನು ಕಟ್ಟಿರುವ, ಬಾಸಿಂಗದಂತಿರುವ ಹೂವಿನಕುಚ್ಚುಗಳ, ಕಟ್ಟಾಣಿಮುತ್ತುಗಳ, ಲೋವೆಗಳ ಗೋಪುರದಿಂದ ಕೂಡಿತ್ತು. ಬಿನ್ನಾಣದ ಸುಚಿತ್ರ, ಪತ್ರದ, ಕುಸುಮದ ಕುಸುರಿ ಕೆಲಸಗಳಿಂದ ಪ್ರಕಾಶಿಸುವ ಬಾಗಿಲುಗಳಿಂದ ಕೂಡಿತ್ತು. ಅದು ಅರ್ಜುನನ ಕಣ್ಣಿಗೆ ರಮ್ಯವಾಗಿ ಕಾಣಿಸಿತು.

ಮಣಿಪುರನಗರವು ಸುಂದರನಾರಿಯಂತೆ ಶೋಭಿಸುತ್ತಿತ್ತು. ಮೇರು ಪರ್ವತವನ್ನು ಜರೆಯುವ ಅದರ ಕಾಂಚನಗೋಪುರವೇ ಸ್ತನ, ರಾಜಮಾರ್ಗವೇ ಬಾಹುಲತೆ, ಅರಮನೆಯೇ ಮುಖಕಮಲ. ಚಿತ್ರಗಳುಳ್ಳ ಪತಾಕೆಗಳೇ ಅಲ್ಲಾಡುವ ಮುಂಗುರುಳುಗಳು. ತೋರಣವೇ ಮಣಿಹಾರ. ಕೋಟೆಯ ಸುತ್ತೇ ಪ್ರಕಾಶಮಾನವಾದ ಸೀರೆ. ಕಂದರವೇ ನಡುವಿನ ಪಟ್ಟಿ. ಮನೆಗಳಿಗೆ ಬಳಿದ ಸುಣ್ಣದಕಾಂತಿಯೇ ನಗು ಎಂಬಂತಿತ್ತು.

ಕೋಟೆಯ ಕಾವಲಿಗೆ ಅನೇಕ ಭಟರಿದ್ದರು. ಬಾಗಿಲುಗಳ ರಕ್ಷಣೆಗೆ ಆಯುಧ ಪಾಣಿಗಳಾದ ಬಹುಮಂದಿಗಳಿದ್ದರು. ಸೇನಾಸನ್ನಾಹಕ್ಕೆ ಬೇಕಾದ ಸಾಮಗ್ರಿಗಳನ್ನು ತುಂಬಿಕೊಂಡು ಆ ದುರ್ಗ ಭೀಕರವಾಗಿತ್ತು. ಅದಕ್ಕೆ ಅಭಿಮಾನ ದೇವತೆಯೆಂಬಂತೆ ಆ ಪಟ್ಟಣದ ದೊರೆಯಿದ್ದನು. ಎಂಟುದಿಕ್ಕುಗಳಲ್ಲಿಯೂ ಡೆಂಕಣಿಯ ಮೇಲೆ ಧ್ವಜಗಳಿದ್ದವು. ಅವು ಈ ಭೂಮಂಡಲಕ್ಕೆಲ್ಲ ಸರ್ವಶ್ರೇಷ್ಠನಾದವನು ನಮ್ಮ ದೊರೆ ಎನ್ನುವಂತೆ ಸ್ನೇಹಪೂರ್ವಕವಾಗಿ ಬೆರಳೆತ್ತಿ ತೋರಿಸುವಂತಿದ್ದವು. ರಾಜನ ದರ್ಶನಕ್ಕಾಗಿ ಬಂದು ಹೋಗುವ ಸಾಮಂತರಾಜರ ಸಡಗರದಿಂದ ಆ ಪಟ್ಟಣವು ವೈಭವಯುತವಾಗಿತ್ತು.

ಕುದುರೆಯನ್ನು ಹಿಂಬಾಲಿಸಿಬಂದ ಸೇನೆಯು ಆ ಪಟ್ಟಣದ ಉದ್ಯಾನದ ಬಳಿಯಲ್ಲಿ ಬೀಡುಬಿಟ್ಟಿತು. ಅರ್ಜುನನು ಆ ನಗರವನ್ನು ನೋಡಿ ಆನಂದಗೊಂಡು,

'ಈ ಪಟ್ಟಣವು ವಿಶಿಷ್ಟ ವೈಖರಿಯಿಂದ ಕಂಗೊಳಿಸುತ್ತಿದೆ. ಇದನ್ನು ಪ್ರೀತಿಯಿಂದ ಪಾಲಿಸುವ ದೊರೆ ಯಾರು? ಅವನು ಕುದುರೆಯನ್ನು ಕಟ್ಟಬಲ್ಲನೇ?'

'ಎಲೈ ಪಾರ್ಥನೇ, ನಿನಗೆ ಗೊತ್ತಿಲ್ಲವೇ? ಇದು ಮಣಿಪುರ. ಇದನ್ನು ಪ್ರಖ್ಯಾತನಾದ ಬಭ್ರುವಾಹನನೆಂಬ ದೊರೆ ಆಳುತ್ತಿದ್ದಾನೆ. ರಾಜರುಗಳಲ್ಲೆಲ್ಲ ಇವನೇ ಶ್ರೇಷ್ಠನು. ನಾವೆಲ್ಲರೂ ಇವನ ರಾಜಾದಾಯಕ್ಕಾಗಿ ಪ್ರತಿದಿನವೂ ಒಂದುಸಾವಿರಬಂಡಿ ಕನಕವನ್ನು ಕಾಣಿಕೆಯಾಗಿ ತಂದೊಪ್ಪಿಸುತ್ತಿದ್ದೇವೆ' ಎಂದು ಹೇಳುತ್ತ ಹಂಸಧ್ವಜನು 'ಈತನಿಗೆ ಸುಬುದ್ಧಿ ಎಂಬುವವನು ಮಂತ್ರಿಯಾಗಿರುವನು. ಆತನು ಅತಿಶಯ ಧರ್ಮದಿಂದ, ಎಳ್ಳಷ್ಟು ತಪ್ಪಿಲ್ಲದೆ ಎಚ್ಚರದಿಂದಿರುವವನಾಗಿದ್ದಾನೆ. ನ್ಯಾಯಮಾರ್ಗವನ್ನು ಉಲ್ಲಂಘಿಸುವುದಿಲ್ಲ. ಭೂಪಾಲವೃಂದದೊಳಗೆ ಬಭ್ರುವಾಹನನಿಗೆ ಸಮನಾದವರು ಯಾರೂ ಇಲ್ಲ. ಪರಾಕ್ರಮಿಯೂ, ಮಹಾಶೂರನು ಆದ ಈತ ಕುದುರೆಯನ್ನು ಕಟ್ಟದೆ ಬಿಡುವನೇ? ಹೇಳು?'

'ಹಂಸಧ್ವಜನೆ, ಆ ಪುರದಜನರ ಗುಣಲಕ್ಷಣಗಳನ್ನು ತಿಳಿಸು.'

'ಈ ಪುರದಲ್ಲಿರುವ ಮನುಷ್ಯರೆಲ್ಲರೂ ಸದಾ ಶ್ರೀಪತಿಯ ಭಜನೆಯಲ್ಲದೆ ಬೇರೊಂದು ತಿಳಿಯರು. ಇವರು ದಯಾಪರರು, ಧಾರ್ಮಿಕರು. ಆತ್ಮಸ್ವರೂಪಜ್ಞರು, ಅತಿಬಲರು.

'ಈ ಪುರದ ಸ್ತ್ರೀಯರು ಮುಕ್ತಿಆಕಾಂಕ್ಷಿಗಳಾಗಿ ಯೋಗಿಗಳಂತೆ ಉಪವಾಸ ವ್ರತಧಾರಿಗಳಾಗಿ, ಮುತ್ತಿನಹಾರಧರಿಸಿ ಪೂಜ್ಯರಾಗಿದ್ದಾರೆ. ಪತಿವ್ರತಾಶೀಲರಾಗಿದ್ದಾರೆ.

'ಇದು ಪರಮಪಾವನ ಸ್ಥಳ ಎಂದು ತಿಳಿದ ರಮಾವಲ್ಲಭನು ಈ ಪುರವನ್ನು ಎರಡನೆಯ ವೈಕುಂಠ ಎಂದು ಭಾವಿಸಿ ಇಲ್ಲಿಯೇ ನೆಲೆಸಿದ್ದಾನೆ. ಕುದುರೆಯು ನಿಲ್ಲದೆ ಬಂದು ಇಂತಹಸ್ಥಳಕ್ಕೆ ಸೇರಿದೆ. ಇದನ್ನು ಬಿಡಿಸಬಲ್ಲ ಸಮರ್ಥರು ಯಾರೋ? ಮುರಾಂತಕನ ಕೃಪೆ ಹೇಗಿರುವುದೋ? ನಾನು ತಿಳಿಯೆನು.'

ಭೂಲೋಲ ಜನಮೇಜಯನೇ ಕೇಳು, ಹಂಸಧ್ವಜನ ಮಾತನ್ನು ಕೇಳುತ್ತಿರುವಾಗ, ಒಂದು ಹದ್ದುಬಂದು ಪಾರ್ಥನ ಕಿರೀಟದ ತುದಿಯಲ್ಲಿ ಕುಳಿತುಕೊಂಡಿತು. ಅದನ್ನು ನೋಡಿದ ನೀಲಧ್ವಜನೇ ವೊದಲಾದ ರಾಜರು, 'ಇದು ಮುಂದೆ ಅರ್ಜುನನಿಗೆ ಉಂಟಾಗುವ ಸೋಲಿನ ಅಪಶಕುನವಾಗಿದೆ. ಶಿವ ಶಿವಾ. ಕಾಲಗತಿ ಹೇಗಿರುವುದೋ ಏನೋ!' ಎಂದು ಭಯಗೊಂಡು ತಂತಮ್ಮಲ್ಲಿ ಚಿಂತಿಸುತ್ತಿದ್ದರು.

* * *

ಬಭ್ರುವಾಹನನು ಶ್ರೇಷ್ಠವಾದ ಕುದುರೆಯು ತನ್ನ ಪಟ್ಟಣಕ್ಕೆ ಬಂದಿರುವುದನ್ನು ತಿಳಿದನು. ಅದರ ಜೊತೆಗೆ ಆಗಮಿಸಿರುವ ದೊರೆಗಳ ವೃತ್ತಾಂತವನ್ನೂ ಕೇಳಿಕೊಂಡನು. ಭಟರನ್ನು ಕಳುಹಿಸಿ ಆ ತುರಗವನ್ನು ತರಿಸಿದನು. ಅದರ ಹಣೆಗೆ ಕಟ್ಟಿದ್ದ ಪಟ್ಟಿಯ ಬರವಣಿಗೆಯನ್ನು ಓದಿಕೊಂಡನು. ಕುದುರೆಯನ್ನು ಕಟ್ಟಿಹಾಕಿದನು.

ಅರಸ ಜನಮೇಜಯರಾಯನೇ ಕೇಳು. ಅಷ್ಟರಲ್ಲಿ ಸೂರ್ಯನು ಮುಳುಗುವ ಕಾಲವಾಯಿತು. ದುಂಬಿಗಳು ಕಮಲದಲ್ಲಿಸೆರೆಯಾದವು. ಬಿಸಿಲಬೀಡು ಇರದೆ ಸರಿದು ಹೋಯಿತು. ರಾತ್ರಿಯೆಂಬ ಹೆಂಗಸು, ಹೊಳೆಯುವ ಸೂರ್ಯನೆಂಬ ಆಭರಣವನ್ನು ತೆಗೆದು ಹಾಕಿದಳು. ಆಕಾಶದಲ್ಲಿ ಕೆಂಪಿಡಿದ ತಾರೆಗಳು ಪ್ರಕಾಶಿಸಿದವು. ಬಭ್ರುವಾಹನನು ಹತ್ತುಸಾವಿರ ಕಂಬಗಳಿಂದ ರಚಿಸಿರುವ ಆಸ್ಥಾನಮಂಟಪಕ್ಕೆ ಬಂದನು. ಅಂದಿನ ರಾತ್ರಿ ಅತಿಸಂಭ್ರಮದಲ್ಲಿ ಓಲಗವನ್ನು ನಡೆಸಿದನು.

ಆ ಸಭಾಮಂಟಪದ ತೊಟ್ಟಿಯ ಪ್ರದೇಶವು ಸ್ಫಟಿಕಶಿಲೆಯ ನೆಲಗಟ್ಟು, ಪಚ್ಚೆಗಳ ಜಗುಲಿ, ಹೊಳೆಯುವ ಇಂದ್ರನೀಲಮಣಿಗಳ ಗೋಡೆ, ವಜ್ರದಕಂಭ, ಪುಷ್ಯರಾಗದ ತೊಲೆಗಳಿಂದ ಕೂಡಿತ್ತು. ಮಾಣಿಕ್ಯದಲೋವೆ, ಮುತ್ತುಗಳಕುಚ್ಚುಗಳು. ಹೊಳೆಯುವ ಹವಳದಕೀಲುಬೊಂಬೆಗಳು, ಚಿನ್ನದ ಹೊದಿಕೆಯ ಮೇಲ್ಛಾವಣಿಯಿಂದ ಪ್ರಕಾಶಿಸುತ್ತಿದ್ದಿತು.

ಅಲ್ಲಿದ್ದ ಸೂತ್ರದಬೊಂಬೆಗಳು ಹೂವನ್ನು ಮುಡಿದುಕೊಳ್ಳುತ್ತಿದ್ದುವು. ತಿಲಕವನ್ನಿಟ್ಟುಕೊಂಡು ಮುಖವನ್ನು ಸರಿಮಾಡಿಕೊಳ್ಳುತ್ತಿದ್ದುವು. ಕಾಡಿಗೆಹಚ್ಚಿಕೊಂಡು ಕನ್ನಡಿಯನ್ನು ನೋಡುತ್ತಿದ್ದುವು. ಸಂಗೀತವನ್ನು ಹಾಡುತ್ತಿದ್ದುವು. ನರ್ತನದ ಮೂವತ್ತಾರು ವಿವಿಧ ನೇತ್ರಾಭಿನಯವನ್ನು, ಅರವತ್ನಾಲ್ಕು ವಿವಿಧ ಹಸ್ತಾಭಿನಯಗಳನ್ನು ತೋರ್ಪಡಿಸುತ್ತಿದ್ದುವು. ವೀಣೆ ಮತ್ತು ಇತರ ವಾದ್ಯಗಳನ್ನು ನುಡಿಸುವ ಹಲವು ಕಲೆಗಳನ್ನು ಪ್ರದರ್ಶಿಸುತ್ತಿದ್ದವು. ಸಜೀವವೆಂದು ತೋರುವ ಆ ಪುತ್ತಳಿಗಳ ಅವಯವಗಳಲ್ಲಿ ಧರಿಸಿರುವ ನವರತ್ನಖಚಿತವಾದ ಆಭರಣಗಳಕಾಂತಿಯು ಆ ಮಂಟಪವನ್ನೆಲ್ಲಾ ವ್ಯಾಪಿಸಿತ್ತು.

ಆ ಓಲಗ ಶಾಲೆಯಲ್ಲಿದ್ದ ಸೂತ್ರಚಾಲಿತ ವಿವಿಧ ಪಕ್ಷಿಗಳು ಸಜೀವವಾಗಿರುವಂತೆ ತೋರುತ್ತಿದ್ದುವು.

ಇಂದ್ರನೀಲ ಮಣಿಗಳ ಕತ್ತಲೆ, ಮುತ್ತುಗಳ ಕಾಂತಿಯ ಶುಭ್ರವಾದ ಬೆಳದಿಂಗಳು. ಮಾಣಿಕ್ಯದಕಾಂತಿಯ ಎಳಬಿಸಿಲು. ಹವಳದಕಾಂತಿಯ ಸಂಜೆಗೆಂಪು ಆ ಸಭಾಮಂಟಪದಲ್ಲಿ ಯಾವಾಗಲೂ ಶೋಭಾಯಮಾನವಾಗಿರುತ್ತಿತ್ತು. ಹಗಲು ರಾತ್ರಿಗಳಿರುವವೆಂಬ ಕಾಲದ ವ್ಯತ್ಯಾಸವನ್ನು ಗೋಚರಿಸದಂತೆ ಆ ಸಭೆ ಬೆಳಗುತ್ತಿತ್ತು. ಅದು ಇಂದ್ರನ ಓಲಗಮಂಟಪದ ಎಂಟರಷ್ಟು ವೈಭವವನ್ನು ಹೊಂದಿದ್ದು ಆಶ್ಚರ್ಯಚಕಿತವಾಗಿ ಕಾಣುತ್ತಿತ್ತು.

ಆ ಸಭಾಮಂಟಪದ ನೆಲವನ್ನು ಕಸ್ತೂರಿ ಪುಣುಗುಗಳಿಂದ ಸಾರಿಸಿದ್ದರು. ಕರ್ಪೂರತೈಲದ ಕೈದೀವಿಗೆಗಳಿಂದ, ರತ್ನದೀಪಗಳಿಂದ ಬೆಳಕು ಮಾಡಿದ್ದರು. ಸಕಲವೈಭವಗಳ ಆ ಓಲಗ ಮಂದಿರಕ್ಕೆ ಬಭ್ರುವಾಹನನು ದೊರೆಗಳ ಗುಂಪಿನೊಡನೆ ಬಂದು ಸಭೆಯಲ್ಲಿ ಕುಳಿತುಕೊಂಡನು. ಸುಬುದ್ಧಿಯೇ ಮೊದಲಾದ ಮಂತ್ರಿಶ್ರೇಷ್ಠರನ್ನು ನೋಡಿ ಆದೇಶಿಸಿದನು:

'ಅನ್ಯದೇಶದಿಂದ ಬಂದಿರುವ ರಾಜರ ಯಜ್ಞಾಶ್ವವನ್ನು ನಾವು ಹಿಡಿದು ಕಟ್ಟಿದ್ದೇವೆ. ಅವರು ನಾಳೆಯೇ ಯುದ್ಧಕ್ಕೆ ಬರುತ್ತಾರೆ. ನಾವು ಹಿಂದೆಬೀಳಬಾರದು. ಪದಾತಿಸೇನೆಯು ಕದನಕ್ಕೆ ಸಿದ್ಧವಾಗಿರಲಿ.'

ಅಂತಃಪುರದಲ್ಲಿದ್ದ ಬಭ್ರುವಾಹನನ ತಾಯಿ ಚಿತ್ರಾಂಗದೆಯು ಯಾವಾಗಲೂ ಅರ್ಜುನನ ಸುಗುಣವನ್ನು ಸ್ಮರಿಸಿಕೊಳ್ಳುತ್ತ, ವಿಯೋಗದಿಂದ ವ್ಯಥೆ ಪಡುತ್ತಿದ್ದಳು. ತಕ್ಷಣ ಓಲಗ ಶಾಲೆಗೆ ಬಂದಳು. ಬಭ್ರುವಾಹನನು ಎದ್ದುನಿಂತನು. ಅವನನ್ನು ತಬ್ಬಿಕೊಂಡು,

'ಮಗನೇ, ಕುಂತೀಸುತ ಅರ್ಜುನನ ಕುದುರೆಯನ್ನು ಹಿಡಿದುಕಟ್ಟಿ ಒಳ್ಳೆಯ ಕೆಲಸ ಮಾಡಿದೆ' ಎಂದು ಹೇಳುತ್ತ ಆ ತಾಯಿಯು 'ಈ ಕ್ಷುದ್ರಬುದ್ಧಿಯನ್ನು ನೀನೆಲ್ಲಿ ಕಲಿತೆ? ಪಿತೃದ್ರೋಹಕ್ಕೆ ನಿನ್ನ ಮನಸ್ಸು ಹೇಗೆಒಪ್ಪಿತು? ಆತನ ಹೊಟ್ಟೆಯಲ್ಲಿ ಹುಟ್ಟಿದರೂ ಆತನಬರುವಿಕೆ ನಿನಗೆ ಬೇಡವಾಯಿತೆ? ದುಡುಕಿ ಕುದುರೆಯನ್ನು ಹಿಡಿದು ಕಟ್ಟಿರುವೆಯಲ್ಲವೇ? ಸಮುದ್ರವನ್ನು ಕಡೆದಾಗ ವಿಷ ಉದಯಿಸಿದಂತೆ ನೀನು ನನ್ನ ಹೊಟ್ಟೆಯಲ್ಲಿ ಹುಟ್ಟಿರುವೆ.'

ತಾಯಿಯ ನುಡಿ ಕೇಳಿ ಬಭ್ರುವಾಹನನು ಗಡಗಡನೆ ನಡುಗಿಹೋದನು. ಭಯದಿಂದ ಕಾಲಿಗೆ ನಮಸ್ಕರಿಸಿ.

'ಕ್ಷತ್ರಿಯರ ಪಂಥದಿಂದ ನಾನು ಆತನ ತುರಗವನ್ನು ಕಟ್ಟಿದೆ. ನಿಮ್ಮ ಮನಸ್ಸಿಗೆ ಒಪ್ಪದ ಮೇಲೆ ಅದು ನನಗೆ ನೀತಿಯಲ್ಲ' ಎಂದು ಮಾತು ಮುಂದುವರಿಸಿದನು. 'ನಿಮಗೆ ಇಷ್ಟವೇನೆಂಬುದನ್ನು ಅಪ್ಪಣೆ ಕೊಡಿಸಿದರೆ, ಅದರಂತೆ ನಡೆದುಕೊಳ್ಳುತ್ತೇನೆ. ನೀವು ಅದಕ್ಕಾಗಿ ತೊಂದರೆ ಪಟ್ಟುಕೊಳ್ಳಬೇಡಿ.'

'ಮಗನೇ ಕೇಳು. ನಾನು ಅರ್ಜುನನ ಅಗಲಿಕೆಯ ದುಃಖದಲ್ಲಿದ್ದೇನೆ. ಪುಣ್ಯವಶದಿಂದ ಇಂದು ಆತ ಇಲ್ಲಿಗೆ ಬಂದಿದ್ದಾನೆ. ನೀನು ಈ ದಿನ ನಿನ್ನ ತಂದೆಯನ್ನು ಕಂಡು, ನಿನ್ನ ಸರ್ವಸ್ವವನ್ನೂ ಆತನ ಪಾದಕ್ಕೆ ಸಮರ್ಪಿಸಿದರೆ, ನನ್ನ ತಪೋನಿಷ್ಠೆ ಸಫಲವಾದಂತೆ. ನಮ್ಮ ದೇಹ, ಧನ, ಪ್ರಾಣಗಳು ಅವರವಾಗಿರುವುದರಿಂದ, ಯುಧಿಷ್ಠಿರ ನೃಪನ ವೈರಿಗಳ ಮೇಲೆ ನಿನ್ನ ಶೌರ್ಯವನ್ನು ತೋರಿಸು.'

ಬಭ್ರುವಾಹನನು ತಾಯಿಯನ್ನು ಸಮಾಧಾನಪಡಿಸಿ ಆದರದಿಂದ ಮನೆಗೆ ಕಳುಹಿಸಿದನು. ಪಾರ್ಥನು ಬರುವಹರ್ಷಕ್ಕೆ ಆಕೆ ಉಬ್ಬಿಹೋದಳು.

ಅನಂತರ ಮಂತ್ರಿಯಾದ ಸುಬುದ್ಧಿಯ ಸಲಹೆ ಕೇಳಿದನು.

'ಸುಬುದ್ಧಿಯೇ, ನಾನು ಈಗ ಹೋಗಿ ತಂದೆಯನ್ನು ಕಾಣುವುದು ಯುಕ್ತವೋ, ಅಯುಕ್ತವೋ ಆಲೋಚಿಸಿ ತಿಳಿಸು.'

'ದೊರೆಯೆ ನಿಮಗೆ ಈ ಬಗ್ಗೆ ಇನ್ನು ಚಿಂತೆ ಬೇಡ. ನಿಮ್ಮ ತಂದೆಯು ಉತ್ತಮಾಶ್ವದ ರಕ್ಷಣೆಗೆ ಬಂದಿರುವುದನ್ನು ನಾವು ಮೊದಲೇ ತಿಳಿಯದೆ ಹೋದೆವು. ಇನ್ನು ಈ ಕುದುರೆಯನ್ನು ಕಟ್ಟುವುದು ನೀತಿಪಥವಲ್ಲ.'

ಅದಕ್ಕೆ ಒಪ್ಪಿದ ಬಭ್ರುವಾಹನನು ಅಂದಿನರಾತ್ರಿ ಪಾರ್ಥನ ಕಾಣಿಕೆಗಾಗಿ ಬೇಕಾದ ಪದಾರ್ಥಗಳನ್ನು ತಾನೇಜೋಡಿಸಿಟ್ಟನು.

**ತಲೆ ಹೋಗುವುದಕ್ಕೆ ಕಾಲು ಹೊಣೆ**

ಸೇನಾಧಿಪತಿಯಾದ ಪ್ರದ್ಯುಮ್ನನ ಅಪ್ಪಣೆಯ ಪ್ರಕಾರ ಅನುಸಾಲ್ವ, ಯಾದವರು, ವೃಷಕೇತು, ಯೌವನಾಶ್ವ, ಹಂಸಧ್ವಜ, ನೀಲಧ್ವಜರ ಸೈನ್ಯವೆಲ್ಲವು ಸಿದ್ಧವಾಯಿತು. ರಣಘೋಷದೊಡನೆ ಯುದ್ಧಕ್ಕೆ ಹೊರಟಿತು. ಪಾರ್ಥನು ದೊರೆಗಳೊಡನೆ ಬಂದು ಮುಂಭಾಗದಲ್ಲಿ ನಿಂತನು.

ಬಭ್ರುವಾಹನನು ಸುಬುದ್ಧಿಯೇ ಮೊದಲಾದ ಮಂತ್ರಿಗಳೊಡನೆ, ರಾಜಯೋಗ್ಯವಾದ ಅಮೂಲ್ಯವಸ್ತುಗಳನ್ನು ತೆಗೆದುಕೊಂಡು ಕುದುರೆಯ ಸಮೇತ ಪಾರ್ಥನ ಸಂದರ್ಶನಕ್ಕೆ ಬಂದನು. ಅವನೊಡನೆ ಪ್ರಕಾಶಮಾನವಾದ ಕಲಶಕನ್ನಡಿಗಳನ್ನು ತೆಗೆದುಕೊಂಡು ವಿಲಾಸಿನಿಯರು, ಪುರಜನರು, ಬ್ರಾಹ್ಮಣರು ಸಡಗರದಿಂದ ಕೂಡಿಕೊಂಡಿದ್ದರು. ಬಭ್ರುವಾಹನನು ಉತ್ಸಾಹದಲ್ಲಿ ನಿಂದಲ್ಲಿ ನಿಲ್ಲದೆ, ಅರ್ಜುನನು ಎಲ್ಲಿರುವನೋ ಅಲ್ಲಿಗೆ ಸಂಭ್ರಮದಿಂದ ಬಂದನು. ಪಾರ್ಥನನ್ನು ಕಂಡು ಮೈಯುಬ್ಬಿ ತಲೆದೂಗುತ್ತ, ಅವನ ಪಾದದಮೇಲೆ ಅನರ್ಘ್ಯರತ್ನಗಳನ್ನು ಸುರಿದನು. ಭಯಭಕ್ತಿಗಳಿಂದ ಸಾಷ್ಟಾಂಗ ನಮಸ್ಕಾರ ಮಾಡಿದನು.

ಅರಸ ಜನಮೇಜಯನೇ ಕೇಳು. ಆಶ್ಚರ್ಯಚಕಿತನಾದ ಪಾರ್ಥನು ಪ್ರಶ್ನಿಸಿದನು.

'ಎಲೈ ದೊರೆಯೆ ನೀನು ಯಾರು?'

'ತಂದೆಯೇ ಕೇಳು, ನಾನು ನಿನ್ನಮಗನು. ನನ್ನತಾಯಿ ಚಿತ್ರಾಂಗದೆ. ಸಾಕಿದತಾಯಿ ಉಲೂಪಿ, ನೀನು ಈ ಪ್ರಾಂತಕ್ಕೆ ತೀರ್ಥಯಾತ್ರೆಗೆ ಬಂದಿದ್ದಾಗ ಈ ರಾಣಿಯರಿಬ್ಬರು

ನಿನ್ನನ್ನು ಸಂಪ್ರೀತಿಯಿಂದ ಉಪಚರಿಸಿದ್ದರು. ಆಗ ನಾನು ಹುಟ್ಟಿದೆನು. ನನ್ನಹೆಸರು ಬಭ್ರುವಾಹನ. ನಿನ್ನದೆಂದು ತಿಳಿಯದೆ ಕುದುರೆಯನ್ನು ಕಟ್ಟಿಹಾಕಿದೆನು. ಈ ವಿನಯ ಹೀನತೆಯನ್ನು ಕ್ಷಮಿಸು.'

ಭಯ ಭರಿತನಾಗಿ ಭಕ್ತಿಯಿಂದ ಮತ್ತೆಮತ್ತೆ ಕಾಲಿಗೆರಗಿ ಪ್ರಾರ್ಥಿಸಿಕೊಳ್ಳುತ್ತಿದ್ದ ಬಭ್ರುವಾಹನನ ಮುಖವನ್ನು ನೋಡಿ ಮಾತನಾಡಿಸದೆ ಸುಮ್ಮನಿದ್ದು, ಕೋಪದಿಂದ ಪಾರ್ಥನು ನಡುಗುತ್ತಿದ್ದನು. ಅವನ ಆ ಬಿಗುವನ್ನು ಕಂಡು ಹಂಸಧ್ವಜ, ನೀಲಧ್ವಜ, ಮೊದಲಾದವರು ವಿಸ್ಮಿತರಾದರು. ಕರುಣರಸದಿಂದ ಕೂಡಿದವರಾಗಿ ಏನು ಹೇಳುವುದೆಂದು ತೋಚದೆ ಚಿಂತಿಸುತ್ತ ಸುಮ್ಮನಾದರು. ಎಲೈ ಜನಮೇಜಯರಾಜನೇ, ಮುಂದೆ ಬಂದೊದಗುವ ವಿಪತ್ತಿನ ಸೂಚನೆಯನ್ನು ಏನೆಂದು ಹೇಳಲಿ....?

ಪ್ರದ್ಯುಮ್ನ, ಹಂಸಧ್ವಜ ಮೊದಲಾದವರು 'ಎಲೆ ಪಾರ್ಥ, ನೀನು ಮಾಡುತ್ತಿರುವುದೇನು? ನಿನ್ನ ಮಗನಾದ ಈ ಬಭ್ರುವಾಹನನು ಪರಾಕ್ರಮಿ. ಮಹಾ ವೈಭವಶಾಲಿ, ಅಭಿಮಾನಿ. ನಿನ್ನ ಹೋಲಿಕೆಯ ರೂಪ ಇವನಲ್ಲಿದೆ. ಈತ ನಿನಗೆ ಶರಣಾಗತನಾಗಿ ವಿನಯದಿಂದ ಬೇಡಿಕೊಳ್ಳುತ್ತಿದ್ದಾನೆ. ಇವನನ್ನು ಕ್ಷಮಿಸಿ ಸ್ವೀಕರಿಸದೆ ಏಕೆ ಸಮ್ಮನಿರುವೆ' ಎಂದು ಅರ್ಜುನನನ್ನು ಕೇಳಿದರು.

ಜನಮೇಜಯನೇ ಕೇಳು, ಹಂಸಧ್ವಜಾದಿಗಳು ಈ ರೀತಿ ಕೇಳಲು ಅರ್ಜುನನು ಕೋಪದಿಂದ ಬಭ್ರುವಾಹನನನ್ನು ದಿಟ್ಟಿಸಿ ನೋಡಿದನು. 'ತಲೆ ಹೋಗುವುದಕ್ಕೆ ತನ್ನ ಕಾಲು ಹೊಣೆ' ಎಂಬ ನಾಣ್ಣುಡಿ ತಪ್ಪದಂತಾಯಿತು ಎನ್ನುವ ಹಾಗೆ– ತನ್ನ ಪುತ್ರ ಬಭ್ರುವಾಹನನನ್ನು ಕಾಲಿನಿಂದ ಒದೆದು,

'ನೀನು ಹೇಡಿ, ನನಗೆ ಹುಟ್ಟಿದವನು ಈ ರೀತಿ ಹೆದರುತ್ತಾನೆಯೇ? ಮೊದಲು ಕುದುರೆಯನ್ನು ಕಟ್ಟಿ, ಬಳಿಕ ಯುದ್ಧಮಾಡದೆ ಬಿಡುತ್ತಾನೆಯೇ?' ಎಂದು ಮೂದಲಿಸಿ 'ನೀನು ಚಿತ್ರಾಂಗದೆಯಲ್ಲಿ ಯಾವನೋ ಒಬ್ಬ ವೈಶ್ಯನಿಂದ ಹುಟ್ಟಿದವನಿರಬೇಕು. ಹಾಗಲ್ಲದೆ ನನಗೆ ಹುಟ್ಟಿದ್ದರೆ ನೀನು ಕ್ಷತ್ರಿಯ ಧರ್ಮವನ್ನು ಬಿಡುತ್ತಿರಲಿಲ್ಲ. ನನ್ನಿಂದ ಸುಭದ್ರೆಯಲ್ಲಿ ಹುಟ್ಟಿದ ಅಭಿಮನ್ಯು ಒಬ್ಬನೇ ನನ್ನ ಮಗ. ಸಿಂಹದ ಹೊಟ್ಟೆಯಲ್ಲಿ ನರಿ ಹುಟ್ಟುವುದೇ? ದೈನ್ಯದಿಂದ ಬೇಡುವ ನೀನು ನನ್ನ ಹೊಟ್ಟೆಯಲ್ಲಿ ಹುಟ್ಟಿದವನೇ?

'ನಿನ್ನ ಮಾತೆ ಚಿತ್ರಾಂಗದೆಯೆ? ಅಹಹ ನಾಟ್ಯ ಸ್ತ್ರೀಯಲ್ಲವೇ?ಗಂಧರ್ವ ನಾಯಕನ ಮಗಳಲ್ಲವೇ? ನಿನಗೆ ಭೂಮಿಪರ ವೇಷವನ್ನು ಹಾಕಿ ನಟಿಸುವುದು ಸರಿಯೇ? ಇದು ನಿನಗೆ ವಿಹಿತವಲ್ಲ. ಈಗ ದೊರೆಗಳೆದುರಿಗೆ ಕುದುರೆಯನ್ನು ಹಿಡಿದು ಕಟ್ಟಿದ ನಟನೆಯು ಹೆಚ್ಚಿನಪೌರುಷವನ್ನು ಮೆರೆಸಿದಂತಾಯಿತು ಹೋಗು?,' ಎಂದು ಕುಹಕನುಡಿಗಳಿಂದ ಬೈದು, ಅವಮಾನಪಡಿಸಿ ಜರೆದನು.

ಅವನ ರೀತಿಯನ್ನು ತನ್ನ ಮಂತ್ರಿ ಸುಬುದ್ಧಿಗೆ ತೋರಿಸಿದ ಬಭ್ರುವಾಹನನು ಕೋಪಿಸಿ ಎದ್ದು ನಿಂತು,

'ನನ್ನ ತಾಯಿಯನ್ನು ನಿಂದಿಸಿ, ನನ್ನನ್ನು ಅಸಹ್ಯನುಡಿಯಿಂದ ಹೀಯಾಳಿಸಿರುವೆಯಲ್ಲವೇ? ನಾನು, ನಿನ್ನ ತಲೆಯನ್ನು ನೆಲಕ್ಕೆಕೆಡುಹದೆ ಹೋದರೆ, ನೀನು ಆಡಿದ ಮಾತೆಲ್ಲವೂ ನಿಜವೇ. ಇದನ್ನು ಮರೆಯ ಬೇಡ' ಎಂದು ಹೇಳಿ ಕುದುರೆಸಹಿತ ಹಿಂದಿರುಗಿ ಹೋದನು.

ಪಾರ್ಥನಿಗಾಗಿ ತರಿಸಿದ್ದ ಸಕಲ ವಸ್ತುಗಳನ್ನು ಬಭ್ರುವಾಹನನು ಹಿಂದಕ್ಕೆ ತೆಗೆದುಕೊಂಡನು. ಕುದುರೆಯನ್ನು ಲಾಯದಲ್ಲಿ ಕಟ್ಟಿಸಿದನು. ಪುರಜನ ಮತ್ತು ಸ್ತ್ರೀಯರನ್ನು ಪಟ್ಟಣಕ್ಕೆ ಕಳಿಸಿದನು. ಸಚಿವರನ್ನು ಸೈನ್ಯಾಧಿಪತಿಗಳನ್ನು ಕರೆಸಿ, ಚತುರಂಗಸೈನ್ಯವನ್ನು ಸೇರಿಸಿ ಯುದ್ಧಕ್ಕೆ ಹೊರಟನು. ರಣವಾದ್ಯಗಳಶಬ್ದ ಸಮುದ್ರದ ಮೊರೆತವನ್ನು ಮೀರಿಸಿತು.

ಅವನಿಪಾಲ ಕುಲತಿಲಕನಾದ ಜನಮೇಜಯರಾಯನೇ ಕೇಳು. ಪೂರ್ವದಲ್ಲಿ ಇಂದ್ರನಿಗೂ ಪಾರ್ಥನಿಗೂ ಖಾಂಡವವನ ದಹನ ಕಾಲದಲ್ಲಾದ ಯುದ್ಧದಂತೆ, ಅದಕ್ಕೂ ಮೊದಲು ಯಜ್ಞದ ಕುದುರೆಯ ಕಾರಣದಿಂದ ರಾಮನಿಗೂ ಲವಕುಶರಿಗೂ ಆದ ಸಂಗ್ರಾಮದಂತೆ – ಘೋರಯುದ್ಧವು ಅರ್ಜುನನಿಗೂ ಬಭ್ರುವಾಹನನಿಗೂ ನಡೆಯಿತು.

ಜನಮೇಜಯರಾಯನು ಅಲ್ಲಿಯವರೆಗೂ ಕಥೆಯನ್ನು ಕೇಳಿ, 'ಎಲೈ ಋಷಿ ಶ್ರೇಷ್ಠನೇ ಇಂದ್ರಾರ್ಜುನರ ಸಮರವು ಅರ್ಜುನ ಬಭ್ರುವಾಹನರಿಗೆ ನಡೆದ ಯುದ್ಧಕ್ಕೆ ಸಮನಾಗಿತ್ತು ಎಂದು ಹೇಳಿರುವೆ. ಅದನ್ನು ನಾನು ನಿನ್ನಿಂದ ಈಗಾಗಲೇ ಕೇಳಿದ್ದೇನೆ. ಶ್ರೀರಾಮನಿಗೂ ಕುಶಲವರಿಗೂ ನಡೆದ ಕಾಳಗದ ವಿವರವನ್ನು ತಿಳಿಯಲು ಕುತೂಹಲವಾಗಿದೆ. ತಾವು ನನಗೆ ಅದನ್ನು ಹೇಳಿ' ಎಂದು ಕೇಳಿಕೊಂಡನು.

ತಪೋನಿಧಿಯಾದ ಜೈಮಿನಿಯು ಸಂತೋಷದಿಂದ ಭೂಪಾಲ ಜನಮೇಜಯನಿಗೆ– ಶ್ರೀರಾಮನಿಗೂ ಅವನ ಸುತರಾದ ಕುಶಲವರಿಗೂ ನಡೆದ ಯುದ್ಧದ ಕಥಾಮೃತವನ್ನು, ಯುದ್ಧದ ಕಾರಣ ಸಹಿತ ಆಮೂಲಾಗ್ರವಾಗಿ ಪ್ರೀತಿಯಿಂದ ವಿವರಿಸಿ ಹೇಳಿದರು.

# ಶ್ರೀರಾಮಚಂದ್ರ

ಎಲೈ ಜನಮೇಜಯನೇ ಕೇಳು, ಸಿರಿಗೆ ನೆಲೆಯಾದ ಅಯೋಧ್ಯಾಪುರದಲ್ಲಿ ದಶರಥಮಹಾರಾಜನು ಆಳುತ್ತಿದ್ದನು. ಆ ರಾಜನು ಪುತ್ರಕಾಮೇಷ್ಟಿಯನ್ನು ನಡೆಸಿದನು. ಮಹಾವಿಷ್ಣುವು ದಶರಥ ಮತ್ತು ಕೌಸಲ್ಯಾ ದಂಪತಿಗಳ ಉದರಲ್ಲಿ ಶ್ರೀರಾಮನಾಗಿ ಹುಟ್ಟಿದನು. ತಮ್ಮಂದಿರಾದ ಲಕ್ಷ್ಮಣ, ಭರತ, ಶತ್ರುಘ್ನರೊಡನೆ ಬೆಳೆದನು. ಸಹೋದರರೊಡಗೂಡಿ ವಿಶ್ವಾಮಿತ್ರನೊಡನೆ ಹೋಗಿ ಆತನ ಯಜ್ಞವನ್ನು ರಕ್ಷಿಸಿದನು. ತಾಟಕೆಯೆಂಬ ರಾಕ್ಷಸಿಯನ್ನು ಸಂಹರಿಸಿದನು. ಗೌತಮ ಋಷಿಯ ಹೆಂಡತಿಯಾದ ಅಹಲ್ಯೆಯ ಶಾಪವನ್ನು ಪರಿಹರಿಸಿದನು. ಮಿಥಿಲೆಗೆ ಹೋಗಿ ಹರಧನುಸ್ಸನ್ನು ಮುರಿದು ಸೀತೆಯನ್ನು ವಿವಾಹವಾದನು. ಪರಶುರಾಮನ ಗರ್ವವನ್ನು ಅಡಗಿಸಿದನು. ಉತ್ಸಾಹದಿಂದ ಅಯೋಧ್ಯಾಪುರಿಗೆ ಹಿಂದಿರುಗಿದನು.

ರಾಜ ದಶರಥನು ಕೀರ್ತಿಶಾಲಿಯಾಗಿ ಬೆಳಗುತ್ತಿರುವ ಶ್ರೀರಾಮನಿಗೆ ರಾಜ್ಯ ಪಟ್ಟಾಭಿಷೇಕ ಮಾಡಲು ಯತ್ನಿಸಿದನು. ಆ ದೊರೆಯ ಕಿರಿಯ ಹೆಂಡತಿ ಕೈಕಯಿಯು ತನ್ನ ಮಗ ಭರತನಿಗೆ ರಾಜ್ಯಾಭಿಷೇಕ ಮಾಡಲು ಒತ್ತಾಯಿಸಿದಳು. ಶ್ರೀರಾಮನ ಪಟ್ಟಾಭಿಷೇಕಕ್ಕೆ ತಡೆ ಒಡ್ಡಿದಳು. ಶ್ರೀರಾಮನು ಪಿತೃವಾಕ್ಯ ಪರಿಪಾಲನೆಗಾಗಿ ಸೀತಾ ಲಕ್ಷ್ಮಣ ಸಹಿತವಾಗಿ ಕಾಡಿಗೆ ಹೋದನು. ಪುತ್ರವಿಯೋಗದಿಂದ ದಶರಥ ಮಹಾರಾಜನು ಸ್ವರ್ಗಸ್ಥನಾದನು. ಶ್ರೀರಾಮನನ್ನು ಅಯೋಧ್ಯೆಗೆ ಹಿಂದಕ್ಕೆ ಕರೆದೊಯ್ಯಲು ಬಂದಿದ್ದ ಭರತನಿಂದ ಶ್ರೀರಾಮನು ತಂದೆ ಸ್ವರ್ಗಸ್ಥನಾದ ಸಂಗತಿಯನ್ನು ಕೇಳಿದನು. ಅವನನ್ನು ತನ್ನ ಪಾದುಕೆಗಳೊಡನೆ ಹಿಂದಕ್ಕೆ ಹಳುಹಿಸಿದನು. ಕಾಡಿನಲ್ಲಿ ಎದುರಾದ ರಾಕ್ಷಸರನ್ನು ಸಂಹರಿಸಿ ಮುನಿಗಳನ್ನು ರಕ್ಷಿಸಿದನು.

ರಘುನಾಥನು ದಂಡಕಾರಣ್ಯದಲ್ಲಿ ವಾಸ ಮಾಡುತ್ತಿರಲು ರಾವಣನ ತಂಗಿಯಾದ ಶೂರ್ಪಣಖೆ ಬಂದು ಆತನನ್ನು ಮದುವೆಯಾಗೆಂದು ಪೀಡಿಸಿದಳು. ಲಕ್ಷ್ಮಣನು ರಾಮನ ಸಂಜ್ಞೆಯಂತೆ ಅವಳ ಕಿವಿ ಮೂಗು ಕತ್ತರಿಸಿ ಹಳುಹಿಸಿದನು. ರಾವಣನು ಅವಳ ದೂರಿಗೆ ಕಿವಿಗೊಟ್ಟು ಸೀತೆಯನ್ನು ಅಪಹರಿಸಲು ಹೊಂಚು ರೂಪಿಸಿದನು. ಮಾರೀಚನು ಚಿನ್ನದ ಮೃಗವಾಗಿ ಸೀತೆಯನ್ನು ಆಕರ್ಷಿಸಲು, ಅದನ್ನು ಹಿಡಿಯಲು ಶ್ರೀರಾಮನು ಹೋದನು. ಸೀತೆಯನ್ನು ಬಿಟ್ಟು, ರಾಮನನ್ನು ಹುಡುಕಲು ಲಕ್ಷ್ಮಣನು ಹೋದನು. ಆ ಸಮಯವನ್ನು ಹೊಂಚುಹಾಕಿದ ರಾವಣ ಸೀತಾಪಹರಣವನ್ನು ಮಾಡಿದನು.

ರಾಮಲಕ್ಷ್ಮಣರು ಹಿಂದಿರುಗಿ ಬಂದು, ಪರ್ಣಶಾಲೆಯಲ್ಲಿ ಸೀತೆ ಕಾಣದಿರಲು ದುಃಖಿತರಾದರು. ಶ್ರೀರಾಮನು ವಿರಹದಿಂದ ಬಲಗುಂದಿದನು. ಅವರು ಹುಡುಕಲು ಹೊರಟಾಗ ಗತಪ್ರಾಣನಾಗಿ ಬಿದ್ದಿದ್ದ ಜಟಾಯುವಿನಿಂದ ಸೀತಾ ವೃತ್ತಾಂತ ತಿಳಿದರು. ಶ್ರೀರಾಮನು ಮಾರ್ಗದಲ್ಲಿ ಕಬಂಧನನ್ನು ಕೊಂದನು. ಶಬರಿಯ ಇಷ್ಟಾರ್ಥವನ್ನು ನೆರವೇರಿಸಿದನು. ಆಂಜನೇಯನನ್ನು ಕಂಡು ಸುಗ್ರೀವನಿಗೆ ಸಹಾಯಹಸ್ತ ಚಾಚಿದನು. ಸುಗ್ರೀವನ ಅಣ್ಣನಾದ ವಾಲಿಯನ್ನು ಕೊಂದನು. ಅವನನ್ನು ಕಿಷ್ಕಿಂಧಾ ರಾಜ್ಯದ ರಾಜನನ್ನಾಗಿ ಮಾಡಿದನು. ರಾವಣನ ಮೇಲಿನ ಯುದ್ಧದ ರಾಜಕಾರ್ಯವನ್ನು ಅವರೊಡನೆ ಅಲೋಚಿಸಿದನು.

ಕರಡಿ, ಕಪಿಗಳ ಸೈನ್ಯವನ್ನು ಕೂಡಿಸಿಕೊಂಡನು. ಸೀತೆಯನ್ನು ಹುಡುಕಿಬರಲು ವೀರಹನುಮಂತನನ್ನು ಕಳುಹಿಸಿದನು.

ಅಂಜನೇಯನು ಸಮುದ್ರವನ್ನು ದಾಟಿ ಲಂಕಾಪಟ್ಟಣವನ್ನು ಸೇರಿದನು. ಅಲ್ಲಿ ಅಶೋಕವನದಲ್ಲಿ ಸೆರೆಯಾಗಿದ್ದ ಸೀತೆಯನ್ನು ಕಂಡು ಶ್ರೀರಾಮನ ಅಂಕಿತದ ಮುದ್ರೆಯುಂಗುರವನ್ನು ನೀಡಿ, ಆಕೆಯಿಂದ ಬೀಳ್ಕೊಂಡನು. ನಿರ್ಭಯವಾಗಿ ಅಶೋಕವನವನ್ನು ಮುರಿದನು. ಯುದ್ಧಕ್ಕೆ ಬಂದ ರಾವಣನ ಮಗ ಅಕ್ಷಕುಮಾರನನ್ನು ಕೊಂದನು. ಇಂದ್ರಜಿತುವಿನ ಬ್ರಹ್ಮಾಸ್ತ್ರದ ಕಟ್ಟಿನಿಂದ ಸುಮ್ಮನೆ ನಿಂತನು. ಆಗ ರಾವಣನು ದಂಡನೆಯೆಂದು ಆತನ ಬಾಲಕ್ಕೆ ಬೆಂಕಿ ಇಡಿಸಿದನು. ಆ ಬೆಂಕಿಯಿಂದ ಲಂಕೆಯನ್ನು ಸುಟ್ಟನು. ಹಿಂದಿರುಗಿಬಂದು ಶ್ರೀರಾಮನಿಗೆ ಶುಭವಾರ್ತೆಯನ್ನು ತಿಳಿಸಿದನು.

ಶ್ರೀರಾಮನು ಅಪಾರವಾದ ಕಪಿಸೈನ್ಯದಿಂದ ದಕ್ಷಿಣ ದಿಕ್ಕಿನ ಕಡಲತೀರದಲ್ಲಿ ಬೀಡುಬಿಟ್ಟನು. ತನಗೆ ಶರಣಾಗತನಾಗಿ ಬಂದ ರಾವಣನ ತಮ್ಮ ವಿಭೀಷಣನನ್ನು ಅಂಗೀಕರಿಸಿದನು. ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ ಲಂಕೆಯನ್ನು ಪ್ರವೇಶಿಸಿದನು. ಕೋಪದಿಂದನುಗ್ಗಿ ಕೋಟೆಯನ್ನು ಧೂಳೀಪಟ ಮಾಡಿದನು. ಯುದ್ಧದಲ್ಲಿ ರಾವಣ ಕುಂಭಕರ್ಣ ಮೊದಲಾದ ರಾಕ್ಷಸರನ್ನು ಸಂಹಾರ ಮಾಡಿದನು. ವಿಭೀಷಣನಿಗೆ ಲಂಕಾ ರಾಜ್ಯವನ್ನು ವಹಿಸಿಕೊಟ್ಟನು. ದೇವತೆಗಳೆಲ್ಲರನ್ನು ಬಿಡಿಸಿ ರಕ್ಷಿಸಿದನು. ಲೋಕತ್ರಯವು ಮೆಚ್ಚುವಂತೆ ಸೀತೆಯನ್ನು ಅಗ್ನಿಪ್ರವೇಶ ಮಾಡಿಸಿ, ಪವಿತ್ರಳಾದ ಆಕೆಯನ್ನು ಅಗ್ನಿಯ ಮೂಲಕ ಸ್ವೀಕರಿಸಿದನು. ವಿಜಯೋತ್ಸವದಿಂದ ಲಕ್ಷ್ಮಣ, ವಿಭೀಷಣ, ಸುಗ್ರೀವ ಮೊದಲಾದವರೊಡನೆ ಪುಷ್ಪಕವಿಮಾನದಲ್ಲಿ ಭರತನನ್ನುಕಾಣಲು ಅಯೋಧ್ಯೆಗೆ ಪ್ರಯಾಣ ಮಾಡಿದನು.

ಸಹೋದರರಾದ ಭರತ, ಶತ್ರುಘ್ನರನ್ನು ಬಾಚಿ ತಬ್ಬಿಕೊಂಡನು. ಕೌಶಿಕ, ವಸಿಷ್ಠ ಮೊದಲಾದ ಗುರುಗಳನ್ನು ಸತ್ಕರಿಸಿದನು. ಕೈಕೆ, ಸುಮಿತ್ರೆ ತಾಯಿಯರಿಗೆ ನಮಿಸಿದನು. ಅರಮನೆಯ ರಾಣಿವಾಸದವರನ್ನು, ಮಂತ್ರಿಗಳನ್ನು, ಪ್ರಜೆಗಳನ್ನು, ಪರಿಜನರನ್ನು ಪ್ರೀತಿಯಿಂದಕಂಡು ಅವರಿಗೆ ಉಲ್ಲಾಸವನ್ನುಂಟು ಮಾಡಿದನು.

ತನ್ನ ಬರುವಿಕೆಯನ್ನೇ ಕಾಯ್ದು ಕೃಶಳಾಗಿದ್ದ ತಾಯಿ ಕೌಸಲ್ಯಾದೇವಿಗೆ ಅಭಿವಂದಿಸಿದನು. ಆ ತಾಯಿ ಅಂಗೈಯಿಂದ ಮೆಲ್ಲಗೆ ತನ್ನ ಮಗನ ಮೈದಡವಿ ಆಯುಧಗಳಿಂದಾದ ಗಾಯವನ್ನು ಕಂಡು ಮರುಗಿದಳು. ಅತಿಯಾದ ಮುದ್ದಿನಿಂದ ತಬ್ಬಿಕೊಂಡು ಕೇಳಿದಳು:

'ನಿನ್ನ ಕೋಮಲತನುವನ್ನು ಆಯುಧದಿಂದ ಹೊಡೆದವರಾರು? ಅಯ್ಯೊ! ನನ್ನಹೊಟ್ಟೆಗೆ ಬೆಂಕಿಬಿದ್ದಂತಾಗಿದೆ!.

ಅಮ್ಮನ ವಾತ್ಸಲ್ಯಕ್ಕೆ ಕರಗಿಹೊದ ಶ್ರೀರಾಮ ಆಕೆಯನ್ನು ಸಮಾಧಾನಪಡಿಸಿದನು. ಶುಭಮುಹೂರ್ತದಲ್ಲಿ ಶ್ರೀರಾಮನು ಅಯೋಧ್ಯಾರಾಜ್ಯದ ಚಕ್ರವರ್ತಿಯಾಗಿ ಪಟ್ಟಾಭಿಷಿಕ್ತನಾದನು. ಒಂಭತ್ತುಸಾವಿರವರ್ಷಗಳ ಕಾಲ ರಾಜ್ಯವನ್ನಾಳುತ್ತಿದ್ದನು. ಆತನನ್ನು ಸಮಸ್ತರಾಜರೂ ಪ್ರೀತಿಯಿಂದ ಸೇವಿಸುತ್ತಿದ್ದರು. ಆತನ ರಾಜ್ಯಭಾರದಲ್ಲಿ ಪ್ರಜೆಗಳೆಲ್ಲರೂ ಸುಖದಿಂದಿದ್ದರು. ಮೂರು ಲೋಕವು ಶ್ರೀರಾಮ ಪ್ರತಾಪದಿಂದ ತುಂಬಿತ್ತು.

* * *

ಶ್ರೀರಾಮಚಂದ್ರನು ತನಗೆ ಸಂತಾನವಿಲ್ಲದುದರಿಂದ, ಇಕ್ಷ್ವಾಕುವಂಶ ತನ್ನವರೆಗೂ ಬಂದು ನಿಂತುಹೋಗುವುದಲ್ಲ ಎಂದು ಚಿಂತಿಸಿದನು. ತನ್ನ ದುಃಖವನ್ನು ಸೀತಾದೇವಿಯಲ್ಲಿ ವ್ಯಕ್ತಪಡಿಸಿದನು. ಆಕೆಯು ಮಕ್ಕಳಿಲ್ಲದ ವ್ಯಥೆಯಿಂದ ಚಿಂತಾಕ್ರಾಂತಳಾದಳು. ಆ ಸಮಯಕ್ಕೆ ಋಷಿ ಶ್ರೇಷ್ಠನಾದ ವಸಿಷ್ಠನು ಬಂದು 'ನಿಮಗೆ ಸಂತಾನಾಭಿವೃದ್ಧಿಯಾಗುವುದು' ಎಂದು ಹೇಳಿ ಪ್ರೀತಿಯಿಂದ ಅವರನ್ನು ಸಮಧಾನಗೊಳಿಸಿದನು. ಸೀತಾರಾಮರು ಶುಭನುಡಿಯ ಸಂತಸದಲ್ಲಿರುವಾಗ ವಸಂತ ಕಾಲ ಅಡಿಯಿಟ್ಟಿತು. ವಸಂತಲಕ್ಷ್ಮಿಯಂತೆ ಸೀತಾದೇವಿ ಹೊಳೆಯುತ್ತಿದ್ದಳು. ಶ್ರೀರಾಮನು ಮನುಜಲೀಲೆಗೆ ದಾಂಪತ್ಯಸುಖ ಇಂಪು ಎಂದು ರಾಗರಸದಿಂದ ಸೀತೆಯೊಡನೆ ಕೂಡಿದನು. ಸೀತಾದೇವಿಗೆ ಶ್ರವಣನಕ್ಷತ್ರದ ಕೊನೆಯಲ್ಲಿ ಗರ್ಭಧಾರಣೆಯಾಯಿತು.

ಜ್ಯೋತಿಷ್ಯಶಾಸ್ತ್ರದ ಪ್ರಕಾರ ವಿಚಾರಮಾಡಲು, ಆ ಕಾಲದಲ್ಲಿ ಗರ್ಭಿಣಿಯಾದವಳು ಪ್ರಸವಕಾಲದಲ್ಲಿ ತನ್ನ ಪತಿಯನ್ನು ಅಗಲುವಳು. ಪರಸ್ಥಳದಲ್ಲಿ ಮಕ್ಕಳನ್ನು ಪಡೆಯುವಳು ಎಂದಿತ್ತು. ಅದನ್ನು ತಿಳಿಯದೆ ಸೀತಾದೇವಿ, ತಾನು ಬಸಿರಾದ ಆನಂದದಲ್ಲಿ ಸುಖಿಯಾಗಿದ್ದಳು. ಕಾಂಚನಬಳ್ಳಿಯಂತೆ ದೇಹಲಾವಣ್ಯ ಹೊಂದಿದ ಸೀತೆಯು ಗರ್ಭಿಣಿಯಾಗಿ ಇನ್ನೂ ಶೋಭಾಯಮಾನಳಾದಳು. ಸಂತೋಷಗೊಂಡ ಶ್ರೀರಾಮನು ನಾಲ್ಕನೇ ತಿಂಗಳಲ್ಲಿ ವಸಿಷ್ಠ ವಿಶ್ವಾಮಿತ್ರರಿಂದ ಶಾಸ್ತ್ರೋಕ್ತವಾಗಿ ಸೀಮಂತವನ್ನು ನಡೆಸಿದನು. ಆ ಉತ್ಸವಕ್ಕೆಬಂದ ಸಮಸ್ತರನ್ನೂ ಸತ್ಕರಿಸಿದನು.

**ಸೀತಾ ಪರಿತ್ಯಾಗ**

ಶ್ರೀರಾಮಚಂದ್ರನು ರಾಜ ಸಂಪತ್ಸುಖದಲ್ಲಿರುವಾಗ ಆತನನ್ನು ಏಕಾಂತದಲ್ಲಿ ಕಂಡ ಸೀತೆಯು ತನ್ನ ಬಯಕೆಯನ್ನು ಹೇಳಿಕೊಂಡಳು.

'ಕಾಂತನೇ, ನನಗೆ ಶುದ್ಧವಾದ ಆಶ್ರಮ ಋಷಿಪತ್ನಿಯರ ಸತ್ಸಂಗದಲ್ಲಿ ಕೆಲವು ದಿನಗಳಿದ್ದು, ಬೇಸರವನ್ನು ಹೋಗಲಾಡಿಸಿಕೊಳ್ಳಲು ಮನಸ್ಸಾಗಿದೆ. ಆದುದರಿಂದ ನನಗೆ ಇನ್ನೊಮ್ಮೆ ಅರಣ್ಯಕ್ಕೆ ಕಳುಹಿಸಿಕೊಡು.' ಅದನ್ನು ಕೇಳಿ ನಕ್ಕ ಶ್ರೀರಾಮನು,

'ನಾನು ಸಮೀಪವಿರುವಾಗ ಅಂತಹ ಬಯಕೆ ಏಕೆ? ಇರಲಿ ನಿನ್ನ ಆಸೆಯಂತೆ ನಡೆ ಯೋಣ' ಎಂದು ಆಕ್ಷೇಪ ವ್ಯಕ್ತಪಡಿಸಿ ಸಮಾಧಾನಪಡಿಸಿದನು.

ಒಂದು ದಿನ ರಾತ್ರಿ ಆತನಿಗೆ, ಸೀತೆಯು ಗಂಗಾನದಿಯನ್ನು ದಾಟಿ ಕಾಡು ಹೊಕ್ಕು, ದಿಕ್ಕಿಲ್ಲದವರಂತೆ ದಿಕ್ಕುದಿಕ್ಕನ್ನು ನೋಡುತ್ತ ದುಃಖದಿಂದಿರುವ ಕನಸುಬಿತ್ತು. ಅದನ್ನು ವಸಿಷ್ಠರಿಗೆ ತಿಳಿಸಲು, ಅವರು ಆ ಕನಸು ಒಳ್ಳೆಯದಲ್ಲ ಎಂದು ಹೇಳಿದರು. ದುಃಸ್ವಪ್ನ ನಿವಾರಣೆಗೆ ಶಾಂತಿಯನ್ನು ಮಾಡಿಸಿದರು.

ಶ್ರೀ ರಾಮನು ಕನಸನ್ನೆ ಕುರಿತು ಚಿಂತಿಸುತ್ತ ಮನೋವ್ಯಥೆಗೀಡಾದನು. ಪ್ರಜೆಗಳ ಯೋಗಕ್ಷೇಮವನ್ನು ವಿಚಾರಿಸದೆ ಎರಡು ಮೂರು ದಿನಗಳನ್ನು ಕಳೆದನು. ಹೀಗಿದ್ದರೆ ಜನ ಬೇಸರಪಟ್ಟುಕೊಳ್ಳುವರೆಂದು ಬಗೆದನು. ರಾತ್ರಿ ಕಾಲದಲ್ಲಿ ಪಟ್ಟಣದ ವಿಚಾರವನ್ನು ಗೂಢವಾಗಿ ತಿಳಿಯಲು ತಾನೇ ಹೊರಟನು. ಅಲ್ಲಿ ಓರ್ವ ಗೂಢಚಾರನನ್ನು ಕರೆಸಿ ನಯವಾದ ನುಡಿಯಲ್ಲಿ ರಹಸ್ಯವಾಗಿ,

'ಈ ವರೆಗೂ-ಜನ ನನ್ನನ್ನು ದೂಷಿಸಿಲ್ಲವೇ? ನನ್ನಕೀರ್ತಿಗೆ ಕಳಂಕ ಉಂಟು

ಮಾಡಿಲ್ಲವೇ? ನನ್ನ ಪ್ರತಾಪಕ್ಕೆ, ಗುಣಕ್ಕೆ ದೋಷಾರೋಪಣೆ ಮಾಡಿಲ್ಲವೇ?' ಎಂದು ಕೇಳಿದನು.

ಆ ನುಡಿಗೆ ಚಾರನು ಅತಿವಿನಯದಿಂದ ತಲೆಬಾಗಿ ಕೈ ಮುಗಿದು ವಿಜ್ಞಾಪಿಸಿದನು:

'ಈ ಭೂಮಂಡಲದಲ್ಲಿ ತಮ್ಮನ್ನು ನಿಂದಿಸುವವರು ಯಾರಾದರೂ ಇರುವರೇ? ಸೂರ್ಯನನ್ನು ಕಾವಳವು ಮುಸುಕಿದರೆ ಅವನ ಪ್ರಕಾಶಕ್ಕೆ ಕೊರತೆ ಉಂಟಾಗುವುದೇ?'

'ಎಲೈ ಗೂಢಾಚಾರನೆ, ನೀನು ಹೇಳಿದ ಭಾನುವನ್ನು ಕಾವಳ ಮುಸುಕಲು ಏನಾಗುವುದು ಎಂಬುದು ಕಟಕಿಯಾಗಿದೆ. ಈಗ ನನ್ನ ದೊರೆತನದ ಯಾವ ನ್ಯೂನತೆ ಕುರಿತು ಜನ ಮಾತಾಡುವರು ಹೇಳು.'

'ಬಂಡೆಯಾಗಿದ್ದ ಗೌತಮಮುನಿಪತ್ನಿ ಅಹಲ್ಯೆಯು ತಮ್ಮ ಪಾದಸ್ಪರ್ಶದಿಂದ ಸ್ವ ಸ್ವರೂಪ ಪಡೆದು–ತಾವು ಪರಿಶುದ್ಧರೆಂಬುದನ್ನು ಜಗತ್ತಿಗೆ ಪ್ರಕಟಿಸಲಿಲ್ಲವೇ?ಮೂಢರು ನಿಮ್ಮ ವಿಷಯದಲ್ಲಿ ಆಡುವ ನಿಂದನೆಯನ್ನು ನಾನು ಹೇಳಲಾರೆ' ಎಂದು ಶ್ರೀರಾಮನ ಪಾದಕ್ಕೆ ಎರಗಿದನು.

'ಎಲೈ ಗೂಢಚಾರನೇ, ಅಂಜಬೇಡ, ಹೇಳು, ಈ ಸಂಗತಿಯನ್ನು ಮರೆಮಾಚಿದರೆ ನನ್ನಾಣೆ.'

ಶ್ರೀರಾಮಚಂದ್ರನ ಒತ್ತಾಸೆಗೆ ಗೂಢಚಾರನು,

'ಪ್ರಭುಗಳೇ, ಒಬ್ಬ ಅಗಸರವನು ಮಲಿನವಸ್ತ್ರಗಳನ್ನೊಗೆಯುತ್ತ ಏನನ್ನೋ ಹರಟಿದ್ದಾನೆ. ಸ್ವಾಮಿಯೇ, ಈ ಲೋಕವನ್ನೇ ಪಾವನವಾಗಿಸುವ ನಿಮ್ಮ ಮಹತ್ತನ್ನು ಅವನು ಹೇಗೆ ತಿಳಿದಾನು?'

'ಅವನಾಡಿದ ಮಾತೇನು?'

'ಅಗಸರವನ ಹೆಂಡತಿ ಕೋಪಿಸಿಕೊಂಡು ಅವನಿಗೆ ಹೇಳದೆ ತವರುಮನೆಗೆ ಹೊರಟುಹೋಗಲು, ಅವಳ ತಾಯ್ತಂದೆ ಅವಳ ಚಂಡಿತನ ಕಂಡು ದಂಡಿಸಿದರು. ಗಂಡನ ಮನೆಗೆ ಕಳುಹಿಸಿಕೊಡಲು ಬಂದರು. ಅವಳನ್ನು ಮನೆಯಲ್ಲಿಟ್ಟುಕೊ ಎಂದು ಅವನನ್ನು ಬಲಾತ್ಕಾರಪಡಿಸಿದರು. ಅಗಸರವನು – ಅಗಲಿದ ಮಡದಿಯನ್ನು ತಾನು ರಘುರಾಮನ ಹಾಗೆ ಪುನಃ ಅಂಗೀಕರಿಸಿ ಆಳುವವನಲ್ಲ – ಎಂದು ಗರ್ವದಿಂದ ಹೇಳಿದನು. ಅದನ್ನು ಕೇಳಲಾರದೆ ನಾನು ಕಿವಿಮುಚ್ಚಿಕೊಂಡು ಹೊರಟುಹೋದೆ. 'ಹವಿಸ್ಸು ಶ್ರೇಷ್ಠವಾದರೂ ಕಾಗೆಯು ಎಂಜಲು ಮಾಡದಿರುತ್ತದೆಯೆ?'

ಗೂಢಚಾರನ ಮಾತನ್ನು ಕೇಳಿದ ರಘುನಂದನನು ಅವನನ್ನು ಕಳುಹಿಸಿದನು. ಬಂಧನಕ್ಕೆ ಸಿಕ್ಕುಬಿದ್ದ ಮತ್ತಗಜದಂತೆ ತಲೆಯನ್ನು ಒಲೆದಾಡುತ್ತ, ಮೂಗಿನ ಮೇಲೆ ಬೆರಳಿಟ್ಟು ಮೌನದಿಂದ ನಿಂತುಕೊಂಡನು. ಅದನ್ನೇ ನೆನೆದು ವ್ಯಥೆಪಟ್ಟನು. ನಿಟ್ಟುಸಿರಿಟ್ಟನು. ಶಕ್ತಿಹೀನನಾಗಿ ಕಾತರಿಸಿ ಕಳೆಗುಂದಿ ಹುತ್ತಕ್ಕೆ ತೂರಿಕೊಳ್ಳುವ ಸರ್ಪದಂತೆ ಅಂತಃಪುರವನ್ನು ಹೊಕ್ಕನು.

* * *

ರಾಜೇಂದ್ರ ಶ್ರೀರಾಮಚಂದ್ರನು ರಾಜಸಭೆಯನ್ನು ನಡೆಸದೆ, ಅರಮನೆಗೆ ಬಂದ ರಾಜರನ್ನು ಕರೆಸಿ ಮಾತನಾಡದೆ ಚಿಂತೆಗೆ ಒಳಗಾದನು. ಲಕ್ಷ್ಮಣಾದಿ ಸಹೋದರರು ಆ ಸಂಗತಿಯನ್ನು

ಕೇಳಿ ಭೀತಿಗೊಂಡು ಅಂತಃಪುರಕ್ಕೆ ಬಂದರು. ಆಲಸ್ಯವನ್ನೇ ಆಲಂಗಿಸಿಕೊಂಡಂತೆ ಬಾಧೆಗೊಂಡ ಮನಸ್ಥಿತಿಯಲ್ಲಿ ಕುಗ್ಗಿದ ದೇಹದ ಅಣ್ಣನನ್ನು ಕಂಡರು. ಕಾಲಿಗೆ ನಮಸ್ಕರಿಸಿದರು. ಮಾತು ಆಡಲಾಗದೆ ಸುಮ್ಮನಿದ್ದರು. ಶ್ರೀರಾಮನು ತಮ್ಮಂದಿರನ್ನು ಆದರಿಸಿ ನುಡಿದನು:

'ಇಂದು ಲೋಕದಲ್ಲಿ ನನಗೆ ಪ್ರಾಪ್ತವಾಗಿರುವ ಅಪವಾದವನ್ನು ನೀವು ತಿಳಿದಿಲ್ಲ. ಅಯ್ಯೋ, ಜೀವಂತವಾಗಿರುವಾಗ ನಿಂದೆಗೆ ಒಳಗಾಗಿ ಬದುಕಿರಲಾರೆ. ಹೇಗೆ ತಿದ್ದಿದರೂ ಸರಿಹೋಗದೆ ಅಪವಾದಕ್ಕೆ ಹೆದರುತ್ತೇನೆ. ಸೀತೆಯನ್ನು ಪರಿತ್ಯಾಗ ಮಾಡದೆ ಇರಲು ಸಾಧ್ಯವಿಲ್ಲ.

'ಸೀತೆ ಅಯೋನಿಜೆ, ರೂಪ ಗುಣ ಶೀಲಸಂಪನ್ನೆ, ಪತಿವ್ರತೆ ಎಂಬುದು ನನಗೆ ಗೊತ್ತಿದೆ. ಆದರೂ ನಿಂದೆಗೆ ಒಳಗಾದ ಮೇಲೆ ಆಕೆಯನ್ನು ಬಿಡುವುದೇ ನಿಶ್ಚಯ. ರವಿಕುಲದರಾಜರು ಎಂದಿಗೂ ಅಪಕೀರ್ತಿಯನ್ನು ಹೊಂದಿದವರಲ್ಲ. ತಂದೆಯ ವಚನ ನೆಲೆನಿಲ್ಲಲು ನಾನು ಅರಣ್ಯವಾಸಿಯಾಗಲಿಲ್ಲವೇ?

'ಹೆಚ್ಚು ಹೇಳುವುದೇನಿದೆ. ಕಲಿಯುಗದವಿಪ್ರರು ಆಚಾರವನ್ನು ಬಿಡುವಂತೆ ಇನ್ನು ಸೀತೆಯನ್ನು ಬಿಟ್ಟೆನು.'

ಕಾರುಣ್ಯ ನಿಧಿಯಾದ ಶ್ರೀರಾಮನಿಗೆ ಈ ಗ್ರಹವು ಎಲ್ಲಿಂದ ಬಂದು ಹಿಡಿದು ಕೊಂಡಿತೊ ಎಂದು ತಮ್ಮಂದಿರು ಭೀತಿಗೊಂಡು, ನಡು ನಡುಗುತ್ತ ಹೇಳಿದರು:

'ಈ ಭೂಮಿಯಲ್ಲಿ ನಾಸ್ತಿಕರಾದ ಪಾಷಂಡಿಗಳು ವೇದವನ್ನು ನಿಂದಿಸಿದರೆ, ಆಸ್ತಿಕರಾದ ದ್ವಿಜರು ಅದನ್ನು ಬಿಡುವರೇ? ಹಾಗೆಯೇ ನೀನು ಕುಲವರ್ಧಿನಿಯನ್ನು ಹೇಗೆ ಬಿಡುವೆ?'

ಭಯಶೋಕದಿಂದ ಗದ್ಗದಿತ ಕಂಠದವನಾಗಿ ಕಣ್ಣಿನಲ್ಲಿ ನೀರು ತುಳುಕುತ್ತ ಭರತ,

'ಹಾಲು ಕೊಡುವ ಕಪಿಲೆಯನ್ನು ಯಾರಾದರೂ ಕಾಡಿಗೆ ಅಟ್ಟುವರೇ? ಅರಸಿ ಸೀತಾಮಾತೆಯನ್ನು ಅಗ್ನಿಪ್ರವೇಶ ಮಾಡಿಸಿದಾಗ, ನಮ್ಮ ತಂದೆಯೇ ಲೋಕಾಂತರದಿಂದ ಬಂದು; ಸುರಾಸುರರು, ಕಪಿಸಮೂಹ, ಸರ್ವರೂ ತಿಳಿಯುವ ಹಾಗೆ– ನಿನ್ನಪತ್ನಿ ಸೀತೆ ಪರಿಶುದ್ಧಳು, ಕುಲಕೆ ಮಂಗಳಕರಳು, ಸುತೋದಯಕೆ ನಿರ್ಮಲಳು, ತನಗೆ ಸದ್ಗತಿ ಕೊಡುವ ಸೊಸೆ – ಎಂದು ಹೇಳಲಿಲ್ಲವೇ?

'ಸ್ವಾಮಿಯೇ, ಅದೆಲ್ಲವನ್ನು ಮರೆತು ಅಲ್ಪನಾದ ಒಬ್ಬ ಅಗಸರವನು ಆಡಿದ ಅಪವಾದವನ್ನು ನೆನೆದು ಚಿಂತಿಸಿ ದೊಡ್ಡದು ಚಿಕ್ಕದು ಎಂಬ ತಾರತಮ್ಯವನ್ನರಿಯದ ಮೂಢರಂತೆ, ಬರಿದೆ ಎದೆಗೆಟ್ಟು ಸೀತಾದೇವಿಯನ್ನು ದೋಷಿ ಎಂದು ಹೇಳಬಹುದೇ? ಇದು ಸರಿಯೇ?'

'ತಮ್ಮನೇ, ನೀನು ಹೇಳಿದ ಹಾಗೆ ಅವನಿಸುತೆ ದೋಷರಹಿತಳೇ ಅಹುದು. ವ್ಯಥೆಪಡಬೇಡ. ನಾನು ಈ ಅಪವಾದವನ್ನು ಸೈರಿಸಲಾರೆನು. ಪೃಥು, ಪುರೂರವ, ಹರಿಶ್ಚಂದ್ರಾದಿ ಚಕ್ರವರ್ತಿಗಳು ಈಗ ಉಳಿದಿರದಿದ್ದರೂ ಅವರ ಕೀರ್ತಿ ಶಾಶ್ವತವಾಗಿದೆ. ಅಪಕೀರ್ತಿಗೇಕೆ ಒಳಗಾಗಬೇಕು? ಮಹಾಯೋಗಿಯು ಮಮತೆಯನ್ನು ಬಿಟ್ಟು ವಿರಾಗಿ ಯಾದಂತೆ, ನಾನು ಈಕೆಯನ್ನು ಬಿಟ್ಟುಬಿಡುತ್ತೇನೆ.'

ಆ ನುಡಿ ಕೇಳಿ ಮೈಮರೆದು, ನಡುಗುತ್ತ ಕಿವಿಮುಚ್ಚಿಕೊಂಡು ಲಕ್ಷ್ಮಣನು ವಿಜ್ಞಾಪಿಸಿದನು:

'ಸ್ವಾರ್ಥದಿಂದ ದೇಹಸುಖಕ್ಕಾಗಿ ಧರ್ಮವನ್ನು ಬಿಡುವಹಾಗೆ ಭಾವಶುದ್ಧಳಾದ ಸೀತಾದೇವಿಯನ್ನು ಒಂದು ಅಪವಾದದ ನೆಪದಿಂದ, ಈ ರೀತಿ ನಿಷ್ಕರುಣೆಯಾಗಿ ತೊರೆಯುವೆ ಎಂದು ಹೇಳಬಹುದೇ?

'ಸ್ವಾಮಿಯೇ, ತುಂಬಿದಬಸುರಿ ಸೀತಾದೇವಿಯ ಪ್ರಸವಕಾಲವು ಸಮೀಪಿಸಿರುವಾಗ, ಪ್ರೀತಿಯಿಂದ ಆರೈಕೆಮಾಡಬೇಕು. '

ತಡೆಹಿಡಿಯಲಾಗದ ಕೋಪದಿಂದ ಶತ್ರುಘ್ನನು ಮೇಲೆಬಿದ್ದು ಹೇಳಿದ,

'ಇಕ್ಷ್ವಾಕು ವಂಶದವರು ರಾಣಿಯನ್ನು ತ್ಯಜಿಸಲು ಸಾಧ್ಯವೇ?ಈ ಭೂಮಿಯಲ್ಲಿ ಯಾರಾದರೂ ಅಪವಾದ ಹೊರಿಸಲು ಸಾಧ್ಯವೇ? ಬುದ್ಧಿ ಹೇಳುವುದಕ್ಕೆ ಯಾರೂ ಗುರುಹಿರಿಯರು ಇಲ್ಲವಾಗಿ, ಇವರು ಸತ್ಕೀರ್ತಿ ಪಡೆಯುವುದು ಹೇಗೆ?

'ಇವರೇಕೆ ಏಳಿಗೆಯನ್ನು ನಾಶಮಾಡಿಕೊಳ್ಳುತ್ತಿದ್ದಾರೆ?ಹೆಣ್ಣಿನ ದುಃಖಾಗ್ನಿಯ ತಾಪದಿಂದ ವಂಶದ ಮೇಲ್ಮೆಯನ್ನೇ ಸುಡುತ್ತಿದ್ದಾರೆ. ಒಡಹುಟ್ಟಿದವರೇಕೆ ಇದಕ್ಕೆಲ್ಲಾ ಕಿವಿಗೊಡುತ್ತಿದ್ದಾರೆ?'

ಅರಸ ಜನಮೇಜಯನೇ ಕೇಳು.

ತರಣಿಕುಲತಿಲಕವಾದ ಶ್ರೀರಾಮನು ತಮ್ಮಂದಿರು ಆಡಿದ ನುಡಿ ಕೇಳಿ ತಲೆ ತಗ್ಗಿಸಿಕೊಂಡು ದೈನ್ಯಭಾವದಿಂದ,

'ನನಗೆ ಸಹಿಸಲಾಗದ, ಅಪವಾದದ ಶೂಲವಾಗಿರುವ ಸೀತೆಯನ್ನು ತೊರೆದು. ಪೊರೆಬಿಟ್ಟ ಹಾವಿನಹಾಗೆ ಇರುತ್ತೇನೆ.ಸುಮ್ಮನಿರಿ' ಎಂದು ಬೇಸರದಿಂದ ನುಡಿದನು. ಭರತ ಶತ್ರುಘ್ನರನ್ನು ಅವರವರ ಮನೆಗಳಿಗೆ ಕಳುಹಿಸಿಕೊಟ್ಟನು. ರಹಸ್ಯವಾಗಿ ಸೌಮಿತ್ರಿಯನ್ನು ಕರೆದು,

'ಲಕ್ಷ್ಮಣನೇ ಬಾ, ನೀನು ಇದುವರೆಗೆ ನಾನು ಹೇಳಿದ ಮಾತು ಮೀರಿದವನಲ್ಲ. ಹಿಂದು ಮುಂದು ಯೋಚಿಸುತ್ತ ವ್ಯಸನ ಪಡಬೇಡ. ಈಗ ನನ್ನಕತ್ತನ್ನು ಕತ್ತಿಯಿಂದ ಕಡಿದುಹಾಕು. ಹಾಗಿಲ್ಲವಾದರೆ ಮರುಗದೆ ಜಾನಕಿಯನ್ನು ಕರೆದುಕೊಂಡು ಹೋಗಿ ಗಂಗಾತೀರದ ಕಾಡಿನಲ್ಲಿ ಸುಮ್ಮನೆ ಬಿಟ್ಟು ಬಾ. ಅವಳು ಒಮ್ಮೆ ಅರಣ್ಯಕ್ಕೆ ಹೋಗಬೇಕೆಂದು ನನ್ನಸಂಗಡ ಆಸೆಯಿಂದ ಹೇಳಿರುವಳು. ನಿನಗೆ ಅವಳ ಬಯಕೆಯೇ ಒಂದು ನೆವವಾಗಿರುವುದು.'

'ಶ್ರೀರಾಮನೇ, ನಿನ್ನಾಜ್ಞೆಯನ್ನು ಮೀರಿದರೆ ನನಗೆ ರೌರವ ನರಕವಾಗುವುದು. ನಿನ್ನ ಆಜ್ಞೆಯನ್ನು ನೆರವೇರಿಸಿದರೆ ತಾಯಿಯನ್ನು ಕೊಂದುಹಾಕಿದ ಕ್ರೂರ ದುರ್ಗತಿಯೊದಗುವುದು. ನಾನೇನು ಮಾಡಲಿ?'ಎಂದು ಕಡು ಶೋಕದಲ್ಲಿ ಮೂರ್ಛೆ ಹೋದನು.

ದುಃಖವೆಂಬ ಹೊಳೆಯಲ್ಲಿ ಮುಳುಗಿಹೋದ ತಮ್ಮನನ್ನು ಗದರಿಸುತ್ತ ಶ್ರೀರಾಮನು ನುಡಿದನು:

'ನಾನಿರುವಾಗ ನಿನಗೆ ದೋಷವೆ? ನಡೆ, ಸೀತೆಯನ್ನು ಬಿಟ್ಟು ಬಾ.'

ಲಕ್ಷ್ಮಣನು ಆಗ ಅಣ್ಣದೇವನಲ್ಲಿಟ್ಟಿದ್ದ ವಾತ್ಸಲ್ಯವೆಂಬ ಬಲ್ಗಣ್ಣಿಯಲ್ಲಿ ಕಟ್ಟಲ್ಪಟ್ಟು, ಮಾಡಲೊಲ್ಲೆ ಎಂದು ಹೇಳದಾದನು. ದುಃಖದಿಂದ ಖಿನ್ನನಾಗಿ ಸಾರಥಿ ಕುದುರೆಯೂಡಿ, ಧ್ವಜಪಟಗಳಿಂದ ಸಿದ್ಧಪಡಿಸಿದ ರಥವನ್ನು ಹೊರಗೆ ನಿಲ್ಲಿಸಿ, ನೆಲವೆಣ್ಣ ಮಗಳಾದ ಸೀತೆಯ ಅಂತಃಪುರಕ್ಕೆ ಹೋಗಿ ಆಕೆಯನ್ನು ದೃಷ್ಟಿಸದೆ ದೂರದಲ್ಲಿಯೇ ನಿಂತುಕೊಂಡು,

'ತಾಯೇ ಕಾಡಿಗೆ ಹೋಗಬೇಕೆಂದು ನೀನೇಕೆ ಆಸೆಪಟ್ಟೆ? ರಘುರಾಮನು ಈಗ ನಿನ್ನನ್ನು ತಪೋವನಕ್ಕೆ ಕಳುಹಿಸಿಬರಲು ಹೇಳಿದ್ದಾನೆ. ರಥವು ಸಿದ್ಧವಾಗಿದೆ. ಸಮ್ಮತಿಸಿದರೆ ಹೊರಡಬಹುದು' ಎಂದು ಲಕ್ಷ್ಮಣ ಹೇಳಿದ ಮಾತಿನ ಮರ್ಮವ ತಿಳಿಯದ ಸೀತೆಯು, ಕಾಂತ ಶ್ರೀರಾಮನು ತನ್ನ ಅಭೀಷ್ಟವನ್ನು ನೆರವೇರಿಸಿದನೆಂದು ಅತಿ ಸಂಭ್ರಮಗೊಂಡಳು. ಪ್ರಯಾಣವನ್ನು ನಿಶ್ಚಯಿಸಿಕೊಂಡಳು. ಅತ್ತೆ ಕೌಸಲ್ಯಾದೇವಿಯ ಕಾಲಿಗೆ ಎರಗಿ ಆಶೀರ್ವಾದ ಪಡೆದಳು. ಕೈಕೆ, ಸುಮಿತ್ರಾದೇವಿಯರಿಗೆ ನಮಸ್ಕರಿಸಿದಳು. ಸಖಿಯರನ್ನು ಸಂತೈಸಿ ಬೀಳ್ಕೊಂಡಳು.

ತಪೋವನದ ಋಷಿಗಳಿಗೆ ಮುನಿಪತ್ನಿಯರಿಗೆ ನೀಡಲು ಅಗರು, ಚಂದನ, ಕುಂಕುಮ ಲೇಪನಗಳನ್ನು; ಬಗೆಬಗೆಯ ದಿವ್ಯಾಂಬರಗಳನ್ನು, ಮಣಿಭೂಷಣ ವಸ್ತುಗಳನ್ನು ರಥದಲ್ಲಿಟ್ಟುಕೊಂಡಳು. ಶ್ರೀರಾಮನ ಕಾಲುಗಳಲ್ಲಿದ್ದ ಚೆಂಬೊನ್ನ ಪಾವುಗೆಗಳನ್ನು ತರಿಸಿ ತನ್ನ ಬಳಿಯಲ್ಲಿಟ್ಟುಕೊಂಡಳು. ಅತಿಶಯವಾದ ಸಂತಸದಿಂದ ಸೀತೆ, ತನ್ನ ಆಗಿನ ಸಂತೋಷವು ಶಾಶ್ವತವೆಂದು ಬಗೆದು ರಥವನ್ನು ಹತ್ತಿದಳು.

ತನ್ನ ಅಣ್ಣ ಸೀತೆಯನ್ನುಕಾಡಿನಲ್ಲಿ ಬಿಟ್ಟುಬಾರೆಂದು ತನ್ನಲ್ಲಿ ಹೇಳಿದ ಕ್ರೂರತನವನ್ನು; ಋಷಿಗಳ ಆಶ್ರಮಕ್ಕೆ ಹೋಗಿಬರುವೆ ಎಂಬ ಸೀತಾದೇವಿಯು ಸಂಪೂರ್ಣ ಆನಂದವನ್ನು ಕಂಡು ಸೌಮಿತ್ರಿಯು ಮನಸ್ಸಿನಲ್ಲಿ ಮರುಗಿದನು.ಸುರಿವ ಕಂಬನಿಯನ್ನು ನಿಗ್ರಹಿಸಿಕೊಂಡು ಸಾರಥಿಗೆ ಸೂಕ್ಷ್ಮವಾಗಿ ತಿಳಿಯಹೇಳಿ,ಶ್ರೀಹರಿಯ ಉಂಗುಟದಲ್ಲಿ ಹುಟ್ಟಿದ ಪವಿತ್ರಗಂಗಾನದಿಯ ದಡಕ್ಕೆ ಆ ರಥವನ್ನು ಸಾಗಿಸಿದನು.

* * *

ಜನಮೇಜಯರಾಯನೇ ಕೇಳು. ಸೀತೆಯನ್ನು ಕುಳ್ಳಿರಿಸಿಕೊಂಡು ಹೋಗುತ್ತಿರುವ ರಥಾಗ್ರದಲ್ಲಿರುವ ಪತಾಕೆಯು, ಶ್ರೀ ರಾಮನು ತನ್ನ ಪಟ್ಟದರಸಿಯನ್ನು ಬಿಟ್ಟುಬಿಟ್ಟ ಎಂದು ಹೇಳುವಂತೆ ಅಡಿಗಡಿಗೆ ತಲೆ ಕೊಡಹುತ್ತಿತ್ತು. ಅಯೋಧ್ಯೆಯಲ್ಲಿ ಪ್ರಜೆಗಳು ಗುಂಪು ಗುಂಪಾಗಿ ಸೇರಿ ಈ ಕಾರ್ಯವು ಅತಿ ಕ್ರೂರವಾದುದೆಂದು ಗುಜುಗುಟ್ಟಿದರು. ಅವರ ಮನಸ್ಸುಕರಗಿ ಕಾತರಿಸಿತು. ಲಕ್ಷ್ಮಣನು ವಾಯುವೇಗದಿಂದ ರಥವನ್ನು ಕಾಡುಮಾರ್ಗದಲ್ಲಿ ನಡೆಸಿದನು.

ರಣರಂಗದಲ್ಲಿ ಎದುರಾದವರನ್ನುಕೊಂದು ಪರಾಕ್ರಮವನ್ನು ಮೆರೆಯಲು ಏರುವ ರಥವನ್ನು, ಸೀತೆಯನ್ನು ಕಾಡಿಗೆ ಕಳುಹಿಸಲು ಹತ್ತುವ ಹಾಗಾಯಿತು. ಧರೆಯಲ್ಲಿ ಆರ್ತರನ್ನುರಕ್ಷಿಸಬೇಕಾದ ಬುದ್ಧಿಯು–ನಿರ್ದೋಷಿ ಸೀತಾದೇವಿಯನ್ನು ಕೊಲ್ಲುವುದಕ್ಕೆ ವಿನಿಯೋಗವಾಯಿತು. ಕರುಣವಿಲ್ಲದ ಈ ಬಾಳು ಸುಡಲಿ. ನಿಷ್ಠುರವಾದ ಈ ಕೆಲಸವನ್ನು ಹೇಗೆ ಮಾಡಲಿ? ಇಂತಹ ಘೋರಕಾರ್ಯವನ್ನು ರಾಮನು ನನಗೇಕೆ ಆಜ್ಞಾಪಿಸಿದನೋ? ಎಂದು ಲಕ್ಷ್ಮಣನು ಮಮ್ಮಲ ಮರುಗಿದನು.

ದಾರಿಯಲ್ಲಿ ನರಿಯು ಒರಲಲು, ಕುಳಿತಿದ್ದ ಜಿಂಕೆಯುಎದ್ದು ಅಡ್ಡವಾಗಿ ಹೋಗಲು,ಬಲಗಣ್ಣು ಅದುರಲು ಸೀತೆಯು ಭಯಗೊಂಡು ಹೇಳಿದಳು:

'ಲಕ್ಷ್ಮಣನೇ, ಈ ಅಪಶಕುನಗಳನ್ನು ನೋಡು. ಇವನ್ನು ನೋಡಿ ನನ್ನ ಮನಸ್ಸು, ಧೈರ್ಯ ಗುಂದಿದೆ. ಇನ್ನು ಮುಂದೆ ಶ್ರೀರಾಮನ ಆಯುಷ್ಯ, ಐಶ್ವರ್ಯ ವೃದ್ಧಿಸಲಿ, ಅಸುರರನ್ನು ಗೆದ್ದು ರಾಘವ ನಮ್ಮನ್ನು ಕಾಪಾಡಲಿ.'

ಆಗ ಸನ್ನುತ ಶ್ರೀರಾಮನ ಕೀರ್ತಿಯೆಂಬಂತೆ ಶುಭ್ರವಾದ ಗಂಗಾನದಿಯು ಕಾಣಿಸಿತು. ಅದು ತ್ರಿಮೂರ್ತಿಗಳಲ್ಲಿ ಹುಟ್ಟಿ, ಮುಕ್ಕಣ್ಣನ ಜಡೆಯನ್ನು ಸೇರಿ, ಮೂರು ಲೋಕಗಳಲ್ಲಿ ಸಂಚರಿಸುವ ಸುರನದಿ. ಅದುಮುಕ್ಕೋಟಿ ದೇವತೆಗಳು ಸ್ನಾನ ಮಾಡುವ, ಜನರ ಪಾಪವನ್ನು ನಾಶಮಾಡುವ ಪವಿತ್ರನದಿ.

ತರತರದ ತೆರೆಗಳ ಲೀಲೆಯಿಂದ, ರಾಜಹಂಸಗಳ ಕ್ರೀಡೆಯಿಂದ, ಬೊಬ್ಬುಳಿಯ ಸುಳಿಗಳಿಂದ, ಮೊಗೆಮೊರೆದು ಗರ್ಜಿಸುವ ಪ್ರವಾಹದಿಂದ ಕೂಡಿದ; ತಿರುತಿರುಗಿ ಸುಳಿವ ಜಲಜಂತುಗಳ ವಾಸಸ್ಥಾನವಾದ, ಮುನಿ ಜನಗಳು ಕೂಡಿ ಸೇವಿಸಿ ಧ್ಯಾನಮಾಡುವ ಗಂಗಾನದಿಯ ತೀರಕ್ಕೆ ಸೀತಾದೇವಿಯು ಬಂದಳು. ಆ ನದಿಯ ದಡದ ವನಗಳಲ್ಲಿ ತೆಂಗು ಅಡಿಕೆ ಮೊದಲಾದ ಮರಗಳು ತಮ್ಮ ಫಲದ ಭಾರದಿಂದ ಭೂಮಿಗೆ ತಲೆಬಾಗಿ ನಿಂತಿರುವಹಾಗೆ ಮನೋಹರವಾಗಿ ಕಾಣುತ್ತಿದ್ದವು.

ಲಕ್ಷ್ಮಣನು ರಥದಿಂದಿಳಿದು ಮಂದಾಕಿನಿಗೆ ನಮಸ್ಕರಿಸಿದನು. ಅನಂತರ ದೋಣಿಯಲ್ಲಿ ಆ ದೇವನದಿಯನ್ನು ದಾಟಿದನು. ಸೀತೆ ಸಹಿತ ನಿರ್ಮಲ ತೀರ್ಥದಲ್ಲಿ ಮಿಂದನು. ಒಳಗೊಳಗೆ ವ್ಯಥೆಪಡುತ್ತ, ನಿಟ್ಟುಸಿರು ಬಿಡುತ್ತ, ಚಿಂತಿಸುತ್ತ ಅಡಿಯಿಡಲು ಅಸಾಧ್ಯವೆನ್ನುವ ಉಗ್ರ ಮೃಗಪಕ್ಷಿಗಳ ಕಾಡನ್ನು ಹೊಕ್ಕನು. ಆ ಕಾಡು ಹಕ್ಕಿಗಳ ಚೀತ್ಕಾರದಿಂದ, ದಟ್ಟವಾದ ಹುಲ್ಲಿನಿಂದ, ಕಾಲಿಡಲು ಒತ್ತಿ ಕಾಡುವ ನುರುಜುಗಲ್ಲುಗಳಿಂದ, ಮೊಲಗಳಿಂದ ಕೂಡಿತ್ತು. ಅದು ಜಿಂಕೆ, ಮುಂಗಸಿ,ಇಲಿ, ಹಾವು, ಆನೆ, ತೋಳ, ಕಾಡುಹಂದಿ, ಹುಲಿಗಳಿಂದ ಭಯಂಕರವಾಗಿ ಕಾಣುತ್ತಿತ್ತು.

ಮುಂದೆ ಕಾಡಿನಲ್ಲಿ ಕಂಡ ಘೋರ ಗುಹೆಗಳು ನಡೆಯಲು ಅಸಾಧ್ಯ ಎಂಬ ಭೀತಿಯನ್ನುಂಟು ಮಾಡಲು, ಸೀತೆಯು ನಡುನಡುಗಿ ಶ್ರೀರಾಮನಾಮವನ್ನು ಜಪಿಸುತ್ತ ವ್ಯಸನದಿಂದ ನುಡಿದಳು:

'ಎಲೈ ಸೌಮಿತ್ರಿ, ಈ ಅರಣ್ಯ ನಡೆದಾಡಲು ಅಸಾಧ್ಯವಾಗಿದೆ. ಇಲ್ಲಿ ಯಾವುದೇ ಪುಣ್ಯಾಶ್ರಮವಾಗಲಿ, ನಾರುಮಡಿಯುಟ್ಟ ಮುನಿಪತ್ನಿಯರಾಗಲಿ, ವಟುಗಳಾಗಲಿ, ಶ್ರುತಿ ಘೋಷ, ಹೋಮ ಧೂಮಗಳಾಗಲಿ ಕಾಣುತ್ತಿಲ್ಲವಲ್ಲ. ಅಂತಹ ಕಡೆಗೆ ಕರೆದುಕೊಂಡು ಹೋಗದೆ ದಾರುಣವಾಗಿರುವ ಕಟ್ಟಡವಿಗೇಕೆ ಕರೆದುಕೊಂಡು ಬಂದಿರುವೆ? ಹೇಳು ತಂದೆಯೆ.

'ಸೌಮಿತ್ರಿಯೇ, ಪಾವನಕೆ ಪಾವನನಾದ, ಮಂಗಳಕೆ ಮಂಗಳವಾದ ನನ್ನ ಜೀವದೊಡೆಯ ರಾಘವನ ಪಾದಕಮಲಗಳನ್ನು ಬಿಟ್ಟು ಬಂದ ನಂತರ, ಈವನದಲ್ಲಿ ಪುಣ್ಯಾಶ್ರಮಗಳು ಕಾಣುವುದುಂಟೇ? ಕಮಲವನ್ನುಬಿಟ್ಟುಬಂದ ದುಂಬಿಗೆ ಗೊಬ್ಬಳಿಯ ಹೂವಿನಲ್ಲಿ ಮಧು ದೊರೆಯುವುದೇ?'

ಎಲೈ ಜನಮೇಜಯರಾಯನೇ ಕೇಳು, ಅವನಿಸುತೆ ಆಡಿದ ಮಾತಿಗೆ ಉತ್ತರವನ್ನು ಹೇಳಲಾಗದೆ ಲಕ್ಷ್ಮಣನು ಮನಸ್ಸಿನಲ್ಲಿಯೇ ತುಂಬಾ ನೊಂದು ಕೊರಗಿದನು. ಶ್ರೀರಾಮನು ಹೇಳಿದ ಕಷ್ಟಕರವಾದ ಮಾತನ್ನು ಸೀತೆಗೆ ಹೇಳಲೆ ಅಥವಾ ಹೇಳದಿರಲೆ? ನಿಷ್ಠುರದಲ್ಲಿ ತರಣಿಕುಲ ಸಾರ್ವಭೌಮನರಾಣಿ ಸೀತಾದೇವಿಯನ್ನುಅರಣ್ಯದಲ್ಲಿ ಬಿಟ್ಟು ಹೋಗಲೆ? ಹೋಗದಿರಲೆ? ಹಿಂದಿರುಗಿ ಹೋಗದಿದ್ದರೆ ಅಣ್ಣ ರಾಮಚಂದ್ರನು ಏನುಹೇಳುವನೋ! ಅಯ್ಯೋ! ಎಂದು ಬೆಂದು ಬೇಗುದಿಗೊಂಡನು. ಅವನ ಒಡಲಲ್ಲಿ ಬಾಣವನ್ನು ಚುಚ್ಚಿ

ತಿರುಗಿಸಿದ ಹಾಗಾಯಿತು. ತುಟಿಗಳು ಅದುರಿ, ಉಸಿರುಗಟ್ಟಿ ಅಂಗಾಂಗಗಳು ಕಂಪಿಸಿದವು. ಧೈರ್ಯಗುಂದಿತು. ಸೆರೆವಿಡಿದು ಮಾತು ಕಟ್ಟಿತು. ಕ್ರೂರ ಕೆಲಸವನ್ನು ಉಸುರಲಾರದೆ ಕಂಬನಿದುಂಬಿ ಸೀತೆಗೆ,

'ದೇವಿಯೇ ಕೇಳು, ರಾಮನು ಲೋಕಾಪವಾದವು ಆವರಿಸಿಕೊಳ್ಳಲು ಅಸಹ್ಯ ಪಟ್ಟುಕೊಂಡನು. ನಿನ್ನನ್ನು ಒಲ್ಲದೆ ಕಾಂತಾರಕ್ಕೆ ಬಿಟ್ಟು ಬಾ ಎಂದು ನನ್ನನ್ನು ನೇಮಿಸಿದನು. ಅದನ್ನು ನಾನು ಇದುವರೆಗೆ ಹೇಳಿರಲಿಲ್ಲ. ಆ ಸ್ವಾಮಿಯ ಆಜ್ಞೆಯನ್ನು ಮೀರಲಾರದೆ, ಈ ಕಾಡಿಗೆ ನಿನ್ನನ್ನು ಕರೆದುಕೊಂಡು ಬಂದೆನು. ಮೆಲ್ಲ ಮೆಲ್ಲಗೆ ಯಾವ ಕಡೆಗಾದರೂಹೊಗು.'

**ಫಲಿತ ಬಾಳೆಗಿಡ ಧರೆಗೆ ಬಿತ್ತು**

ಲಕ್ಷ್ಮಣನ ಮಾತುಗಳು ಕಿವಿಗೆ ಬೀಳುವ ಮೊದಲೆ ಸೀತೆಯು ಸಂಕಟಕ್ಕೊಳಗಾಗಿ ನಡನಡುಗಿ–ಬಿರುಗಾಳಿಯ ಬಡಿತಕ್ಕೆ ಭೂಮಿಗೆ ಬೀಳುವ ಫಲಿತ ಬಾಳೆಗಿಡದ ಹಾಗೆ–ಧರೆಗೆ ಬಿದ್ದು ಮೂರ್ಛೆಹೋದಳು. ತುಂಬಾ ಮರುಗಿದ ಲಕ್ಷ್ಮಣನು ತಣ್ಣೀರನ್ನು ಚಿಮುಕಿಸಿ, ತಾವರೆಯ ಎಲೆಗಳಿಂದ ಕೊಡೆಹಿಡಿದು ಶೈತ್ಯೋಪಚಾರ ಮಾಡುತ್ತ ರೋದಿಸಿದನು.

ಸೀತೆಯು ಮೆಲ್ಲನೆ ಕಣ್ಣುತೆರೆದು ನಿಟ್ಟುಸಿರು ಬಿಟ್ಟು ದೈನ್ಯದಿಂದ ಲಕ್ಷ್ಮಣನನ್ನು ನೋಡಿ,

'ಅಯ್ಯೋ! ನನ್ನ ಕೊರಳನ್ನು ಕೊಯ್ದುಹಾಕದೆ ಈ ರೀತಿ ಕಾಡಿನಲ್ಲಿ ನನ್ನನ್ನು ಬಿಡಲು, ನಾನು ಮಾಡಿದ ಅಪರಾಧವೇನು? ಕಯ್ಯಾರ ಕತ್ತಿಯನ್ನು ಕೊಟ್ಟು ನನ್ನನ್ನು ಕಡಿದು ಹಾಕೆಂದು ಹೇಳದೆ, ಕಾಡಿಗೆ ಬಿಟ್ಟು ಬಾ ಎಂದು ಹೇಳಿದನೇ? ಅಯ್ಯಯ್ಯೋ, ರಾಘವನು ಕರುಣಾನಿಧಿ!

'ಶ್ರೀರಾಮನು ನನ್ನನ್ನು ಬಿಟ್ಟನೇ! ಮರಳಿ ಸೇರಿಸಿಕೊಳ್ಳುವುದಿಲ್ಲವೇ? ಪ್ರಖ್ಯಾತವಾದ ನನ್ನ ಜೀವನಕ್ಕೆ ಸಂಚಕಾರವನ್ನುಂಟು ಮಾಡಿದನೇ? ಎಲೈ ಲಕ್ಷ್ಮಣ, ನಿನಗೆ ಘೋರ ಅರಣ್ಯದಲ್ಲಿ ಬಿಟ್ಟುಬರಲು ಅಪ್ಪಣೆ ನೀಡಿದನೇ? ನಾನು ಇನ್ನು ಮುಂದೆ ಕಾಡಿನಲ್ಲಿ ಕಣ್ಣು ಕಾಣದಂತಾದೆ. ಮನೋವಲ್ಲಭನು ಅಗಲಿದ ಮೇಲೆ ಕಾಡಿನಲ್ಲಿ ನಾನು ಯಾರೂ ಇಲ್ಲದ ಪಿಶಾಚಿಯಂತಾದೆ. ಹೇಗೆ ಇರುವೆನೋ.... ಕೆಟ್ಟೆನಲ್ಲಾ' ಎಂದು ಸೀತೆಯು ಗೋಳಿಡುತ್ತ 'ಯಾವಾಗ ಶ್ರೀರಾಮನು ಕೌಶಿಕ ಮುನಿಯೊಡನೆ ಮಿಥಿಲೆಗೆ ಬಂದು ಶಿವಧನುಸ್ಸನ್ನು ಮುರಿದು ನನ್ನನ್ನು ಮದುವೆಯಾದನೋ, ಆ ದಿನದಿಂದಲೂ ನನ್ನನ್ನು ರಮಿಸುತ್ತಿದ್ದನು. ನಾನು ಅಗಲಿ ಹೋದರೆ ಶ್ರೀರಾಮನು ಸುಖವನ್ನು ಪಡೆಯದೆ ವಿರಹದಲ್ಲಿ ನವೆದು ಹೋಗುತ್ತಿದ್ದನು. ನನಗೋಸ್ಕರವಾಗಿ ಕಪಿವೃಂದವನ್ನು ಕೂಡಿಸಿ, ಸಮುದ್ರಕ್ಕೆ ಸೇತುವೆ ಕಟ್ಟಿ, ರಾವಣನನ್ನು ಗೆದ್ದನು. ನನ್ನನ್ನು ಅಗ್ನಿ ಮುಖದಿಂದ ಪರೀಕ್ಷಿಸಿದನು. ಅಂತಹವನು ನನ್ನಲ್ಲಿ ಅಪರಾಧವನ್ನು ಹೊರಿಸಿದನೇ?' ಎಂದು ಅತಿಯಾಗಿ ರೋದಿಸುತ್ತ ಸೀತೆಯು ಲಕ್ಷ್ಮಣನ ಗುಣ ವಿಶೇಷವನ್ನು ನೆನೆದು ಪ್ರಶ್ನಿಸಿದಳು.

'ಎಲೈ ಲಕ್ಷ್ಮಣನೇ, ಮೊದಲು ನಾವು ಕಾಡಿಗೆ ಬಂದಿದ್ದಾಗ, ಕಲ್ಮುಳ್ಳಿಡಿದ ಕಾಡಿನಲ್ಲಿ ನನ್ನನ್ನು ಉಪಚರಿಸಿದೆ, ಹಲ್ಲುಕಡಿದು ಗರ್ಜಿಸಿಬಂದ ವಿರಾಧನೆಂಬ ರಾಕ್ಷಸನನ್ನು ಕೊಂದುಹಾಕಿದೆ. ನಾನು ಬಲಾತ್ಕಾರದಿಂದ ಪಂಚವಟಿ ಕ್ಷೇತ್ರದಿಂದ ಶ್ರೀರಾಮನ ಬಳಿಗೆ ಹೋಗೆನ್ನಲು ಹೋದೆ, ನಿನ್ನ ನಲ್ಮೆಯನ್ನು ಮರೆಯುವೆನೇ? ಎಲ್ಲ ಮೈದುನರಂತಲ್ಲದವನಾದ ತಂದೆಯೇ, ನನ್ನನ್ನು ಕಾಡಿನಲ್ಲಿ ಬಿಟ್ಟುಹೋಗಲು ಮನಸ್ಸು ಒಪ್ಪುವುದೇ?

'ಮೋಹನದ ಚೆಲ್ವಿನ ರಾಶಿಯಂತಿರುವ ರಾಘವನ ಸಿರಿಮೊಗವನ್ನು ನೋಡದೆ, ನಾನು ಹೇಗೆ ಇರಲಿ? ಘನ ಪುಣ್ಯನಾಮನಾದ ಶ್ರೀರಾಮನನ್ನು ಮನದಣಿಯೆ ರಮಿಸದೆ ನಾನು ಹೇಗೆ ಜೀವಿಸಲಿ?'

**ಕರುಣಾಳು ರಾಘವನಲ್ಲಿ ತಪ್ಪಿಲ್ಲ**

ಎಲೈ ಜನಮೇಜಯರಾಯನೇ ಕೇಳು. ಹೀಗೆ ಸೀತೆಯು ಶ್ರೀರಾಮನ ರಮಣೀಯ ಗುಣಗಳನ್ನು ನೆನೆನೆನೆದು ಹಂಬಲಿಸಿ ಹಾವುಕಡಿದ ಹಸುಳೆಯಂತೆ ಮೂರ್ಛೆಗೊಂಡು, ಮತ್ತೆ ಎಚ್ಚರಗೊಳ್ಳುತ್ತಿದ್ದಳು. ಆಗ ಲಕ್ಷ್ಮಣನು,

'ತಾಯೇ ನಾನು ನಿನ್ನನ್ನು ಬಿಟ್ಟು ಅಯೋಧ್ಯೆಗೆ ಹೋಗಲಾರೆನು. ಹೋಗದೆ ಇರಲಾರೆನು. ಶೋಕಾವಸ್ಥೆಯಿಂದ ಇಲ್ಲಿಯೇ ಇದ್ದರೆ ಅಣ್ಣನಾದ ರಾಮನು ಏನು ಮಾಡುವನೊ, ಅಯ್ಯೋ, ನಾನೇನು ಮಾಡಲಿ'.

'ತಂದೆ ಲಕ್ಷ್ಮಣ, ನಿನ್ನ ಸಂಗಡ ಮಾತನಾಡಿ ಫಲವೇನು? ಹಿಂದೆ ಪಂಚವಟಿಯಲ್ಲಿ ಬಿಟ್ಟು ಹೋದಂತೆ, ಈಗ ನನ್ನನ್ನು ಬಿಟ್ಟು ಹೋಗು. ಪ್ರಾಣ ಕಳೆದುಕೊಳ್ಳೋಣವೆಂದರೆ, ನನ್ನ ಬೆಂದೊಡಲಿನಲ್ಲಿ ಗರ್ಭವಿದೆ. ಕಾಡಿನಲ್ಲಿ ಬಂದ ಕಷ್ಟಗಳನ್ನು ಅನುಭವಿಸುವೆನು. ಕೌಸಲ್ಯದೇವಿಗೆ ನಾನು ವಂದಿಸಿದೆನೆಂದು ಹೇಳು. ಆಕೆಯ ಮಗ ಏನೂಅಪರಾಧವಿಲ್ಲದ ನನ್ನನ್ನು ತೊರೆದಿರುವುದನ್ನು ತಿಳಿಸು.

'ಎಲೈ ಸೌಮಿತ್ರಿಯೇ, ಏಕೆ ನಿಂತಿರುವೆ? ಹೋಗು. ಇಲ್ಲಿ ತಡಮಾಡಿದರೆ. ಕಾಕುಸ್ಥನು ಕೋಪಗೊಳ್ಳುವುದಿಲ್ಲವೇ? ನನಗೆ ಈ ಕಾಡಿನಲ್ಲಿ ಉಗ್ರಜಂತುಗಳ ನೆರವಿದೆ. ರಘುನಾಥನು ಏಕಾಕಿಯಾಗಿರುವನು. ಲೋಕದ ಅರಸು ಏನು ಮಾಡಿದರೂ ಆತನ ಪ್ರಜೆಗಳು, ಸೇವಕರು ಇದು ಸರಿ ತಪ್ಪು ಎಂದು ಹೇಳುವುದಿಲ್ಲವೇ? ಭರತ ಶತ್ರುಘ್ನರು ಇದಕ್ಕೆ ಒಪ್ಪಿದರೇ? ಹನುಮಂತ ಇರುವನೇ? ವಿಭೀಷಣ ಆರ್ತರ ನೋವನ್ನು ತಿಳಿದಿರುವನೇ? ಸುಗ್ರೀವನಿಗೆ ಕರುಣೆಯಿರುವುದೇ?ಶ್ರೀರಾಮನಿಗೆ ಬುದ್ಧಿಯನ್ನು ಹೇಳುವ ಮಂತ್ರಿಗಳು ಯಾರಿರುವರು? ಮೈದುನನಾದ ನೀನೇ ಒಪ್ಪಿ ಘೋರಾಟವಿಗೆ ಕರೆದುಕೊಂಡು ಬಂದ ನಂತರ ನಿನ್ನನ್ನು ಕಳುಹಿಸದೆ ದುಃಖಿಸಿದರೆ ಪ್ರಯೋಜನವೇನು?

'ಕಡೆಗೆ ಕರುಣಾಳು ರಾಘವನಲ್ಲಿ ತಪ್ಪಿಲ್ಲ. ಬಹಳ ಪಾಪವನ್ನು ಮಾಡಿ ಹೆಣ್ಣಾಗಿ ಹುಟ್ಟಿ, ನನ್ನೊಡಲನ್ನು ಕಾಪಾಡಿಕೊಂಡಿರುವುದೇ ನನ್ನ ಅಪರಾಧವಾಗಿದೆ. ಇನ್ನು ಸಾಕು. ತಡ ಮಾಡಬೇಡ. ನೀನು ಇಲ್ಲಿರಬೇಡ. ಹೊರಡು. ನಿನಗೆ ಮಾರ್ಗದಲ್ಲಿ ಅಡಿಗಡಿಗೆ ಶುಭವಾಗಲಿ'.

ಸೀತೆಯು ಕಂಬನಿ ಮಿಡಿದು ಆರ್ತಳಾಗಿ ನುಡಿಯುತ್ತಿರಲು; ಸೌಮಿತ್ರಿಯು ಆ ವಿಪಿನದ ಅಭಿಮಾನಿ ದೇವತೆಗಳನ್ನುದ್ದೇಶಿಸಿ, ಕೈ ಮುಗಿದು ಪ್ರಾರ್ಥಿಸಿದನು:

'ಎಲೈ ವನದೇವಿಯೇ, ವೃಕ್ಷಗಳೇ, ಮೃಗಗಳೇ, ಕ್ರಿಮಿಕೀಟಗಳೇ, ಪಕ್ಷಿಗಳೇ ಪುಷ್ಪಲತೆಗಳೇ, ಹುಲ್ಲು ಹೊದರುಗಳೇ, ಪಂಚಭೂತಗಳೇ, ದಿಗ್ದೇವತೆಗಳೇ ಸೀತಾದೇವಿಯನ್ನು ಕಾಪಾಡಿಕೊಳ್ಳಿ.

'ಎಲೈ ಧರ್ಮದೇವತೆ ಜಗಜ್ಜನನಿ ಜಾಹ್ನವಿ ದೇವಿಯೇ–ನನ್ನ ತಾಯಿಯಾದ ಜಾನಕಿಯನ್ನು ಸಲಹು. ಅಮ್ಮಾ ಭೂಮಿ ತಾಯಿಯೇ ನಿನ್ನ ಮಗಳಾದ ಸೀತೆಯು ಇಲ್ಲಿಯೇ ಇರುವಳು, ರಕ್ಷಿಸು. ನಾನು ಮಾಡಬೇಕಾದ ಕೆಲಸ ಇನ್ನೇನಿದೆ? ನನ್ನ ಈ ನಿಷ್ಠುರವಾದ

ಹಾಳು ದೇಹವನ್ನು ಇಬ್ಬಗಿಯಾಗಿ ಸೀಳಿಬಿಡಬೇಕು. ಈ ಲೋಕದಲ್ಲಿ ಕರುಣವಿಲ್ಲದವರ ಬಾಳು ಸುಡಲಿ' ಎಂದು ಹೇಳಿಕೊಳ್ಳುತ್ತ ಲಕ್ಷ್ಮಣನು ಸೀತಾದೇವಿಗೆ ಪ್ರದಕ್ಷಿಣೆ ಬಂದು, ನಮಸ್ಕಾರಮಾಡಿ ಅಪ್ಪಣೆಪಡೆದು ಹೊರಡಲು ಅನುವಾದನು.

ಅವನ ಮನಸ್ಸು ಧೂಳಿನಲ್ಲಿ ಹೊರಳುತ್ತಿರುವ ಸೀತೆಯ ಕಡೆಗೂ, ಯಾವಾಗಲೂ ಅಗಲಿರದ ಅಣ್ಣನ ಕಡೆಗೂ ಹಿಂದು ಮುಂದಕ್ಕೆ ಎಳೆದಾಡುತ್ತ ತೂಗುಯ್ಯಾಲೆಯಾಡಿತು. ತಾನು ಮುಂದೆ ಹೋಗುತ್ತಿರುವುದನ್ನು ಕಂಡು ಬಾಯಾರಿ ಚೀರುವ, ಕಡಲಿಡುವ ಕಂಬನಿಯಲ್ಲಿ ಮುಳುಗಿ ಮೂರ್ಛೆಹೋಗಿ ನೆಲಕ್ಕೆಬಿದ್ದು ಧೂಳಿನಲ್ಲಿಹೊರಳಿ ಕಂಗೆಟ್ಟು ತನ್ನನ್ನೇ ನೋಡುತ್ತಿರುವ ಸೀತೆಯನ್ನು ಲಕ್ಷ್ಮಣನು ಹಿಂದಿರುಗಿ ನೋಡಿದನು. ಬಿಟ್ಟು ಹೋಗುವ ದುಃಖದಿಂದ ಮಾರ್ಗದಲ್ಲಿ ದಿಟ್ಟಿ ಗೆಟ್ಟಂತಾದನು. ಅಡಿಗಡಿಗೆ ಹಿಂತಿರುಗಿ ನೋಡಿ ಕಾಂತಿಗೆಟ್ಟನು. ಸೀತೆಯನ್ನು ಬಿಡಲಾರದೆ ನಿಟ್ಟುಸಿರಿಟ್ಟು ಬಳಲಿದನು. ಮುಂದಕ್ಕೆ ಹೋಗಲಾರದೆ ಗಟ್ಟಿಯಾಗಿ ಅಳುತ್ತ ಸಂಕಟಕ್ಕೊಳಗಾದನು.

ಅರಸ ಜನಮೇಜಯನೇ ಕೇಳು. ಅರಣ್ಯದಲ್ಲಿದ್ದ ಪಕ್ಷಿಗಳು, ಮೃಗಜಂತುಗಳು ಏಕಾಕಿನಿಯಾಗಿ ದುಃಖದಿಂದ ಬಳಲುತ್ತಿರುವ ಧರಣಿಸುತೆಯನ್ನು ಬಳಸಿ ನಿಂತುಕೊಂಡವು. ಅವಳಂತೆಯೇ ಕಂಗೆಟ್ಟು ಜೋಲುಮುಖಗೊಂಡು ಕಣ್ಣೀರನ್ನು ಸುರಿಸಿ ತಮ್ಮಲ್ಲಿಯ ನಿಜವೈರವನ್ನು ಮರೆತವು. ಪುಲ್ಮೇವುಗಳನ್ನು ತೊರೆದು ಕೊರಗಿದವು. ಅವುಗಳ ಕೂಡೆ ಮರಬಳ್ಳಿಗಳು ಬಾಡಿ ಸೊರಗಿದವು. ಶೋಕಭಾರದಿಂದ ಕಲ್ಮರಗಳು ಕರಗುತ್ತಿದ್ದವು. ಜಗತ್ತಿನಲ್ಲಿ ಉತ್ತಮರಿಗೆ ಆದ ಹಾನಿಯನ್ನು ಸೈರಿಸುವವರು ಯಾರಾದರೂ ಇರುವರೆ?

ರಾಘವನರಾಣಿ ಸೀತಾದೇವಿಯು ದುಃಖದಿಂದ ಸಂತಾಪ ಪಡುತ್ತಿರಲು. ಚಮರೀಮೃಗಗಳು ತಮ್ಮ ಬಾಲಗಳಿಂದ ಚಾಮರವನ್ನು ಬೀಸಿದವು. ಆನೆಗಳು ಎಳೆದಳಿರ ಮೃದುತಲ್ಪವನ್ನು ಹಾಸಿಕೊಟ್ಟವು. ಸಾರಸಗಳು ತಮ್ಮ ರೆಕ್ಕೆಗಳನ್ನು ನೆನೆಸಿ ತಂದು ನೀರನ್ನು ಚಿಮುಕಿಸಿದವು. ಆಕಾಶದಲ್ಲಿ ಹಾರಾಡುವ ಹಂಸಗಳು ಸೀತೆಯ ಸಿರಿಮುಖಕ್ಕೆ ಬಿಸಿಲಾಗದಂತೆ ರೆಕ್ಕೆಯನ್ನು ಅಗಲಿಸಿ ನೆರಳಾಗುವಂತೆ ಮಾಡಿದುವು.

ಗಂಗಾನದಿಯ ಅಲೆಗಳಿಗೆ ಸಿಕ್ಕಿ ಬರಲಾಗದಿದ್ದರೂ, ಆ ನದಿಯಲ್ಲಿ ಅರಳಿದ ತಾವರೆ ಹೂವಿನ ಸುವಾಸನೆಯ ಅತಿ ಭಾರವನ್ನು ಹೊರಲಾಗದಿದ್ದರೂ; ಸೀತಾದೇವಿಯ ಪರಿತಾಪವನ್ನು ಹೋಗಲಾಡಿಸದೆ ಇರಬಾರದೆಂದು ಭಾವಿಸಿ ಮೆಲ್ಲಮೆಲ್ಲನೆ ಬಂದು ತಂಗಾಳಿ ಬೀಸಿತು. ಚೇತರಿಸಿಕೊಂಡ ಪೃಥ್ವಿಯಾತ್ಮಜೆ ಸೀತಾದೇವಿಯು ತನಗೆ ಇನ್ನು ದಿಕ್ಕಾವುದು ಎಂದು ದೆಸೆ ದೆಸೆಗೆ ನೋಡಿದಳು. ಮಿಥಿಲೇಂದ್ರನ ವಂಶದಲ್ಲಿ ಹುಟ್ಟಿ, ರವಿಕುಲದ ದಶರಥನ ಸೊಸೆಯಾಗಿ–ಅಯ್ಯೋ ವಿಧಿಯು ಕಟ್ಟಡವಿಯಲ್ಲಿ ದುಃಖಪಡುವಂತೆ ಮಾಡಿತೇ ಎಂದು ಕಲ್ಮರಗಳು ಕರಗುವಂತೆ ಗೋಳಾಡಿದಳು.

ಕೋಪವನ್ನು ಬಿಟ್ಟು, ಆತ್ಮಹತ್ಯೆ ಮಾಡಿಕೊಳ್ಳಲೆಂದರೆ ಬಸುರಿಯಾಗಿರುವ ಕಾರಣ ಭ್ರೂಣಹತ್ಯಾ ದೋಷಕ್ಕೆ ಒಳಗಾಗುವೆನು. ಈಗೇನು ಮಾಡಲಿ? ಯಾರಿಗೆ ನನ್ನ ಅಳಲನ್ನು ಹೇಳಿಕೊಳ್ಳಲಿ ಎಂದು ಮೆಲ್ಲಗೆಎದ್ದಳು. ಹರಿಣಾಕ್ಷಿಯಾದ ಸೀತೆಯು ಕಲ್ಲುಮುಳ್ಳುಗಳ ಮೇಲೆ ನಡೆದು ತನ್ನ ಮೃದುಪಾದಗಳಿಂದ ಸುರಿವ ರಕ್ತ ನೆಲಕ್ಕೆ ಹರಿಯುತ್ತಿರಲು ನಿಧಾನವಾಗಿ ಕಾಡಿನಲ್ಲಿ ಸಾಗಿದಳು. ಅರಸ ಜನಮೇಜಯರಾಯನೇ ಹೆಣ್ಣಾಗಿ ಈ ಜಗದಲ್ಲಿ ಹುಟ್ಟಬಹುದೇ?

**ಕರುಣಾಳು ವಾಲ್ಮೀಕಿ**

ಆ ಸಮಯಕ್ಕೆ ಸರಿಯಾಗಿ ಯಾಗಕ್ಕೆಂದು ಯಜ್ಞಸ್ತಂಭವನ್ನು ಅರಸುತ್ತ ಆ ಕಾಡಿಗೆ ಸನ್ನುತ ತಪೋಧನರಾದ ವಾಲ್ಮೀಕಿ ಋಷಿಯು ತನ್ನ ಶಿಷ್ಯರೊಡಗೂಡಿ ಬಂದರು. ಘೋರವಾದ ಕಾಡಿನಲ್ಲಿ ಏಕಾಂಗಿಯಾಗಿ, ದಾರಿಕಾಣದೆ ದುಃಖದಿಂದ ಭ್ರಾಂತಳಾಗಿ–ಗ್ರೀಷ್ಮ ಋತುವಿನ ಝಳದಿಂದ ಕಂದಿರುವ ವನದೇವತೆಯಂತೆ–ಗದ್ಗದ ಸ್ವರದಿಂದ ರೋದಿಸುತ್ತಿರುವ ಸೀತೆಯನ್ನು ಕಂಡರು.

ಕರುಣಾಳುವಾದ ವಾಲ್ಮೀಕಿಯು ಇವಳಾರು? ಈ ಕಾಡಿನಲ್ಲಿ ಒಬ್ಬಳೇಇರಲು ಕಾರಣವೇನು? ಎಂದು ತಿಳಿಯಲು ಆಕೆಯ ಹತ್ತಿರಕ್ಕೆಬಂದು ಮಾತಾಡಿಸಿದರು.

'ಎಲೈ ತಾಯೇ, ನೀನಾರು? ನಾನು ನೋಡಿದ ಗುರುತಿರುವುದು. ಅಯ್ಯೋ, ಭಯಂಕರ ಕಾಡಿಗೆ ಒಬ್ಬಳೇ ಹೇಗೆ ಬಂದೆ? ಹೇಳಮ್ಮ. ಭಯಗ್ರಸ್ತಳೇ. ಹೆದರಿಕೊಳ್ಳಬೇಡ, ನಾನು ವಾಲ್ಮೀಕಿ. ಅತಿ ಶೋಕದಿಂದಿರುವ ಆರ್ತರನ್ನು ಕಂಡು ವಿಚಾರಿಸದೆ ಹೋಗಲಾರೆ.'

ಕರುಣರಸದ ಹೊನಲನ್ನು ಕೇಳಿ ಸೀತೆಗೆ ಹರ್ಷ ತುಂಬಿಬಂದು, ದುಃಖ ಇಮ್ಮಡಿಸಿತು. ಲಜ್ಜೆ ಬೆರೆತುಕೊಂಡಿತು. ಗದ್ಗದ ಸ್ವರದಿಂದ,

'ನಾನು ಸೀತೆ. ಲೋಕಾಪವಾದಕ್ಕೆ, ಅಪರಾಧಿಯಲ್ಲದ ನನ್ನನ್ನು ತರಣಿಕುಲ ಸಂಭವ ಶ್ರೀರಾಮನು ಬಿಟ್ಟುಬಿಟ್ಟನು' ಎಂದು ಕಂಠ ಬಿಗಿದು ಸುಮಿತ್ರಾತ್ಮಜನು ಈ ಕಾಡಿನಲ್ಲಿ ನನ್ನನ್ನು ಇರಿಸಿಹೋದನು. ಪ್ರಾಣವನ್ನು ತೊರೆಯುವೆನೆಂದರೆ ಗರ್ಭ ಒಡಲಲ್ಲಿದೆ. ಏನು ಮಾಡಲಿ?' ಎಂದು ಮುನಿಯ ಪಾದದಮೇಲೆ ಎರಗಿದಳು.

'ದೇವಿಯೇ, ಶೋಕವನ್ನು ಬಿಡು. ನೀನು ಅವಳಿ ಮಕ್ಕಳನ್ನು ಪಡೆಯುವೆ. ಇನ್ನು ಸಂದೇಹಕ್ಕೆ ಒಳಗಾಗಬೇಡ. ನಾವು ಜನಕನಿಗೆ ದೂರದವರಲ್ಲ. ನೀನು ನಮ್ಮ ಆಶ್ರಮಕ್ಕೆ ಬಂದು ಸುಖದಲ್ಲಿದ್ದರೆ, ನಿನ್ನ ಬಯಕೆಯನ್ನೆಲ್ಲ ನಡೆಸಿಕೊಡುತ್ತೇನೆ. ನಿನ್ನನ್ನು ನಾನು ಕಾಪಾಡುವೆ. ಹೆದರಬೇಡ' ಎಂದು ಸಂತೈಸಿ ರಾವಣಾರಿಯರಾಣಿ ಸೀತೆಯನ್ನು ವಾಲ್ಮೀಕಿ ತನ್ನ ಆಶ್ರಮಕ್ಕೆ ಕರೆದುಕೊಂಡು ಹೋದರು.

ಭೂಪಾಲ ಜನಮೇಜಯುರಾಯನೇ ಕೇಳು. ವಾಲ್ಮೀಕಿಯು ತಪೋವನದಲ್ಲಿ ಸೀತಾದೇವಿಗೆ ಚಿತ್ರಮಯ ಪರ್ಣಶಾಲೆಯನ್ನು ಸಿದ್ಧಗೊಳಿಸಿದರು. ಆಕೆ ಅಲ್ಲಿ ತನ್ನ ಮಕ್ಕಳ ಜನನಕಾಲವನ್ನು ನಿರೀಕ್ಷಿಸುತ್ತಿದ್ದಳು. ಪ್ರಪಂಚದಲ್ಲಿ ದೃಢಪತಿವ್ರತೆಯರಿಗೆ, ನಿರ್ಮಲಚರಿತ್ರರಿಗೆ ಎಷ್ಟು ಕಷ್ಟಗಳು ಬಂದರೂ ಸುಖವು ಲಭಿಸುತ್ತದೆ.

ಒಲವಿನಲ್ಲಿ ಬೆಳೆದು, ಒಲವಿನಲ್ಲಿ ಉಳಿದು, ಒಲವೆ ಬಾಳ ಚೆಲುವಾಗಿ ಸದಾ ಸಂತೋಷದಿಂದಿರುವ ಮುನಿಪತ್ನಿಯರೊಡನೆ ಸೀತೆಯು ಸುಖವಾಗಿದ್ದಳು. ವಟುಗಳು ಮತ್ತು ಋಷಿಮುನಿಗಳು ಆಕೆಯ ಪರಿಚರ್ಯೆಯನ್ನು ಮಾಡುತ್ತಿದ್ದರು. ವಾಲ್ಮೀಕಿಯು ಪ್ರತಿದಿನದ ಬಯಕೆಯನ್ನು ನೆರವೇರಿಸುತ್ತಿದ್ದರು. ಅಲ್ಲಿ ಸೀತಾದೇವಿಯು ಶ್ರೀರಾಮನ ಪಾದಕಮಲಗಳನ್ನು ಧ್ಯಾನಿಸುತ್ತ, ಸಮಸ್ತ ರಾಜವೈಭವವನ್ನು ಮರೆತು ಸುಖವಾಗಿದ್ದಳು. ನವಮಾಸಗಳು ತುಂಬಲು ಒಂದು ರಾತ್ರಿ ಶುಭಮುಹೂರ್ತದಲ್ಲಿ ಅವಳಿ ಮಕ್ಕಳನ್ನು ಹೆತ್ತಳು. ವಾಲ್ಮೀಕಿ ಋಷಿಗಳು ಮಂತ್ರಪೂತವಾಗಿ ದರ್ಭೆ ಮತ್ತು ತೀರ್ಥಗಳಿಂದ ಪ್ರೋಕ್ಷಣೆ ಮಾಡಿ, ಆ ಮಕ್ಕಳಿಗೆ ಕುಶಲವ ಎಂದು ಹೆಸರಿಟ್ಟರು.

ಅಂದು ಎಂಟುದಿಕ್ಕುಗಳು ನಿರ್ಮಲವಾಗಿ, ನಕ್ಷತ್ರಗಳು ಕಾಂತಿಯಿಂದ ಪ್ರಕಾಶಿಸಿದವು.

ಹೊಸಕಂಪಿನಿಂದ ಗಾಳಿಬೀಸಿತು. ಹೋಮಾಗ್ನಿಯು ಸುಪ್ರದಕ್ಷಿಣವಾಗಿ ಉರಿಯಿತು. ಕಡಲುಉಕ್ಕಿ ಭೂಮಿನಲಿಯಿತು. ನದಿಗಳು ತಿಳಿನೀರಿನಿಂದ ಹರಿದವು. ಸೂರ್ಯಚಂದ್ರರು ಒಮ್ಮೆಗೆ ಹುಟ್ಟಿದರೊ ಎನ್ನುವ ಹಾಗೆ ಆ ಮಕ್ಕಳು ಆಶ್ರಮ ಮುನಿಗಳ ಕಣ್ಣಿಗೆ ಗೋಚರಿಸಿದರು. ಮೂರುಲೋಕಗಳಿಗೂ ಸಂತೋಷವಾಯಿತು.

ವಾಲ್ಮೀಕಿಯು ಬಾಲದೊಡಿಗೆಗಳನ್ನು ತೊಡಿಸಿ, ಆ ಮಕ್ಕಳ ಸೌಂದರ್ಯವನ್ನು ಸವಿದರು. ಬಾಲಲೀಲೆಗಳನ್ನು ಕಂಡು ಮುದ್ದುಮಾಡಿದರು. ಇನಿದಾದ ವಸ್ತುಗಳನ್ನು ಕೊಟ್ಟು ಸಂತೋಷಪಟ್ಟರು. ತನ್ನ ತೊಡೆಯ ಮೇಲೆ, ಮಡಿಲಿನಲ್ಲಿ ಸದಾ ಆ ಮಕ್ಕಳನ್ನಿಟ್ಟುಕೊಂಡು ಲಾಲಿಸಿದರು. ಜಪ ಸಮಾಧಿ ತಪಗಳ ವೇಳೆಯ ಬಗ್ಗೆ ಯೋಚಿಸದೆ ಕುಶಲವರ ಅಕ್ಕರೆಯಲ್ಲಿದ್ದರು. ದಿನ ದಿನಕ್ಕೆ ಆ ತಪೋವನದಲ್ಲಿ ಅನಂದವು ವೃದ್ಧಿಸುತ್ತ ಹೋಯಿತು.

ಆಶ್ರಮದಲ್ಲಿ ಕುಶಲವರು – ಚೆಲುವು ಎರಡು ರೂಪಾದಂತೆ. ಪ್ರಕಾಶವು ಕವಲೊಡೆದಂತೆ, ಗೆಲುವಿನ ಲತೆ ಎರಡಾಗಿ ಮೇಲೇರಿದಂತೆ, ಸಂತಸದ ಬೆಳೆ ಎರಡು ಆಕಾರ ಪಡೆದಂತೆ, ಮೋಹರಸದಿಂದ ಉಕ್ಕಿಹರಿವ ಅವಳಿ ನದಿಯಂತೆ, ಅವಳಿ ಫಲದಂತೆ–ಬೆಳೆಯುತ್ತಿದ್ದರು.

ಓರಗೆಯ ಋಷಿಕುಮಾರರ ಜೊತೆಗೆ ಧೂಳಿನಲ್ಲಿ ಆಟಆಡುತ್ತ ಬೆಳೆದ ಕುಶಲವರಿಗೆ ವಾಲ್ಮೀಕಿಯು ಚೌಲಕರ್ಮವನ್ನು ಮಾಡಿಸಿದರು. ಅಕ್ಷರಾಭ್ಯಾಸವನ್ನು ಪ್ರಾರಂಭಿಸಿದರು. ಉಚಿತ ನಡೆನುಡಿಗಳನ್ನು ಕಲಿಸಿದರು. ರಾಜ ಲಕ್ಷಣದ ಕುಶಲವರು ಕುಶಲವರ್ಧನರಾಗಿ ರಂಜಿಸಿದರು. ಆ ಬಾಲಕರಿಗೆ ಹನ್ನೆರಡುವರ್ಷ ತುಂಬಲು ಉಪನಯನವನ್ನು ಮಾಡಿಸಿದರು. ವಸಿಷ್ಠರಿಂದ ಕಾಮಧೇನುವನ್ನು ಕೇಳಿತಂದು, ಬ್ರಾಹ್ಮಣರಿಗೆ ಭೂರಿ ಭೋಜನ ದಕ್ಷಿಣೆಗಳನ್ನು ನೀಡಿ ಆದರಿಸಿದರು. ಸೀತೆಯ ಚಿತ್ತಕ್ಕೆ ಆನಂದವಾಗುವ ಹಾಗೆ ಕುಶಲವರು ತರುಣಾದಿತ್ಯನಂತೆ ಹೊಳೆಯುತ್ತಿದ್ದರು.

ವಾಲ್ಮೀಕಿಯು ಕುಶಲವರಿಗೆ ಯಜ್ಞಯಾಗಾದಿ ಕರ್ಮಗಳ ವಿಧಿವಿಧಾನವನ್ನು, ವೇದಾಂತಶಾಸ್ತ್ರವನ್ನು, ಪ್ರಸಿದ್ಧ ಧರ್ಮಗ್ರಂಥಗಳ ಸೂಕ್ಷ್ಮವನ್ನು, ರಾಜನೀತಿಗಳ ಸಾರವನ್ನು ಸಾಂಗೋಪಾಂಗವಾಗಿ ಹೇಳಿಕೊಟ್ಟರು. ಧನುರ್ವಿದ್ಯೆಯಲ್ಲಿ ನಿಪುಣರನ್ನಾಗಿಸಿ, ಈರ್ವರೂ ರಾಮಾಯಣವನ್ನು ಅತಿಮಧುರವಾಗಿ ಹಾಡುವಂತೆ ಅಭ್ಯಾಸ ಮಾಡಿಸಿದರು.

ಸೀತೆಯು ನಲಿಯುವಂತೆ, ವಾಲ್ಮೀಕಿಯು ಮೆಚ್ಚುವಂತೆ, ತಪೋವನದ ಋಷಿಗಳೆಲ್ಲರೂ ಕೊಂಡಾಡುವಂತೆ ಕುಶಲವರು ರಾಮಾಯಣವನ್ನು ಹಾಡುತ್ತಿದ್ದರು. ಅವರು ಇಂಪಾದ ವೀಣೆಯನ್ನು ನುಡಿಸುತ್ತ, ಸಂಕೀರ್ಣರಾಗಗಳೊಡನೆ ಕೇಳುಗರಿಗೆ ಕರ್ಣಾನಂದವಾಗುವಂತೆ, ದೇವನೂರಿನ ಶ್ರೀಲಕ್ಷ್ಮೀಪತಿ ನಾರಾಯಣನ ರಾಮಾಯಣ ಕಥೆಯನ್ನು ಅನುದಿನವು ಪಾಡುತ್ತಿದ್ದರು.

**ಲವನ ಮಾತೃಪ್ರಜ್ಞೆ**

ಹಿಮಕರ ಕುಲೇಂದ್ರನಾದ ಜನಮೇಜಯರಾಯನೇ ಕೇಳು. ಕುಶಲವರು ವಾಲ್ಮೀಕಿಯ ಆಶ್ರಮದಲ್ಲಿ ವಿದ್ಯೆಯನ್ನು ಕಲಿತರು. ಚಂಡಿಕೆಯಿಂದ ಶೋಭಿತರಾಗಿ ತಾಯಿ ಸೀತಾದೇವಿಯ ಶುಶ್ರೂಷೆಯಲ್ಲಿ ನಿರತರಾದರು. ವಾಲ್ಮೀಕಿಋಷಿಯ ದಯೆಗೆ ಪಾತ್ರರಾದರು, ಋಷಿಯು ತನ್ನ ತಪೋಬಲದಿಂದ ಅವರಿಬ್ಬರಿಗೂ ಬಿಲ್ಲು. ಬಾಣ, ಕತ್ತಿ, ಗುರಾಣಿ , ವಜ್ರಕವಚ, ಕರ್ಣಕುಂಡಲ, ಕಿರೀಟಗಳನ್ನು ಕೊಟ್ಟನು.

ಅತ್ತ ಅಯೋಧ್ಯೆಯಲ್ಲಿ ಶ್ರೀರಾಮನು, ರಾವಣ ಸಂಹಾರದಿಂದ ತನಗೆ ಬಂದ ಬ್ರಹ್ಮಹತ್ಯೆಗೆ ಹೆದರಿದನು. ಪರಿಹಾರವೇನೆಂದು ಧರ್ಮಶಾಸ್ತ್ರಗಳಿಂದ ತಿಳಿದು, ಅಶ್ವಮೇಧಯಾಗವನ್ನು ಮಾಡಲು ನಿಶ್ಚಯಿಸಿದನು. ಗುರುವಾದ ವಸಿಷ್ಠ, ವಾಮದೇವ, ಅತ್ರಿ, ವಿಶ್ವಾಮಿತ್ರ ಮೊದಲಾದ ಋಷಿಗಳನ್ನು ಬರಮಾಡಿಕೊಂಡನು. ಆ ಮುನಿಗಳು ಯಜ್ಞವನ್ನು ಮಾಡಲು ಅಗ್ನಿಸಾಕ್ಷಿಯಾದ ಹೆಂಡತಿ ಹತ್ತಿರ ಇರಬೇಕೆಂದು ಹೇಳಿದರು. ಶ್ರೀರಾಮನು ಹೇಮನಿರ್ಮಿತವಾದ ಸೀತಾದೇವಿಯ ವಿಗ್ರಹವನ್ನು ಹೆಂಡತಿಯಾಗಿಟ್ಟುಕೊಂಡು ಯಾಗವನ್ನು ನಡೆಸುವೆನೆಂದು ಅವರನ್ನು ಒಪ್ಪಿಸಿದನು. ವೇದೋಕ್ತಪ್ರಕಾರವಾಗಿ ಕಂಕಣಧಾರಿಯಾಗಿ ಕುದುರೆಯನ್ನು ಪೂಜಿಸಿದನು. ಅದರ ಹಣೆಗೆ ತನ್ನ ಬಿರುದಾವಳಿಗಳನ್ನು ಬರೆದ ಓಲೆಯನ್ನು ಕಟ್ಟಿ ಭೂಮಿಯಲ್ಲಿ ಸಂಚರಿಸಲು ಬಿಟ್ಟನು. ಅದರ ಸಂರಕ್ಷಣೆಗೆ ಮೂರುಅಕ್ಷೋಹಿಣಿಸೈನ್ಯದೊಡನೆ ಶತ್ರುಘ್ನನನ್ನು ಕಳುಹಿಸಿದನು.

ಪರಾಕ್ರಮಿಗಳಾದ ದೊರೆಗಳು ಶ್ರೀರಾಮನಿಗೆ ಹೆದರಿ, ಕುದುರೆಯನ್ನು ಕಟ್ಟದೆ, ನಮಸ್ಕಾರ ಮಾಡಿ ಕಳುಹಿಸುತ್ತಿದ್ದರು. ಹೀಗೆ ಸಂಚರಿಸುತ್ತ ಆ ಕುದುರೆಯು ವಾಲ್ಮೀಕಿ ಋಷಿಯ ತಪೋವನದ ಉಪವನಕ್ಕೆ ಬಂದಿತು. ವೀರಲವನು ಅದನ್ನು ಕಂಡನು. ವರುಣನನ್ನು ಕಾಣಲು ಹೋದ ವಾಲ್ಮೀಕಿ ಮುನಿಗಳು ತಾನು ಬರುವವರೆಗೂ ಈ ತೋಟವನ್ನು ಕಾಪಾಡು ಎಂದು ಅವನಿಗೆ ಹೇಳಿದ್ದರು. ಎಲ್ಲಿಂದಲೋ ಬಂದ ಕುದುರೆ ಹೂದೋಟವನ್ನು ತುಳಿದು ಹಾಳುಮಾಡುತ್ತಿದೆ ಎಂದು ಲವನು ಅದರ ಬಳಿಗೆ ಓಡಿದನು. ಅದರ ಹಣೆಯಲ್ಲಿ,

'ಕೌಸಲ್ಯೆಯ ಪುತ್ರನಾದ ಶ್ರೀರಾಮನೊಬ್ಬನೇ ಲೋಕೈಕ ವೀರ. ಆತನ ತುರಗವನ್ನು ತಡೆಯುವುದಕ್ಕೆ ಶಕ್ತಿಯುಳ್ಳವರು ಯಾರಾದರೂ ಇದ್ದರೆ ಕಟ್ಟಬಹುದು' ಎಂದು ಬರೆದಿತ್ತು.

ಅದನ್ನು ಓದಿ –'ಓಹೋ! ರಾಮನೊಬ್ಬನೇ ಲೋಕದಲ್ಲಿ ವೀರನೇ? ಅವನ ಗರ್ವವನ್ನು ಮುರಿಯದಿದ್ದರೆ; ಎಲ್ಲರೂ ನನ್ನತಾಯಿಯನ್ನು ಬಂಜೆ ಎಂದು ಕರೆಯರೇ? ಈ ನನ್ನತೋಳುಗಳಿಂದೇನು ಪ್ರಯೋಜನ?' ಎಂದು ಉರಿದೆದ್ದನು.

ಮೇಲುವಸ್ತ್ರವನ್ನು ತೆಗೆದು ಹುರಿಯಾಗಿ ಹೊಸೆದನು. ಕುದುರೆಯ ಕತ್ತಿಗೆ ಕಟ್ಟಿ ಬಾಳೆಯಗಿಡಕ್ಕೆ ಕಟ್ಟಿಹಾಕಿದನು. ಅದನ್ನು ಕಂಡ ಋಷಿಕುಮಾರರು ನಡುಗಿ,

'ಎಲೈ ಲವನೇ, ಕುದುರೆಯನ್ನು ಕಟ್ಟಬೇಡ. ಅದು ರಾಜರದು. ಬಿಟ್ಟುಬಿಡು. ರಾಜಭಟರು ಬಂದು ನಮ್ಮನ್ನು ಹೊಡೆಯುವರು'.

'ಪಾರ್ವರ ಮಕ್ಕಳಾದ ನೀವು ಹೆದರಿಕೊಂಡರೆ, ಜಾನಕಿಯ ಮಗನಾದ ನಾನು ಇದಕ್ಕೆ ಹೆದರುವೆನೇ? ನೀವು ಹೋಗಿ' ಎಂದು ಧೈರ್ಯದಿಂದ ಬಿಲ್ಲಿಗೆ ಹೆದೆ ಏರಿಸಿ, ತೀಡಿ, ಜೇಗೈದು ನಿಂತುಕೊಂಡನು. ಕುದುರೆಗಾವಲಿಗಾಗಿ ಬಂದಿದ್ದ ಸುಭಟರು ಓಡಿಬಂದರು. ಬಾಳೆಯಗಿಡಕ್ಕೆ ಕಟ್ಟಿದ್ದ ಕುದುರೆಯನ್ನು ಕಂಡರು. ಮುನಿವಟುಗಳನ್ನು ಗದರಿಸಿ ಕೇಳಿದರು: 'ಕುದುರೆಯನ್ನು ಏತಕ್ಕೆ ಕಟ್ಟಿ ಹಾಕಿದಿರಿ?'

'ನಾವಲ್ಲ! ಬೇಡಬೇಡವೆಂದರೂ ಲವ ಕಟ್ಟಿಹಾಕಿದ.'

ತಿಳಿಯದೆ ಅವನು ಕಟ್ಟಿಹಾಕಿರಬೇಕೆಂದು ಆಲೋಚಿಸಿದ ಆ ವೀರರು ಲವನನ್ನು ಗದರಿಸಿದರು. ಆಗ ಲವನು ಧೈರ್ಯದಿಂದ ನುಡಿದನು:

'ಓಹ್! ಜೋರು ಮಾಡುವಿರೇಕೆ? ಈ ಕುದುರೆಯನ್ನು ನಾನು ಬಿಡುವುದಿಲ್ಲ. ಯಾರಾದರೂ ಬಿಡಿಸಲು ಪ್ರಯತ್ನಿಸಿದರೆ, ಅವರ ಕೈಗಳನ್ನು ಕಡಿದುಹಾಕುತ್ತೇನೆ.'

ಭಟರು ಬಲಾತ್ಕಾರದಿಂದ ಕುದುರೆಯನ್ನು ಬಿಡಿಸುವುದಕ್ಕೆ ಬಂದರು. ಆಗ ಲವನು ಗುರಿತಪ್ಪದ ಬಾಣಗಳಿಂದ ಅವರ ಕೈಗಳನ್ನು ತುಂಡುಮಾಡಿದನು. ಜನಮೇಜಯರಾಯನೇ, ದೇವೇಂದ್ರನು ಬೆಟ್ಟಗಳ ಮೇಲೆ ಮಳೆಗರೆದಂತೆ, ಆ ಸೈನ್ಯವನ್ನು ಲವನು ತನ್ನ ಬಾಣಗಳಿಂದ ಮುಸುಕಿದನು.

ಕುದುರೆಯ ರಕ್ಷಣೆಗಾಗಿ ಬಂದಿದ್ದ ಚತುರಂಗಬಲ ಅವನನ್ನು ಮುತ್ತಿತು. ವಾಲ್ಮೀಕಿಯು ನೀಡಿದ್ದ ಅಕ್ಷಯ ಬತ್ತಳಿಕೆ ಬೆನ್ನಲ್ಲಿರಲು ಹೆದರದ ಲವನು ಪ್ರಳಯ ರುದ್ರನ ಹಾಗೆ ಆ ಸೈನ್ಯವನ್ನು ಸಂಹರಿಸುತ್ತಿದ್ದನು. ಬಾಲಕನಾಗಿದ್ದರೂ ಬೆದರದ ಲವನು ಒಂದು ನಿಮಿಷದಲ್ಲಿ ಅಷ್ಟೂ ಚತುರಂಗಬಲವನ್ನು ಕೊಂದು ಹಾಕಿದನು. ಶತ್ರುಘ್ನನು ಕೋಪದಿಂದ ನುಗ್ಗಿಬರಲು, ಸಿಡಿಲ ಗರ್ಜನೆಗೆ ಸಿಡಿದುಬೀಳುವ ಸಿಂಹದಮರಿಯಂತೆ ಅವನನ್ನು ತಡೆದನು. ಮೃತ್ಯುಂಜಯ ಮಂತ್ರವನ್ನು ಜಪಿಸುತ್ತ ನಿರ್ಭಯವಾಗಿ ಶತ್ರುಘ್ನನನ್ನು ಯುದ್ಧದಲ್ಲಿ ಎದುರಿಸಿದನು.

'ಎಲಾ, ನೀನಿನ್ನೂ ಹಸುಳೆ, ನಿನ್ನ ಯಜಮಾನರು ಯಾರು? ಸಾಯದೆ ಮನೆಗೆ ಹೋಗು' ಎಂದು ಶತ್ರುಘ್ನನು ಹತ್ತು ಬಾಣಗಳನ್ನು ಬಿಟ್ಟನು. ಲವನು ಆ ಬಾಣಗಳನ್ನು ತುಂಡು ಮಾಡಿ, ತಕ್ಷಣ ಶತ್ರುಘ್ನನ ಬಿಲ್ಲಿನ ಹೆದೆಯನ್ನು ಕತ್ತರಿಸಿದನು. ಶತ್ರುಘ್ನನು ಬಾಲಕನ ಪರಾಕ್ರಮಕ್ಕೆ ಮೆಚ್ಚಿದನು. ತನ್ನ ಬಾಣಕ್ಕೆ ಇನ್ನೊಂದು ಹೆದೆಯನ್ನು ಏರಿಸಿ, ಮೂರು ಬಾಣಗಳನ್ನು ಲವನ ಹಣೆಗೆ ಗುರಿಯಿಟ್ಟು ಹೊಡೆದನು. ಅದನ್ನು ಕಂಡು ಲವನು.

'ಅಯ್ಯಾ ನಿನ್ನೀ ಬಾಣಗಳು–ವಿರಹಿಗಳನ್ನು ಹೆದರಿಸುವ ಪರಿಮಳ ಪೂರ್ಣಹೂವಿನ ಬಾಣಗಳಂತಿವೆ' ಎಂದು ಹೇಳಿ ನಗುತ್ತ, ಆತನ ಕುದುರೆ, ಸಾರಥಿ, ರಥ, ಧ್ವಜ, ಬಿಲ್ಲುಗಳನ್ನು ತುಂಡು ಮಾಡಿದನು.

ಶತ್ರುಘ್ನನು ರೋಷದಿಂದ ಹೊಸರಥ ಏರಿದನು. ಮತ್ತೊಂದು ಬಿಲ್ಲನ್ನು ತಗೆದು ಕೊಂಡು ಮಂತ್ರಾಸ್ತ್ರವನ್ನು ಹೂಡಿ ಹೊಡೆಯತೊಡಗಿದನು. ಲವನು ಮನಸ್ಸಿನಲ್ಲಿ ಅಣ್ಣ ಕುಶನನ್ನು, ತಾಯಿಯಾದ ಸೀತೆಯನ್ನು ನೆನೆದು ಧೈರ್ಯತಂದುಕೊಂಡನು. ಸೂರ್ಯನಂತೆ ಬಹುತೀಕ್ಷ್ಣವಾಗಿ ಬರುತ್ತಿರುವ ಶತ್ರುವಿನಬಾಣವನ್ನು ಮಾರ್ಗ ಮಧ್ಯದಲ್ಲಿ ತುಂಡರಿಸಿದನು. ಅವು ಅಸತ್ಯವಾದಿಯ ಐಶ್ವರ್ಯದಂತೆ ಕ್ಷಣದಲ್ಲಿ ನಾಶವಾದುವು.

ಬಾಲಕನ ಪರಾಕ್ರಮಕ್ಕೆ ಶತ್ರುಘ್ನನು ವಿಸ್ಮಿತನಾದನು. ಪ್ರಳಯರುದ್ರನ ಹಣೆಗಣ್ಣಿನಿಂದ ಹೊರಡುವ ಮಹಾಜ್ವಾಲೆಯಂತಹ ಬಾಣವನ್ನು ಹೂಡುತ್ತ,

'ಎಲೈ ಬಾಲಕನೇ, ಈ ನನ್ನ ಬಾಣದ ಪೆಟ್ಟನ್ನುನೋಡು' ಎಂದನು. ಹುಸಿನಗೆಯನ್ನು ಬೀರುತ್ತ ಲವನು ಆ ಬಾಣವನ್ನು ಎರಡುತುಂಡುಮಾಡಿದನು.

ಜನಮೇಜಯರಾಯನೇ ಲವನ ಪರಾಕ್ರಮವನ್ನು ಏನೆಂದು ಹೇಳಲಿ. ಶತ್ರಘ್ನನು ಬಿಟ್ಟ ಆ ಬಾಣದ ಅರ್ಧಭಾಗ ಭೂಮಿಗೆ ಬಿತ್ತು. ಇನ್ನರ್ಧ ಮುಂದಕ್ಕೆ ಹೋಗಿ ಲವನ ಬಿಲ್ಲನ್ನು ತುಂಡು ಮಾಡಿ, ಅವನ ಎದೆಯನ್ನು ಛೇದಿಸಿತು. ಜ್ಞಾನ ತಪ್ಪಿದ ಲವನು ಭೂಮಿಗೆ ಬಿದ್ದನು. ಶತ್ರು ಸೈನ್ಯವು ಸಂತೋಷದಿಂದ ಜಯಘೋಷ ಮಾಡಿತು.

ಶತ್ರುಘ್ನನು ಕರುಣೆಯಿಂದ ಬಾಲಕನ ಹತ್ತಿರಕ್ಕೆ ಬಂದು ನೋಡಿದನು. ಬಾಲಕನು ಶ್ರೀರಾಮನ ಆಕಾರದಂತಿರುವುದನ್ನು ಕಂಡು ಮೋಹಗೊಂಡನು. ತನ್ನ ರಥದಲ್ಲಿರಿಸಿ ಕೊಂಡನು. ಬಾಳೆಯಗಿಡಕ್ಕೆ ಕಟ್ಟಿದ್ದ ಕುದುರೆಯನ್ನು ಬಿಡಿಸಿ, ಸೇನೆಯೊಡನೆ ನಗರದ ಕಡೆಗೆ ಹೋದನು.

**ಕುಶನ ವಿಕ್ರಮ**

ಋಷಿಪುತ್ರರು ಸೀತಾದೇವಿಯ ಬಳಿಗೆ ಓಡಿಬಂದು ಕದನದಲ್ಲಿ ನಡೆದ ವೃತ್ತಾಂತವನ್ನು ತಿಳಿಸಿದರು. ಆಕೆಯು ದುಃಖದಿಂದ ಕೈಬೆರಳುಗಳನ್ನು ಹಿಸುಕಿ ಕೊಳ್ಳುತ್ತ; ತನ್ನ ಮಗನ ಗುಣ, ನಡತೆ, ರೂಪು, ಲಾವಣ್ಯಗಳನ್ನು ನೆನೆದು ಮರುಗಿ ಕಂಗೆಟ್ಟು ನುಡಿದಳು:

'ನನ್ನ ಕಂದ ಎಲ್ಲಿರುವನು? ನನ್ನ ಮುದ್ದುಮಗ ಯುದ್ಧಮಾಡಿದನೇ? ಶತ್ರುಗಳ ಕೈವಶವಾದನೇ? ಮಗುವಿಗೆ ಏನಾಯಿತೋ! ಎಷ್ಟು ನೊಂದನೋ! ಪ್ರಾಣದಿಂದಿರುವನೋ, ಇಲ್ಲವೋ! ಅವನ ಮೋಹನ ಮುಖವನ್ನು ನೋಡುವ ಭಾಗ್ಯವು ನನಗಿಲ್ಲವಾಯಿತೇ? ನಾನು ಬದುಕಿ ಕೆಟ್ಟೆ'

ಅಷ್ಟೊತ್ತಿಗೆ ಫಲ ಪುಷ್ಪ ಸಮಿತ್ತುಗಳನ್ನು ಹೊತ್ತುಕೊಂಡು ಬಂದ ಕುಶನು ತಾಯಿಯ ದುರವಸ್ಥೆಯನ್ನು ನೋಡಿ ಕೇಳಿದನು: 'ಅಮ್ಮಾ ನಿನ್ನ ಈ ಘೋರ ದುಃಖಕ್ಕೆ ಕಾರಣವೇನು?'

'ಅಪ್ಪಾ, ನನಗೆ ಬಂದಿರುವ ಕೇಡನ್ನು ಕೇಳು. ಯಾವುದೋ ಒಂದು ಕುದುರೆ ಈ ಆಶ್ರಮಕ್ಕೆ ಬಂದಿತಂತೆ. ಅದನ್ನು ನಿನ್ನ ತಮ್ಮ ಕಟ್ಟಿಹಾಕಿದನಂತೆ. ಆ ಕುದುರೆಯ ಅರಸರು ಬಂದು ಅವನನ್ನು ಹಿಡಿದುಕೊಂಡು ಹೋದರಂತೆ.'

'ಅಮ್ಮಾ, ಇಷ್ಟಕ್ಕೆ ದುಃಖವೇಕೆ? ನನ್ನ ತಮ್ಮನ ಪ್ರಾಣವನ್ನು ಯಮನು ತೆಗೆದುಕೊಂಡು ಹೋಗಿದ್ದರೆ, ಅವನ ರಾಜ್ಯವನ್ನೇ ಸುಡುತ್ತೇನೆ. ಅಲ್ಲ, ಹೌದು ಎಂದು ಅಡ್ಡಿಪಡಿಸಿದರೆ – ಬ್ರಹ್ಮ, ವಿಷ್ಣು, ಮಹೇಶ್ವರರನ್ನೇ ಸುಟ್ಟುಬಿಡುತ್ತೇನೆ. ಇನ್ನು ಅರಸುಗಿರಸುಗಳ ಪರಾಕ್ರಮ ನನಗೆಷ್ಟರದು? ನೀನು ಹೆದರಬೇಡ. ವಾಲ್ಮೀಕಿ ಋಷಿಗಳು ಕೊಟ್ಟಿರುವ ಕವಚ, ಖಡ್ಗ, ಬಿಲ್ಲು ಬಾಣ, ಕಿರೀಟಗಳನ್ನು ಕೊಡು' ಎಂದು ಸಾಹಸದ ಮಾತುಗಳನ್ನಾಡಿದ ಕುಶನಿಗೆ ತಾಯಿ ಕವಚವನ್ನು ತೊಡಿಸಿ, ಆಶೀರ್ವದಿಸಿ ಕಳುಹಿಸಿಕೊಟ್ಟಳು.

ಎಲೈ ಜನಮೇಜಯರಾಯನೇ ಕೇಳು, ತಾಯಿಯ ಅಪ್ಪಣೆ ಪಡೆದ ಕುಶನು, ತಾರಕಾಸುರನ ಸೈನ್ಯದಮೇಲೆ ಬಿದ್ದ ಷಣ್ಮುಖನಹಾಗೆ ವಾಯುವೇಗದಿಂದ ಹೊರಟನು. ಶತ್ರುಘ್ನನ ಸೈನ್ಯವನ್ನು'ಹೋಗಬೇಡಿ, ನಿಲ್ಲಿ' ಎಂದು ಕೂಗಿ ಹೇಳಿದನು. ಬಾಣಗಳ ಮಳೆ ಸುರಿಸಿದನು. ಮತ್ತೆ ಶತ್ರುಘ್ನನಸೇನೆ ಹಿಂದಿರುಗಿತು.

ಸೈನಿಕರ ನೆತ್ತಿಯಮೇಲೆ ಹದ್ದುಗಳು ಎರಗಿದವು. ಧ್ವಜಕಂಬಗಳು ಮುರಿದುಬಿದ್ದವು. ಧೂಳೆದ್ದು ಬಿರುಗಾಳಿ ಬೀಸಿತು. ಆನೆ ಕುದುರೆಗಳು ಕಂಬನಿಗರೆದವು. ಅಪಶಕುನದ ಭಯ ಉಂಟಾಗಲು, ಶತ್ರುಘ್ನನಸೇನೆ ಹೆದರಿತು. ಕುಶನು ತನ್ನ ತಮ್ಮನನ್ನು ಉಳಿಸಿಕೊಳ್ಳುವ ಕಾತರದಿಂದ ಗರ್ಜಿಸಿದನು.

'ಹೋಗಬೇಡಿ, ನಿಲ್ಲಿ. ಕದ್ದು ಹೋಗುತ್ತಾರೆಯೆ? ಕುದುರೆಯನ್ನೂ ಲವನನ್ನೂ ಬಿಟ್ಟು ಹೋಗಿ.'

ಸೈನ್ಯವು ಆ ಬಾಲಕನ ಬಾಣದ ಆಘಾತದಿಂದ ಕಂಗೆಟ್ಟಿತು. ದಿಕ್ಕೆಟ್ಟು ಕೂಗಿ

ಕೊಳ್ಳತೊಡಗಿತು. ತನ್ನ ಸೈನ್ಯದ ದುರವಸ್ಥೆಯನ್ನು ಕಂಡ ಶತ್ರುಘ್ನನು–ಎಳೆಯ ಹುಲ್ಲೆಯ ಮರಿಯು ಹುಲಿಯನ್ನು ಎದುರಿಸುತ್ತಿರುವಂತಿದೆಯಲ್ಲಾ ಎಂದು ಕೊಂಡನು. ಸೇನಾಪತಿಯನ್ನು ಕರೆದು ಕುಶನೊಡನೆ ಯುದ್ಧ ಮಾಡಲು ಆಜ್ಞಾಪಿಸಿದನು. ಸೇನಾಪತಿ ಚತುರಂಗಸೇನೆಯೊಡನೆ ಕುಶನನ್ನು ಮುತ್ತಿದನು. ಕುಶನು ಆ ಸೇನೆಯನ್ನು ಸವರಿಹಾಕಿ ಸಾರಥಿ ಸಹಿತವಾಗಿ, ಸೇನಾಪತಿಯನ್ನು ಯಮಪುರಿಗೆ ಕಳುಹಿಸಿದನು.

**ಸಾಹಸಿ ನಗ**

ಸೇನಾಪತಿಯ ತಮ್ಮನಾದ ನಗ ಎಂಬುವವನು ತನ್ನ ಅಣ್ಣನನ್ನು ಸಂಹರಿಸಿದುದಕ್ಕೆ ಕೋಪಗೊಂಡನು. ಆನೆಯೇರಿ ಅಂಕುಶದಿಂದ ತಿವಿದು ಕುಶನ ಮೇಲೆ ಏರಿ ಬಂದನು. ಕುಶನು ಚಮತ್ಕಾರದಿಂದ ಯುದ್ಧಮಾಡಿ ಆನೆಯನ್ನು ಸೀಳಿ, ಅವನ ಧನುಸ್ಸನ್ನು ಮುರಿದನು. ಆಗ ನಗನು ಕತ್ತಿ ಗುರಾಣಿ ಹಿಡಿದು ಕಾಳಗಕ್ಕೆ ಬಂದನು. ಕುಶನು ಅವನ ಕೈಯನ್ನು ಕತ್ತರಿಸಿದನು. ಅವನು ಎಡಗೈಯಲ್ಲಿ ಒಂದು ಗದೆ ಹಿಡಿದು ಮೇಲೆ ಬಂದನು. ಕುಶ ಅವನ ಆ ಹಸ್ತವನ್ನೂ ಕಡಿದು ಹಾಕಿದನು. ಬಾಹುಗಳಿಂದ ಹೊಡೆಯುತ್ತೇನೆಂದು ನುಗ್ಗಿ ಬರಲು, ಆ ತೋಳುಗಳನ್ನು ಕುಶನು ಹರಿತವಾದ ಬಾಣಗಳಿಂದ ತುಂಡರಿಸಿದನು. ಕಾಲುಗಳಿಂದ ಒದೆದು ಕೆಡಹಲು ನಗ ಮುನ್ನುಗ್ಗಿಬರಲು, ಅವನ ತೊಡೆಗಳನ್ನು ಕುಶನು ತುಂಡುಮಾಡಿದನು. ಆಗ ನಗನು ರಾಹುವು ಚಂದ್ರನನ್ನು ನುಂಗುವಂತೆ ಹಾರಿಬರಲು, ಕುಶನು ಅವನ ತಲೆಯನ್ನು ಕತ್ತರಿಸಿದನು. ಆ ಶಿರವು ಶಿವನ ರುಂಡಮಾಲೆಯಲ್ಲಿ ಸೇರಿ ಹೋಯಿತು.

**ಮೂರ್ಛಿತನಾದ ಶತ್ರುಘ್ನ**

ಕುಶನ ಪರಾಕ್ರಮವನ್ನು ಕಂಡ ಶತ್ರುಘ್ನನು ಧನುರ್ಧಾರಿಯಾಗಿ ತಾನೇ ಯುದ್ಧಕ್ಕೆ ನಿಂತನು. ಕೋಪದಿಂದ ಒಂಬತ್ತು ಬಾಣಗಳಿಂದ ಕುಶನನ್ನು ಹೊಡೆದನು. ಕುಶನು ರೋಷದಿಂದ ಶತ್ರುಘ್ನನ ರಥವನ್ನು ಮುರಿದು, ಸಾರಥಿಯನ್ನು ಕೊಂದನು. ಅವನ ಬಿಲ್ಲನ್ನು ಮುರಿದು, ಎದೆಯಲ್ಲಿ ನಾಟುವಂತೆ ಬಾಣ ಪ್ರಯೋಗಿಸಿದನು. ಆ ಪೆಟ್ಟಿಗೆ ಶತ್ರುಘ್ನನು ಮೂರ್ಛಿತನಾದನು. ಅದನ್ನು ಕಂಡ ಇತರ ರಾಜರು ಕುಶನಿಗೆ ಎದುರಾಗಿ ಹೋರಾಡಿದರು. ಅವನ ಬಾಣದ ಪೆಟ್ಟಿಗೆ–ಕನ್ಯಾ ವಿಕ್ರಯವನ್ನು ಮಾಡಿ ಜೀವಿಸುವ ಪಿತೃಗಳಂತೆ ಪತಿತರಾಗಿ– ಒಬ್ಬೊಬ್ಬರೂ ನೆಲಕ್ಕುರುಳಿದರು.

ಬಂದ ದುರಿತವನ್ನು ತನ್ನ ಸ್ವಧರ್ಮಾಚರಣೆಯಿಂದ ನಾಶಪಡಿಸುವ ಹಾಗೆ, ಕುಶನು ತನ್ನ ಭುಜಬಲದಿಂದ ಶತ್ರುಗಳನ್ನು ಸಂಹರಿಸಿದನು. ಅಷ್ಟರಲ್ಲಿ ಮೂರ್ಛೆ ತಿಳಿದೆದ್ದ ಲವನು, ಅಣ್ಣನನ್ನು ನೋಡಿ ಜೊತೆಗೂಡಿದನು. ಅಗ್ನಿ ವಾಯುಗಳು ಕೂಡಿದಂತೆ ಒಂದುಗೂಡಿದ ಸಹೋದರರು ಮತ್ತೆ ಕುದುರೆಯನ್ನು ಕಟ್ಟಿಹಾಕಿ, ಯುದ್ಧಕ್ಕೆ ನಿಂತರು. ಕಳೆದುಳಿದ ಸೈನಿಕರು ತಮ್ಮ ರಾಜನಾದ ರಾಮನಿಗೆ ದೂತರ ಮುಖಾಂತರ ಸುದ್ದಿಯನ್ನು ಕಳುಹಿಸಿದರು.

**ಊರ್ಮಿಳಾ ವಲ್ಲಭನ ಸೋಲು**

ಚರು, ಪುರೋಡಾಶ, ಎಳ್ಳು ಮುಂತಾದ ದ್ರವ್ಯಗಳನ್ನು ಆಹುತಿ ಕೊಡುತ್ತ, ಹೋಮದ ಹೊಗೆಯಿಂದ ಕಣ್ಣು ಕೆಂಪಾಗಿ; ಸುವರ್ಣದಿಂದ ಮಾಡಿದ ಸೀತೆಯೊಡನೆ ಭರತ, ಲಕ್ಷ್ಮಣ ಸಮೇತನಾಗಿ ಯಾಗಶಾಲೆಯಲ್ಲಿ ದೀಕ್ಷಾಬದ್ಧನಾಗಿ ಶ್ರೀರಾಮನು ಕುಳಿತಿದ್ದನು. ಆತನನ್ನು ಕಂಡು ಆಳುಗಳು ಭಯಭಕ್ತಿಯಿಂದ ನಮಸ್ಕರಿಸುತ್ತ,

'ಜೀಯಾ, ನಿನ್ನ ಯಜ್ಞಾಶ್ವವು ಭೂಮಿಯಲ್ಲೆಲ್ಲ ಸಂಚರಿಸಿ ವಾಲ್ಮೀಕಿ ಆಶ್ರಮಕ್ಕೆ ಬಂದಿತು. ಅದನ್ನು ಲವನೆಂಬ ಹುಡುಗನು ಕಟ್ಟಿಹಾಕಿದನು. ಬಿಡಿಸಲು ಹೋದ ನಮ್ಮ ಸೈನ್ಯವನ್ನೆಲ್ಲ ಕೊಂದನು. ಶತ್ರುಘ್ನನು ಆ ಬಾಲಕನನ್ನು ಹಿಡಿದು ತರುವಾಗ, ಇನ್ನೊರ್ವ ಬಾಲಕ ಬಂದನು. ನಿನ್ನ ತಮ್ಮನನ್ನು ಯುದ್ಧದಲ್ಲಿ ಎದುರಿಸಿದನು. ಪ್ರಜ್ಞೆ ತಪ್ಪಿ ಬೀಳುವಂತೆ ಉರುಳಿಸಿದನು. ಹೇಳಲು ಅಂಜಿಕೆಯಾಗುತ್ತಿದೆ.'

ಮನೋಹರಮುಖದ ಶ್ರೀರಾಮನು ಕೋಪಗೊಂಡು ಗದರಿಸಿದನು.

'ಎಲವೋ, ಈ ಲೋಕದಲ್ಲಿ ಶತ್ರುಘ್ನನನ್ನು ಜಯಿಸುವ ವೀರರಿರುವರೇ? ಹೋಗಿ ಮರುಳರೆ.' ವಿನಯಪೂರ್ವಕವಾಗಿ ಆಳುಗಳು ನಿವೇದಿಸಿದರು:

'ಸ್ವಾಮಿಯೇ, ನಿಮ್ಮ ಪಾದಸಾಕ್ಷಿಯಾಗಿ ಈ ಮಾತು ಸುಳ್ಳಲ್ಲ'.

ಶ್ರೀರಾಮನು ಬೆರಗಾಗಿ ವ್ಯಸನದಿಂದ ನುಡಿದನು:

'ಲವಣಾಸುರನೇ ಶತ್ರುಘ್ನನ ಪರಾಕ್ರಮದೆದುರು ಸೋತು ಹತನಾದನು. ಇನ್ನು, ಆ ಬಾಲಕನ ಪರಾಕ್ರಮ ಅತಿಶಯವಾಗಿದೆ. ಲಕ್ಷ್ಮಣ ಸೇನೆಸಹಿತ ಹೊರಡು. ಬಾಲಕರನ್ನು ಜಯಿಸು.'

ಲಕ್ಷ್ಮಣನು ಶ್ರೀರಾಮನಿಗೆ ನಮಸ್ಕರಿಸಿ, ಕಾಲಜಿತು ಎಂಬ ಸೇನಾಪತಿಯೊಡನೆ ಚತುರಂಗಬಲಸಮೇತ ಹೊರಟನು. ಭೂಮಿಯಗಲಕ್ಕೂ ಆವರಿಸಿದ ಆನೆ, ರಥಗಳಿಂದ; ಝುಳಪಿಸುವ ಆಯುಧಗಳಿಂದ ಅವನ ಸೇನೆ ಹೊರಟಿತು. ದಿಕ್ಕುಗಳು ಸಾಲದೆಂಬಂತೆ ತಮಟೆ ಭೇರಿಗಳ ವಾದ್ಯಗಳು ಮೊಳಗಿದುವು.

ಜನಮೇಜರಾಯನೇ ಕೇಳು, ಬಾಣದ ಪೆಟ್ಟುಗಳ ನೋವಿನಿಂದ ಚೇತರಿಸಿಕೊಳ್ಳಲು ಶಕ್ತಿಸಾಲದೆ, ಮೂರ್ಛೆಯೊಡನೆ ಹೆಣಗಾಡುತ್ತಿರುವ ಶತ್ರುಘ್ನನಬಳಿಗೆ ಲಕ್ಷ್ಮಣನು ಬಂದನು. ಶೈತ್ಯೋಪಚಾರದಿಂದ ಸಮಾಧಾನಪಡಿಸಿದನು. ಆ ಬಾಲಕರ ಪರಾಕ್ರಮವನ್ನು ನೋಡೋಣ ಬನ್ನಿ ಎಂದು ಕಾಲಜಿತು ಮೊದಲಾದ ದಳಪತಿಗಳನ್ನು ಕೈಬೀಸಿ ಕರೆದನು. ಕುಶಲವರು ಅರಿಬಲವ್ಯೂಹವನ್ನು ನೋಡಿದರು. ಬರಲಿ, ತುಂಡಾಗಿ ಕತ್ತರಿಸೋಣ ಎಂದು ಮಾತಾಡಿಕೊಂಡರು.

'ಅಣ್ಣಾ, ನನ್ನ ಬಿಲ್ಲು ಮುರಿದು ಹೋಯಿತು. ಮುನಿಪತಿವಾಲ್ಮೀಕಿಯುವರು ಹೇಳಿಕೊಟ್ಟಿರುವ ಮಂತ್ರಬಲದಿಂದ ಇನ್ನೊಂದು ಕೋದಂಡವನ್ನು ಪಡೆಯುವೆನು' ಎಂದು ಲವನು ಸೂರ್ಯಮಂಡಲವನ್ನು ಈಕ್ಷಿಸುತ್ತ ಅನುಪಮವಾಗಿ ರವಿಯನ್ನು ಪ್ರಾರ್ಥಿಸಿದನು.

'ಮಿತ್ರನಾದ, ಬ್ರಹ್ಮ ವಿಷ್ಣು ರುದ್ರಾತ್ಮನಾದ, ಜಗಕೆ ಕಣ್ಣಾದ, ಆರು ಋತುಗಳೊಳು ವರ್ತಿಸುತ್ತ, ಏಳುಅಶ್ವವನ್ನು ಕಟ್ಟಿಕೊಂಡು ಹೊರಡುವ, ಹತ್ತುದಿಕ್ಕುಗಳನ್ನು ಬೆಳಗಿಸುವ, ಹನ್ನೆರಡುರಾಶಿಗಳಿಗೆ ಒತ್ತಾಸೆಯಾಗಿರುವ ಸೂರ್ಯದೇವನೇ ಬಿಲ್ಲನ್ನು ಕೊಟ್ಟು ಕಾಪಾಡು.'

ಜನಮೇಜಯರಾಯನೇ ಕೇಳು. ಆ ಬಾಲಕನ ವಿಮಲಸ್ತುತಿಗೆ ಮೆಚ್ಚಿ, ರವಿಯು ಅವನ ಕೈಗೆ ದಿವ್ಯಚಾಪವನ್ನು ನೀಡಿದನು. ಅದನ್ನು ಅಣ್ಣನಿಗೆ ತೋರಿಸಿ 'ವಾಲ್ಮೀಕಿ ಬಾಳುಗೆ' ಎಂದು ಸಂತಸದಿಂದ ನುಡಿದನು. ಕುಶನು ತನ್ನ ಉಗ್ರಕೋದಂಡವನ್ನು ಹಿಡಿದು ನಿಂತನು.

ಜನಮೇಜಯುರಾಯುನೇ ಕೇಳು. ಕುಶಲವರನ್ನು ಎದುರಿಸಲು ಲಕ್ಷ್ಮಣನು ಅಪಾರವಾದ ಸೈನ್ಯವನ್ನು ತಂದನು. ಅದರ ಲೆಕ್ಕವೇ ವಿಸ್ಮಯ! ನೂರು ಕಾಲಾಳುಗಳಿಗೆ ಒಂದು ಕುದುರೆ. ಅಂತಹ ನೂರು ಕುದುರೆಗಳಿಗೆ ಒಂದು ರಥ. ಅಂತಹ ನೂರು

ರಥಗಳಿಗೆ ಒಂದು ಆನೆ. ಸಹಸ್ರ ಆನೆಗಳಿಗೆ ಸಂಕೇತನುಡಿ ಭ್ರಮಿ. ಅಂತಹ ಸಾವಿರ ಭ್ರಮಿಗಳು ಯೋಜನದಳತೆಯಲ್ಲಿ ಕೂಡಿಬಂದಿದ್ದವು. ಆ ಸೈನ್ಯವೆಲ್ಲವನ್ನೂ ಕ್ಷಣಮಾತ್ರದಲ್ಲಿ ಕೊಲ್ಲುವೆವೆಂದು ಕುಶಲವರು ಎದುರಾದರು. ಲಕ್ಷ್ಮಣನು ಯುದ್ಧಕ್ಕೆ ನಿಂತನು.

ಕಾಲಜಿತುವು ಲವನನ್ನು ಎದುರಿಸಲು ಹೊರಟನು. ಲವನು ತನ್ನ ಮೇಲೆ ಲಕ್ಷ್ಮಣನ ಸೈನಿಕರು ಎಷ್ಟು ಅಂಬುಗಳನ್ನು ಪ್ರಯೋಗಿಸುತ್ತಿದ್ದರೂ ಅಷ್ಟೂ ಅವರ ದೇಹದಲ್ಲಿ ನಾಟುವಂತೆ ಹೊಡೆದನು. ಎದುರು ಬಿದ್ದು ಬಂದ ನಲವತ್ತು ಭ್ರಮಿಗಳನ್ನು ಸಂಹಾರ ಮಾಡಿದನು. ಅಣ್ಣನಾದ ಕುಶನನ್ನು ಎಡಬಲದಲ್ಲಿ ಹುಡುಕುತ್ತಿದ್ದನು. ಆ ಸಂದರ್ಭದಲ್ಲಿ ಶ್ರೀರಾಮನಿಗೆ ಶರಣಾಗತನಾಗಿದ್ದ ರುಧಿರಾಕ್ಷನೆಂಬ ಶೂರ ಅಸುರನು ಲವನ ಕೈಯಲ್ಲಿದ್ದ ಕೋದಂಡವನ್ನು ಬಲಾತ್ಕಾರದಿಂದ ಕಿತ್ತುಕೊಂಡನು.

ರೋಷಗೊಂಡಲವನು ವಾಲ್ಮೀಕಿಉಪದೇಶಿಸಿದ್ದ ಅಗ್ನಿಮಂತ್ರ ಜಪಿಸಿ, ಚಕ್ರವನ್ನು ಪಡೆದನು. ಚಕ್ರಾಯುಧಧಾರಿಯಾದ ನಾರಾಯಣನಂತೆ ಗಗನಾಂಗಣದಲ್ಲಿ ರಾಕ್ಷಸನನ್ನು ಹಿಡಿಯಲು ಹೋದನು. ಮುತ್ತಿಬಂದ ಸೈನ್ಯವನ್ನು ಚಕ್ರದಿಂದ ತುಂಡರಿಸಿ ರುಧಿರಾಕ್ಷನನ್ನು ಹಿಂಬಾಲಿಸಿದನು. ಆಗ ದಶರಥನ ಮಂತ್ರಿಕುಮಾರರಾದ ಹತ್ತು ಜನ ಪ್ರಸಿದ್ಧ ಪ್ರಧಾನಿಗಳು ಹತ್ತತ್ತು ಬಾಣಗಳನ್ನು ಪ್ರಯೋಗಿಸಿ ಲವನ ಚಕ್ರವನ್ನು ನೂರು ಹೋಳಾಗುವಂತೆ ಕಡಿದುಹಾಕಿದರು.

ಚಕ್ರಾಯುಧಮುರಿಯಲು ಪರಿಘವೆಂಬ ಆಯುಧವನ್ನು ತೆಗೆದುಕೊಂಡು ಅವರೆಲ್ಲರನ್ನೂ ಹೊಡೆದುಹಾಕಿದನು. ರುಧಿರಾಕ್ಷನು ಗದೆಯಿಂದ ಲವನ ಹಣೆಗೆ ಅಪ್ಪಳಿಸಲು. ಲವ ಮೂರ್ಛಿತನಾದನು. ಕೂಡಲೇ ಚೇತರಿಸಿಕೊಂಡು ಎದ್ದು ದೊಣ್ಣೆಯಿಂದ ರುಧಿರಾಕ್ಷನ ತಲೆಯನ್ನು ಹೊಡೆದುಹಾಕಿದನು. ಅವನ ಕೈಯಲ್ಲಿದ್ದ, ಸೂರ್ಯನು ತನಗೆ ಕೊಟ್ಟಿದ್ದ ಬಿಲ್ಲನ್ನು ತೆಗೆದುಕೊಂಡನು. ಅವನ ಕೈಚಳಕದಿಂದ ಎಡಬಲಗಳಲ್ಲಿ ರಾಶಿರಾಶಿ ಸೈನಿಕರು ಶವಗಳಾಗಿ ಬೀಳುತ್ತಿದ್ದರು. ಅದನ್ನು ಕಂಡು ಆಕಾಶದಲ್ಲಿ ನೆರೆದ ಅಮರಸ್ತ್ರೀಯರು ಪ್ರೀತಿಯಿಂದ ಆ ಶೂರಸೈನಿಕರನ್ನು ಆಲಂಗಿಸಿಕೊಳ್ಳಲು, ಮಡಿದಸೈನಿಕರು ವೀರಸ್ವರ್ಗವನ್ನು ಹೊಂದಿದರು.

* * *

ಯುದ್ಧರಂಗದ ಇನ್ನೊಂದು ಕಡೆ ಸೌಮಿತ್ರಿಗೆ ಕುಶನೊಡನೆ ಯುದ್ಧವಾಯಿತು. ಲಕ್ಷ್ಮಣನು ಐದುಬಾಣಗಳನ್ನು ಹೊಡೆದು ಕುಶನನ್ನು ನೋಯಿಸಿದನು. ಕೋಪಗೊಂಡ ಕುಶನು ಒಂದುಬಾಣ ಹೂಡಿ, ಊರ್ಮಿಳಾ ವಲ್ಲಭನ ತೇರು ಎರಡುಗಳಿಗೆ ಗಿರ್ರನೆ ತಿರುಗುವಂತೆಮಾಡಿ. ಕುದುರೆಗಳನ್ನುಕೊಂದನು.

ಅರಸ ಜನಮೇಜಯರಾಯನೇ ಕೇಳು. ಲಕ್ಷ್ಮಣನು ರೋಷಗೊಂಡರೂ ಆ ಬಾಲಕನ ವಿಕ್ರಮಕ್ಕೆ ಮೆಚ್ಚಿದನು. ಮತ್ತೊಂದು ರಥವೇರಿ ಬಂದನು. ಎರಡು ಬಾಣಗಳಿಂದ ಕುಶನ ಕಿರೀಟವನ್ನು, ಮೂರುಬಾಣಗಳಿಂದ ಕವಚವನ್ನು ಕೊಚ್ಚಿ ಕೆಡವಿದನು. ಆಗ ಜಾನಕಿಯ ಮಗನಿಗೆ ಪೊರೆಬಿಟ್ಟ ಸರ್ಪರಾಜನಹಾಗೆ ಶೌರ್ಯ ಇಮ್ಮಡಿಸಿತು. ನಗುತ್ತ ವಿನಯಪೂರ್ವಕವಾಗಿ,

'ಯುದ್ಧದಲ್ಲಿ ಕಿರೀಟಕವಚಗಳ ಹೊರೆಯನ್ನು ನೀಗಿಸಿ. ನನಗೆ ಉಪಕಾರ ಮಾಡಿರುವೆ.

ಅದಕ್ಕೆ ನಾನು ಅಪಕಾರವನ್ನು ಮಾಡುವುದಿಲ್ಲ. ನಿನಗೆ ಭಾರವಾಗಿರುವ ಚತುರಂಗಸೈನ್ಯದ ಹೊರೆಯನ್ನು ಇಳಿಸುವೆನು ನೋಡು' ಎಂದು ಹೇಳುತ್ತ ಕುಶನು ಅಗ್ನಿಸೂಕ್ತದ ಅಥರ್ವಣ ಮಂತ್ರವನ್ನು ಜಪಿಸಿ ಆಗ್ನೇಯಾಸ್ತ್ರವನ್ನು ಹೂಡಿದನು. ಅದು ಅಕಾಲದಲ್ಲಿ ಪ್ರಳಯರುದ್ರನು ಕಣ್ಣುತೆರದನೋ ಎಂಬಂತೆ ಲಕ್ಷ್ಮಣನಸೈನ್ಯವನ್ನು ಸುಡಲಾರಂಭಿಸಿತು. ತನ್ನ ಸೇನೆಯನ್ನೆಲ್ಲ ಸುಡುತ್ತಿರುವ ದಳ್ಳುರಿಯನ್ನು ಲಕ್ಷ್ಮಣನು ವಾರುಣಾಸ್ತ್ರದಿಂದ ಆರಿಸಿದನು. ಕುಶನು ವಾಯುವ್ಯಾಸ್ತ್ರದಿಂದ ಸೇನಾಜನರನ್ನು ಉರುಳಿಸತೊಡಗಿದನು. ಸೇನಾಪತಿಯಾದ ಕಾಲಜಿತುವು ಲಕ್ಷ್ಮಣನನ್ನು ಹಿಂದಕ್ಕೆ ನೂಕಿ, ತಾನು ಕುಶನಿಗೆ ಎದುರಾದನು.

**ಕಾಲಜಿತುವಿನ ನಾಲಗೆ ಕತ್ತರಿಸಿದ ಕುಶ**

'ಎಲ್ಲವೋ ಬಾಲಕ, ನೀನು ನನ್ನ ಬಾಹುಬಲಕ್ಕೆ ಸರಿಯಾದವನಲ್ಲ. ನೀನು ಚಿಕ್ಕವನೆಂದು ಕರುಣದಿಂದಿದ್ದರೆ. ನೀನು ಎಲ್ಲರನ್ನೂ ಗೆಲ್ಲುತ್ತಿರುವೆ. ಯುದ್ಧ ಮಾಡದೆ ಹೊರಟು ಹೋಗು. ನಾನು ಕಾಲಜಿತುವೆಂಬ ರಾಕ್ಷಸ' ಎಂದು ಬುದ್ಧಿ ಮಾತು ಹೇಳುತ್ತಲೇ ಕಾಲಜಿತುವು ಕುಶನತ್ತ ಬಾಣ ಪ್ರಯೋಗಮಾಡಿದನು. ಕುಶನು ಆ ಬಾಣವನ್ನು ಕತ್ತರಿಸುತ್ತ.

'ಆಡಿನ ಕತ್ತಿನಲ್ಲಿರುವ ಮೊಲೆಯಂತೆ ಕೃತಿಮವಾಗಿರದೆ–ನಿನ್ನ ಪರಾಕ್ರಮವು ನಿಜವಾಗಿದ್ದರೆ–ನಾನು ಅದನ್ನು ಸೈರಿಸಿಕೊಳ್ಳುವೆನು. ಹಾಗಿಲ್ಲದಿದ್ದರೆ ಅಹಂಕಾರದಿಂದ ಸುಳ್ಳುಹೇಳಿದ ನಿನ್ನ ನಾಲಗೆಯನ್ನು ಕತ್ತರಿಸಿಹಾಕುವೆನು' ಎಂದು ಕುಶನು ಬಿಟ್ಟಬಾಣವು ಅಬ್ಬರಿಸುವ ಕಾಲಜಿತುವಿನ ನಾಲಗೆಯನ್ನು ಸೀಳಿತು.ಮಾತು ಆಡಲಾಗದ ಕಾಲಜಿತು ರೋಷದಿಂದಕುದಿದು ಬಾಣಗಳನ್ನು ಬಿಟ್ಟನು. ಕುಶನು ನಗುನಗುತ್ತ ನಿಶಿತಾಸ್ತ್ರದಿಂದ ಆ ರಕ್ಕಸನ ಕೈಕಾಲು ತಲೆಗಳನ್ನು ನುಚ್ಚುನೂರಾಗಿ ಕತ್ತರಿಸಿದನು.

* * *

ಕೋಪಗೊಂಡ ಲಕ್ಷ್ಮಣನು ಮೂರು ಲೋಕಗಳು ಕಣ್ಮುಚ್ಚಿಕೊಳ್ಳುವಂತೆ ಕುಶನ ಮೇಲೆ ಬಾಣಗಳನ್ನು ಸುರಿದನು. ಕುಶನು ಲಕ್ಷ್ಮಣನ ಬಾಣಗಳನ್ನು ಆತನ ರಥದ ಕುದುರೆಗಳನ್ನು, ರಥಪತಾಕೆಗಳನ್ನು, ಕವಚವನ್ನು ಹೊಡೆದು ಕೆಡಹಿದನು. ಲಕ್ಷ್ಮಣನು ಒಂದು ದೊಡ್ಡಗದೆಯೊಡನೆ ಯುದ್ಧಕ್ಕೆ ಬರಲು, ಕುಶನು ತನ್ನ ಬಾಣಗಳ ಶಕ್ತಿಯಿಂದ ಅದನ್ನು ಪುಡಿಗೈದನು. ಲಕ್ಷ್ಮಣನು ಕತ್ತಿ, ಗುರಾಣಿ, ಪರಶುಗಳಿಂದ ಹೋರಾಡಲು ಅವುಗಳೆಲ್ಲವನ್ನು ಕುಶನು ತನ್ನ ಮಂತ್ರಾಸ್ತ್ರಗಳಿಂದ ಕಡೆದುಹಾಕಿದನು.

ವಾಲ್ಮೀಕಿಮುನಿಯು ತನಗೆ ನೀಡಿದ್ದ ಮರ್ಮಭೇದಿಗಳಾದ ಐದು ಅಂಬುಗಳನ್ನು ಕುಶನು ಪ್ರಯೋಗಿಸಲು–ಸೂರ್ಯನು ನಭದಿಂದ ಧರಾತಳಕ್ಕೆ ಬಿದ್ದನೋ ಎಂಬಂತೆ ಲಕ್ಷ್ಮಣನು ಮೂರ್ಛೆಗೊಂಡುಬಿದ್ದನು.

ಕುಶನು ತನ್ನ ಯುದ್ಧ ಕೌಶಲದಿಂದ ಅಲ್ಲಿದ್ದವರನ್ನು ಸದೆಬಡಿದನು. ಲವನನ್ನು ಮುತ್ತಿಕೊಂಡು ಅಬ್ಬರಿಸುತ್ತಿರುವ ಸೈನಿಕರ ಕೋಲಾಹಲವನ್ನು ಆಲಿಸಿದನು. ತಮ್ಮನಿಗಾಗಿರಬಹುದಾದ ತೊಂದರೆಯನ್ನು ಭಾವಿಸಿ, ಗರುಡನಂತೆ ಹಾರಿ ಲವನಿದ್ದ ಸ್ಥಳಕ್ಕೆ ಹೋದನು. ಅವರಿಬ್ಬರೂ ಕೂಡಿದುದನ್ನು ನೋಡಿ ಉಳಿದ ಶತ್ರುಗಳು ದಿಕ್ಕು ದಿಕ್ಕಿಗೆ ಓಡಿದರು. ಸಹೋದರರು ಯಾಗದ ಕುದುರೆ ಇರುವ ಉಪವನದ ಕಡೆಗೆ ಹೊರಟರು. ದೂತರು ಶ್ರೀರಾಮಚಂದ್ರನಿಗೆ ಸುದ್ದಿ ತಿಳಿಸಲು ಅತಿ ವೇಗದಿಂದ ಓಡಿದರು.

**ವಿಗತ ಚೇತನನಾದ ಭರತ**

ಜನಮೇಜಯರಾಯನೇ ಕೇಳು, ಗಂಗಾನದಿಯ ತೀರದಲ್ಲಿ ಯಾಗದೀಕ್ಷೆಯಲ್ಲಿದ್ದ ಶ್ರೀರಾಮನು ಯಾವುದೋ ಅರಿಯಲಾಗದ ಒಳಭಾವದಲ್ಲಿ ಸಿಲುಕಿ ಚಿಂತಾಕ್ರಾಂತನಾದನು. ಭರತನನ್ನು ಕರೆದು ಹೇಳಿದನು.

'ಅಯ್ಯಾ, ಶತ್ರುಘ್ನನು ಏನು ಮಾಡುತ್ತಿರುವನೆಂದು ತಿಳಿಯದಾಗಿದೆ. ಲಕ್ಷ್ಮಣನು ಆ ಬಾಲಕರನ್ನು ಹಿಡಿದುತರುವನೋ ಅಥವಾ ಕೊಂದುಹಾಕಿದನೋ ಗೊತ್ತಿಲ್ಲವಾಗಿದೆ. ಯದ್ಧದಲ್ಲಿ ಗೆದ್ದನೋ, ಸೋತನೋ, ಕುದುರೆಯನ್ನು ಬಿಡಿಸಿಕೊಂಡು ಬರುವನೋ ಎಂಬುದನ್ನು ಅರಿಯೆನು!'

'ಪ್ರಭುವೇ, ಅಷ್ಟುಚಿಂತಿಸಬೇಡಿ. ಲಕ್ಷ್ಮಣ ಸೋಲರಿಯದ ಸಹೋದರ.'

'ಹೌದು. ಲಕ್ಷ್ಮಣನು ಕನಸಿನಲ್ಲಿಯೂ ಕೂಡ ಯಾರಿಗೂಸೋತವನಲ್ಲ! ಬಾಲಕರನ್ನುಕೊಲ್ಲದೆ, ಸಮ್ಮೋಹನಾಸ್ತ್ರದಿಂದಮೂರ್ಛೆಗೊಳಿಸಿ ನನಗೆ ತಂದೊಪ್ಪಿಸುವಂತೆ ಲಕ್ಷ್ಮಣನಿಗೆ ಹೇಳಿಕಳುಹಿಸು.'

ರಾಮಾಜ್ಞೆಯಂತೆ ಭರತನು ದೂತರನ್ನು ಕಳುಹಿಸಲು, ಅವರು ಹಿಂದಿರುಗಿ ಬಂದು ಶ್ರೀರಾಮನಿಗೆ ವಿನಂತಿಸಿದರು.

'ದೇವ. ದೀಕ್ಷೆಯನ್ನು ಬಿಟ್ಟುಬಿಡು. ಕುಶನಸಂಗಡ ಕಾದಲು ಹೊರಡು. ಲವನಿಗಿಂತ ಆತ ಮಹಾವೀರ, ನಿನ್ನ ಹೋಲಿಕೆಯುಳ್ಳ ಆ ಬಾಲಕರ ಜೊತೆಗಿನ ಹೋರಾಟದಲ್ಲಿ ಶತ್ರುಘ್ನ, ಲಕ್ಷ್ಮಣರ ಪ್ರಾಣ ಉಳಿಯುವ ಅನುಮಾನ ಉಂಟಾಗಿದೆ!'

ಅದನ್ನು ಕೇಳಿ ಶ್ರೀರಾಮನು ಮೂರ್ಛಿತನಾದನು. ಭರತನ ಶೈತ್ಯೋಪಚಾರದಿಂದ ಮೂರ್ಛೆ ತಿಳಿದೆದ್ದು ಕುಳಿತು.

'ಸೌಮಿತ್ರಿ ಅಳಿದನೇ! ಅಯ್ಯೋ, ನನ್ನ ತಮ್ಮನೇ!' ಎಂದು ನಿಟ್ಟುಸಿರುಬಿಟ್ಟು. ಶೋಕದಿಂದ ಮರುಗಿದನು.

ಜಾನಕಿಯನ್ನು ಅನ್ಯಾಯವಾಗಿ ಶ್ರೀರಾಮನು ತೊರೆದುದರಿಂದ ಈ ಹಾನಿಯುಂಟಾಗಿದೆ. ಜಗತ್ತಿನಲ್ಲಿ ಲಕ್ಷ್ಮಣ, ಶತ್ರುಘ್ನರನ್ನು ಜಯಿಸುವ ಪರಾಕ್ರಮಿಗಳಿಲ್ಲ! ಕಾಡಿನ ಮಕ್ಕಳಿಗೆ ಅಷ್ಟು ಪೌರುಷವೆಲ್ಲಿಂದ ಬರಬೇಕು. ಅವರ ರೂಪವನ್ನು ನೋಡಿದರೆ, ಶ್ರೀರಾಮನ ಮಕ್ಕಳೆಂಬುದರಲ್ಲಿ ಸಂದೇಹವಿಲ್ಲ ಎಂದು ಪುರಜನರು ರಾಮಚಂದ್ರನು ಕೇಳುವ ಹಾಗೆ ಮಾತಾಡಿಕೊಂಡರು.

ಆ ಬಾಲಕರ ಮುಖದ ಮುದ್ರಾಕೃತಿ ಸೀತೆಯದಾಗಿ, ದೇಹದ ಭದ್ರಾಕೃತಿ ನನ್ನದಾಗಿರುವಾಗ ಅವರು ನನ್ನಮಕ್ಕಳೇ ಇರಬೇಕು. ಆ ಮಕ್ಕಳ ಮಾತೆ ಈಗೆಲ್ಲಿರುವಳೊ! ಆ ಶಿಶುಗಳನ್ನು ಘಾತಿಸಲು ಮನಸ್ಸಾಗದೆ ಕರುಣೆತೋರಿದ ಲಕ್ಷ್ಮಣನು ಗಾಯಗೊಂಡಿರಬೇಕು– ಎಂದು ಹಲವು ವಿಧವಾಗಿ ರಾಮನು ಯೋಚಿಸುತ್ತಾ ನಿಟ್ಟುಸಿರುಬಿಟ್ಟನು. ಅಷ್ಟರಲ್ಲಿ ಯುದ್ಧಭೂಮಿಯಿಂದ ಓಡಿಬಂದ ದೂತನು.

'ಸ್ವಾಮಿಯೇ, ಲಕ್ಷ್ಮಣನಿಗೆ ಪ್ರಾಣ ಬರುವುದೋ ಇಲ್ಲವೋ ಕಾಣೆವು! ಸಕಲ ಸೈನ್ಯವೂ ಮಡಿಯಿತು. ಶತ್ರುಘ್ನನ ಸ್ಥಿತಿಗತಿ ತಿಳಿಯದು. ಈ ದೀಕ್ಷೆಯಿಂದೇನು ಪ್ರಯೋಜನ?' ಎಂದು ಮೊರೆಯಿಟ್ಟರು. ಅವರನ್ನು ಗದರಿಸಿದ ಭರತನು ರಾಘವನಿಗೆ ನಮಸ್ಕರಿಸಿ.

'ಈ ಧೂತರು ಭಯವಿಹ್ವಲರಾಗಿದ್ದಾರೆ. ಶತ್ರುಘ್ನ ಲಕ್ಷ್ಮಣನು ಯುದ್ಧ ಆಯಾಸದಿಂದ

ಮೈಮರೆದು ವಿಶ್ರಾಂತಿಹೊಂದುತ್ತಿರುವರಲ್ಲದೆ, ಅವರಿಗೆ ಮರಣವೆಲ್ಲಿಯದು! ದೊರೆಯೆ ಹೆದರಬೇಡ. ನನ್ನನ್ನು ಕಳುಹಿಸು. ಆ ಮಕ್ಕಳ ಮೇಲೆ ಕರುಣೆ ತೋರದೆ, ಕುದುರೆಯನ್ನು ಬಿಡಿಸಿತರುವೆನು.'

'ನಿನ್ನ ಮನೋಭಿಲಾಷೆಯಂತೆ ಆಗಲಿ' ಎಂಬ ನುಡಿಯೊಡನೆ ಶ್ರೀರಾಮನು ಅಪ್ಪಣೆ ನೀಡಿದನು.

ಭರತನು ಜಾಂಬವಂತ, ಸುಷೇಣ, ಅಂಗದ, ಹನುಮಂತ, ನಳ, ನೀಲ ಮೊದಲಾದ ಕಪಿ ದಳಪತಿಗಳ ಸೈನ್ಯ ಹಾಗೂ ಉಳಿದ ಚತುರಂಗಬಲದೊಡನೆ ಹೊರಟನು. ಗಂಗಾನದಿಯತೀರವನ್ನು ತಲುಪಿ, ಆಂಜನೇಯನಿಗೆ ಯುದ್ಧರಂಗದ ವೃತ್ತಾಂತವನ್ನು ತಿಳಿದು ಬರಲು ಹೇಳಿದನು. ಹನುಮಂತನು ಹಾರಿ ಯುದ್ಧರಂಗಕ್ಕೆ ಹೋಗಿ, ಕುಶನ ಅಂಕಿತದ ಬಾಣದಿಂದ ಮಡಿದ ಸೇನೆಯನ್ನು ಕಂಡನು. ಶ್ರೀರಾಮನು ನಿನ್ನ ಮಗಳಾದ ಸೀತೆಯನ್ನು ತೊರೆದುಬಿಟ್ಟನೆಂದು ಕೋಪಿಸಿಕೊಳ್ಳಬೇಡ. ಸವಾಧಾನದಿಂದಿರು ಎಂದು ಹೇಳುತ್ತ–ಭೂಮಿತಾಯಿಯ ಮುನಿಸನ್ನು ಸಂತೈಸುವಂತೆ–ನೆಲದಲ್ಲಿ ಬಿದ್ದು ಮೂರ್ಛಿತರಾಗಿದ್ದ ಲಕ್ಷ್ಮಣ, ಶತ್ರುಘ್ನರನ್ನು ನೋಡಿದನು. ಅವರಿಬ್ಬರನ್ನು ಎತ್ತಿಕೊಂಡು ಭರತನಬಳಿಗೆ ಬಂದನು. ಭರತನುರತ್ನಖಚಿತ ರಥದಲ್ಲಿ ಅವರನ್ನು ಮಲಗಿಸಿದನು. ಸಿಟ್ಟಿನಿಂದ ಕೋದಂಡವನ್ನು ಜೇಗೇಯ್ದು ಸೇನೆಯೊಡಗೂಡಿ ಬಾಲಕರಮೇಲೆ ಯುದ್ಧಕ್ಕೆಹೊರಟನು.

ಶತ್ರುಗಳಸೇನೆ ಬರುವುದನ್ನು ಕಂಡ ಕುಶಲವರು ಕೋಪದಿಂದ ಬಿಲ್ಲು ಬಾಣಗಳನ್ನು ತೆಗೆದುಕೊಂಡು ಶತ್ರುಸೈನಿಕರ ತಲೆಗಳನ್ನು ಅಣ್ಣೆಕಲ್ಲಾಡಿಸಿದಂತೆ ಹೊಡೆದುರುಳಿಸಿದರು. ಕಣ್‌ರೆಪ್ಪೆ ಬಡಿಯುವಷ್ಟರಲ್ಲಿ, ಯೋಜನದಗಲದಲ್ಲಿ ಎಲ್ಲ ಕಡೆಯೂ ಬಾಣಗಳು ಆವರಿಸಿದವು. ಆ ಬಾಲಕರ ಪರಾಕ್ರಮವನ್ನು ಮೆಚ್ಚಿದ ದೇವತೆಗಳು ಹೂಮಳೆಸುರಿಸಿದರು.

ಕುಶಲವರ ಬಾಣಕ್ಕೆ ಆನೆಗಳ ಸೊಂಡಿಲು, ಕುದುರೆಗಳ ಕಾಲುಗಳು, ರಾವುತ ಮಾವುತರ ತಲೆಗಳು, ಆಯುಧವಿಡಿದ ಪರಾಕ್ರಮಿಗಳ ಕೈಗಳು ಸಾಲುಸಾಲಾಗಿ ಭೂಮಿಗೆ ಉರುಳಿದವು. ಕಪಿಗಳ ಮೈಯಲ್ಲಿ ಬೆಣೆಯನ್ನು ಬಿಗಿದಂತೆ ಬಾಣಗಳು ನಾಟಿದವು. ಜನಮೇಜಯರಾಯನೇ ಕೇಳು. ಕುಶಲವರ ಮುಂದೆ ನಿಂತು ಯುದ್ಧ ಮಾಡುವ ಶತ್ರುಗಳು ಸೋಲುವರಲ್ಲದೆ, ಗೆಲ್ಲುವ ವೀರರಿಲ್ಲ!

ನಿಮಿಷದಲ್ಲಿ ಸೈನ್ಯ ಸಂಹಾರ ಮಾಡಿದ ಆ ಮಕ್ಕಳ ಸಾಹಸವನ್ನು ನೋಡಿದ ಆಂಜನೇಯನು ಓಡಿಬಂದು.

'ಅಯ್ಯಾ ಭರತನೇ, ಬಾಲಕರ ಆಕಾರವನ್ನು ನೋಡು! ಅವರು ಶ್ರೀರಾಮನಂತಿದ್ದಾರೆ!'

ಕುತೂಹಲವೇ ಕಣ್ಣಾದ ಭರತನು ಕುಶನ ಸಮ್ಮುಖಕ್ಕೆ ಹೋಗಿ ಅವರ ಮುಖವನ್ನು ನಿಟ್ಟಿಸಿದನು. ಸಂತೋಷ ಉಕ್ಕಿಬಂದು, ಅತಿಯಾದ ಪ್ರೀತಿಯಿಂದ ರೋಮಾಂಚನಗೊಂಡು ಮಾತಾಡಿಸಿದನು.

'ಎಲೈ ವತ್ಸನೇ. ನೀನು ಯಾರ ಮಗ? ಇವನು ನಿನಗೇನಾಗಬೇಕು? ನನ್ನ ಒಡಹುಟ್ಟಿದವರನ್ನು ತುಂಬಾ ನೋಯಿಸಿದಿರಿ, ನಮ್ಮ ದೊಡ್ಡಸೇನೆಯನ್ನು ಸಂಹಾರ ಮಾಡಿದಿರಿ. ಇನ್ನಾದರೂ ಕುದುರೆಯನ್ನು ಬಿಟ್ಟುಹೋಗಿ. ಮತ್ಸರ ಬೇಡ. ತಾಯಿಯ ಬಳಿಹೋಗಿ ಸುಖದಿಂದಿರಿ.'

'ಕಟ್ಟಿದ ಕುದುರೆಯನ್ನು ಬಿಡುವುದಿಲ್ಲ. ಈತ ನನ್ನ ತಮ್ಮ. ನಾವು ವಾಲ್ಮೀಕಿಯ ಕಡೆಯವರು. ನಿನ್ನ ಸಹೋದರರನ್ನು ಹೊಡೆದುರುಳಿಸಿದಂತೆ, ನಿನ್ನನ್ನೂ ಹೊಡೆದು ಕೆಡವಿದ ಬಳಿಕ ಸಂತೋಷದಿಂದ ತಾಯಬಳಿಗೆ ಹೋಗುವೆವು' ಎಂದು ನಸುನಗುತ್ತ ಬಾಣಗಳನ್ನು ಹೂಡಿ ಭರತನನ್ನು ಎದುರಿಸಿದನು. ವಾನರಸೇನೆ ಮುತ್ತಿಕೊಳ್ಳಲು. ತಮ್ಮನನ್ನು ಕುದುರೆಯಬಳಿಗೆ ಕಳುಹಿಸಿದನು.

ಕುಶನು ಕಣೆಗಳಿಂದ ಹಗೆಗಳ ಕಿರೀಟದ ರತ್ನಗಳನ್ನೂ, ಎದೆಯ ರತ್ನಹಾರಗಳನ್ನೂ ಕ್ಷಣದಲ್ಲಿ ಭೂಮಿಗುರುಳಿಸಿದನು. ಭರತ ಮತ್ತು ವಾನರ ದಂಡನಾಯಕರ ಮೈಯಲ್ಲಿ ನಾಟಿಕೊಳ್ಳುವಂತೆ ಬಾಣಗಳನ್ನು ಪ್ರಯೋಗಿಸಿದನು. ಎಲ್ಲಿ ಕುಶನ ಅಂಬು ಸೋಂಕಿತೋ ಅಲ್ಲಿ ಮೂರ್ಛೆ ಸಾವುಗಳುಂಟಾಗಿ ಸೈನ್ಯವು ತಲ್ಲಣಿಸಿ ದಿಕ್ಕುದಿಕ್ಕಿಗೆ ಚೆದುರಿಹೋಯಿತು.

ಭರತನ ಅಂಗೋಪಾಂಗವು ಕುಶನಬಾಣಗಳಿಂದ ತುಂಬಿಹೋಗಿ, ಆತನು ವಿಗತ ಚೇತನನಾಗಿ ಭೂಮಿಗೆ ಬಿದ್ದನು. ಹನುಮಂತನು ಒಂದು ದೊಡ್ಡಬೆಟ್ಟವನ್ನು ಮೇಲೆತ್ತಿ ತಂದು ಕುಶನಮೇಲೆ ಎಸೆದನು. ಅದನ್ನು ಅವನು ಹುಲ್ಲಿನಂತೆಣಿಸಿ ಪಕ್ಕಕ್ಕೆತಳ್ಳಿ, ಹುಸಿನಗುತ್ತ ಬಾಣಗಳಿಂದ ಘಾತಿಸಿದನು. ಅಖಿಲಸೈನ್ಯವನ್ನು ನೆಲಕ್ಕುರುಳಿಸಿ, ಕುದುರೆಯಿದ್ದೆಡೆಗೆ ಬಂದು ತಮ್ಮನೊಡಗೂಡಿ ನಿಂತನು.

**ಶ್ರೀರಾಮನೊಡನೆ ಕುಶ ಲವರ ಕಾಳಗ**

ಆ ವೃತ್ತಾಂತವನ್ನು ದೂತರು ಶ್ರೀರಾಮನಿಗೆ ತಿಳಿಸಲು, ಆತನು ಬಹಳನೊಂದು, ವಿಸ್ಮಯಗೊಂಡನು. ದೀಕ್ಷಾಸನವನ್ನು ಬಿಟ್ಟು, ಸುಗ್ರೀವ ವಿಭೀಷಣರೊಡಗೂಡಿ ಯುದ್ಧಕ್ಕೆ ರಥಾರೂಢನಾಗಿ ಹೊರಟನು.

ರಣರಂಗದಲ್ಲಿ ಮೂರ್ಛೆಗೊಂಡು ಬಿದ್ದಿರುವ ತಮ್ಮಂದಿರನ್ನು, ಮಡಿದ ಸೇನಾ ಸಮೂಹವನ್ನು, ಕುದುರೆಯನ್ನುಕಟ್ಟಿ ಬಿಲ್ಲುಹಿಡಿದುನಿಂದ ಕುಶಲವರನ್ನು ಕಂಡು ಬೆರಗಾದನು. ಆ ಬಾಲಕರನ್ನು ವಿನಯಪೂರ್ವಕವಾಗಿ, ಮಧುರ ಧ್ವನಿಯಿಂದ ಮಾತಾಡಿಸಿದನು.

'ಎಲೈ ಹಸುಳೆಗಳಿರಾ, ನಿಮಗೆ ಧನುರ್ವೇದವನ್ನು ಹೇಳಿಕೊಟ್ಟವರು ಯಾರು? ನೀವಿರುವುದೆಲ್ಲಿ? ಸಾಕಿದವರು ಯಾರು? ತಂದೆ ತಾಯಿಗಳಾರು? ನಮ್ಮ ಕುದುರೆಯನ್ನು ಕಟ್ಟುವ ಛಲವೇಕೆ? ನಮ್ಮ ಸೈನ್ಯವನ್ನು ಜಯಿಸುವ ಶೌರ್ಯ ಹೇಗುಂಟಾಯಿತು?'

'ಎಲೈ ರಾಜೇಂದ್ರನೇ, ನೀನು ನಮ್ಮೊಡನೆ ಯುದ್ಧಮಾಡಿ ಕುದುರೆಯನ್ನು ಬಿಡಿಸಿಕೊ! ಅಪ್ರಯೋಜಕ ಮರುಳು ಮಾತೇಕೆ?ನಿರುಪಮವಾದ ಕ್ಷಾತ್ರ ಪೌರುಷವನ್ನು ಬಿಟ್ಟು, ಬರಿದೆ ಹುಟ್ಟಿ ಬೆಳೆದ ಸಂಗತಿಗಳನ್ನು ಕೇಳಿದರೆ, ಈ ಲೋಕ ಮೆಚ್ಚುವುದೇ? ನಮ್ಮ ಪರಾಕ್ರಮವನ್ನು ತಿಳಿ' ಎಂದು ಕುಶನು ಸೂರ್ಯಕುಲ ತಿಲಕನನ್ನು ಲಕ್ಷಿಸದೆ ನುಡಿಯಲು, ಶ್ರೀರಾಮನು ತನ್ನ ಗುಣ ಲಕ್ಷಣ ಸಾಹಸದ ಕಿರಣಗಳು ಕಣ್ಮುಂದೆ ಹೊಳೆಯುತ್ತಿರುವಾಗ–ಶಾಂತಚಿತ್ತನಾಗಿ,

'ಮಕ್ಕಳಾದ ನಿಮ್ಮೊಡನೆ ಯುದ್ಧವೇ? ಮೂರ್ಛೆಗೊಂಡು ಬಿದ್ದಿರುವ ತಮ್ಮಂದಿರನ್ನು ನೋಡಿದರೂ, ಕೋಪಗೊಂಡು ಬಾಣವನ್ನು ತೊಡಲು ಆಗುತ್ತಿಲ್ಲ! ನಿಮ್ಮ ಜನ್ಮವೃತ್ತಾಂತ ಹೇಳಿ, ತಿಳಿದುಕೊಳ್ಳುವೆ.'

ಜನಮೇಜಯರಾಯನೇ ಕೇಳು. ಶ್ರೀರಾಮಚಂದ್ರನ ವಾತ್ಸಲ್ಯದ ರಸನುಡಿಗೆ, ಕುಶನು ಲೋಕಾನಂದಕರವಾದ ವಾಕ್ಯಗಳಿಂದ ಹೀಗೆ ಹೇಳಿದನು:

'ಈ ತಪೋವನದಲ್ಲಿ ನಮ್ಮಿಬ್ಬರನ್ನು ಸೀತೆಯೊಬ್ಬಳೇ ಅವಳಿ ಮಕ್ಕಳಾಗಿ ಹೆತ್ತಳು. ನಮ್ಮನ್ನು ಅಕ್ಕರೆಯಿಂದಸಾಕಿ, ಜಾತಕರ್ಮ ಉಪನಯನಾದಿ ಸಂಸ್ಕಾರಗಳನ್ನು ಮಾಡಿ; ವೇದಶಾಸ್ತ್ರ ಪುರಾಣಗಳನ್ನು ಹೇಳಿಕೊಟ್ಟು; ಧನುರ್ವಿದ್ಯೆಯನ್ನು ಕಲಿಸಿ ನೀತಿಶಾಸ್ತ್ರಗಳನ್ನು ಬೋಧಿಸಿ ರಾಮಾಯಣವನ್ನು ಓದಿಸಿ, ಮಹಾತಿಬಲರನ್ನಾಗಿಸಿದವರು ವಾಲ್ಮೀಕಿ ಮುನಿ.'

'ರಾಮಾಯಣ ತಿಳಿದ ಧೀರವ್ಯಕ್ತಿತ್ವ ನಿಮ್ಮದು!'

'ಹೌದು. ರಾಮಾಯಣ ಪಠನದ ಯೋಗದಿಂದ ನಮಗೆ ಕ್ಷೇಮ, ಪುಷ್ಟಿ, ನಿಶ್ಚಲಮತಿ, ನಿರಾಲಸ್ಯ ಉಂಟಾಗಿದೆ. ಮಹಾ ಸೈನ್ಯವನ್ನು ಜಯಿಸಲು ಸಾಧ್ಯವಾಗಿದೆ.'

ಕುಶನ ಸವಿಮಾತುಗಳು ಕಿವಿಗೆ ತಾಗುತ್ತಿದ್ದಂತೆ – ಶುದ್ಧ ಮಧುರ ಸೀತೆ ಮನವನ್ನು ಆವರಿಸಿಕೊಂಡಳು. ಶ್ರೀರಾಮನು ಮೂರ್ಛಿತನಾದ. ಎದೆಮುಗುಳ ಆನಂದದಲ್ಲಿ ಕರಗಿಹೋಗಿ, ಸುಗ್ರೀವನೊಡನೆ,

'ಎಲೈ ಸುಗ್ರೀವನೇ. ಈ ಮಕ್ಕಳ ನುಡಿಗಳನ್ನು ಕೇಳಯ್ಯಾ! ವನವಾಸಿಗಳಾದ ಈ ನಿಪುಣರ ತಂದೆಯಾರೆಂದು ಕೇಳು!'

ಜ್ಯೋತಿ ಜ್ಯೋತಿಗಳ ಬಾಂಧವ್ಯದ ಪ್ರಕಾಶದಲ್ಲಿ ಮುಳುಗಿ ಆನಂದಶೀಲನಾಗಿದ್ದ ಸುಗ್ರೀವ ನುಡಿದನು:

'ದೇವ, ಇವರು ಸೂರ್ಯವಂಶದಲ್ಲಿ ಹುಟ್ಟಿದವರು. ಪುರುಷೋತ್ತಮನ ಸಂತತಿಯವರು. ಸ್ವಾಮಿ, ನಿನ್ನದೇಪ್ರತಿರೂಪ.'

**ನೀಲನ ರಕ್ತದಿಂದಹುಟ್ಟಿದ ಒಂದು ಕೋಟಿ ಭಯಂಕರಕಪಿಗಳು**

ಅಪೂರ್ವ ಭವ್ಯಾನುಭವದಲ್ಲಿ ಅವರಿರುವಾಗ, ಯಜ್ಞಾಶ್ವವನ್ನು ಬಿಚ್ಚಿ ಕೊಂಡೊಯ್ಯಲು ನೀಲನೆಂಬ ಕಪಿನಾಯಕ ಹೋದನು. ಅದನ್ನು ಕಂಡ ಕುಶನು ರೋಷದಿಂದ ಅವನನ್ನು ಘಾತಿಸಿದನು. ಅವನ ಮೈಯ ರಕ್ತದಿಂದ ಭಯಂಕರ ಆಕಾರದ ಒಂದುಕೋಟಿ ಕೋತಿಗಳು ಹುಟ್ಟಿದವು. ಅವು ಅವನ ಪ್ರತಿರೂಪದಂತಿದ್ದು ಕಲ್ಲುಗುಂಡುಗಳನ್ನು ಹಿಡಿದು ರಣಾಂಗಣದ ತುಂಬ ಮುತ್ತಿಕೊಂಡವು.

ಆ ಸ್ಥೂಲ ಕಾಯದ ವಾನರ ಸೈನ್ಯವನ್ನು ಜಯಿಸಲು ಕುಶನು ಸೂರ್ಯನನ್ನು ಪ್ರಾರ್ಥಿಸಿದನು. ಒಂದೂವರೆ ಯೋಜನದ ಅಳತೆಯ, ಬಾಣಾಘಾತದ ರಕ್ತವನ್ನು ನೆಲಕ್ಕೆ ಬೀಳದ ಹಾಗೆ ತಡೆಯುವ ಅಕ್ಷಯಬಾಣಗಳನ್ನು ಪಡೆದನು. ಅವುಗಳನ್ನು ಹೂಡಿ ಕಪಿಸಮೂಹವನ್ನು ಹೊಡೆದುಕೆಡವಿದನು. ನೀಲನನ್ನು ಮೂರ್ಛೆಗೊಳಿಸಿ, ವಿಭೀಷಣನ ಸಾಮರ್ಥ್ಯವನ್ನುತಡೆದು, ಆ ಸೈನ್ಯವನ್ನು ಉರುಳಿಸಿದನು.

**ಧರೆಯಲ್ಲಿ ಕ್ಷತ್ರಿಯರ ಮನಸ್ಸು ಎಷ್ಟು ಕ್ರೂರ!**

ಮುಖ ನೋಡುವುದಕ್ಕೂ ಒಬ್ಬರಿಲ್ಲದಂತೆ ಎಲ್ಲರೂ ಸತ್ತುಹೋದರು. ಏಕಾಕಿಯಾಗಿ ಉಳಿದ ಶ್ರೀರಾಮನು ರೋಷಾವೇಶದಿಂದ ಮಕ್ಕಳಮೇಲೆ ಬಾಣಗಳನ್ನು ಪ್ರಯೋಗಿಸಿದನು.

ಧರೆಯಲ್ಲಿ ಕ್ಷತ್ರಿಯರ ಮನಸ್ಸು ಎಷ್ಟು ಕ್ರೂರ!

ರಾವಣ, ಕುಂಭಕರ್ಣರ ತಲೆಕಡಿದ ರಾಮಬಾಣಗಳು ಎಂದೂ ವ್ಯರ್ಥವಾಗದಂತಹವು. ಆದರೆ ಕುಶಲವರು ಆ ರಾಮಬಾಣಗಳನ್ನು ನಡುವೆಯೇ ನುಚ್ಚುನೂರಾಗುವಂತೆ ತುಂಡುಮಾಡಿದರು. ಶ್ರೀರಾಮನನ್ನು ಕಣೆಗಳಿಂದ ಮುಚ್ಚಿಬಿಟ್ಟರು. ದೇವತೆಗಳು ಆಶ್ಚರ್ಯಪಡುವಂತೆ ತಂದೆಮಕ್ಕಳ ನಡುವೆ ಯುದ್ಧ ನಡೆದುಹೋಯಿತು.

ತಂದೆಯಾದ ರಾಮನಿಗೆ ತನ್ನ ಮಕ್ಕಳಲ್ಲಿ–ಪ್ರೀತಿಯುಂಟೋ ಇಲ್ಲವೋ ನೋಡುವೆವು ಎಂಬಂತೆ ಕುಶಲವರ ಬಾಣಗಳು ರಾಮನ ಮೈಯಲ್ಲಿ ನಾಟಿಕೊಂಡವು. ಈ ಕೌತುಕದ ಕಥೆಯನ್ನು ಜನಮೇಜಯರಾಯನೇ ಕೇಳು.

ಚಿಗುರಿದ ಮಾವಿನಮರ ಬೇಸಗೆಯ ಝಳಕ್ಕೆ ಸೊರಗುವ ಹಾಗೆ, ಶ್ರೀರಾಮನು ತನ್ನ ಕೋಮಲದೇಹದ ಎಲ್ಲಕಡೆ ನಾಟಿದ ಅಂಬುಗಳಿಂದ ಹೊರಟ ರಕ್ತಧಾರೆಗೆ ಬಳಲಿದನು. ಜ್ಞಾನ ತಪ್ಪಿ ರಥದಲ್ಲಿಮಲಗಿದನು.

ಕುಶಲವರು ಮೂರ್ಛೆಹೋದ ಶ್ರೀರಾಮನಲ್ಲಿಗೆ ಬಂದರು. ಆತನ ಮಂಗಳಕರವಾದ ರೂಪವನ್ನು ನೋಡಿ; ಕಿವಿಯ ಕುಂಡಲಗಳನ್ನು, ಕೊರಳಿನಲ್ಲಿದ್ದ ಏಕಾವಳಿಯ ಸರವನ್ನು ತೆಗೆದುಕೊಂಡರು. ಲಕ್ಷ್ಮಣ, ಭರತ, ಶತ್ರುಘ್ನರ ಆಭರಣಗಳನ್ನು ಬಿಚ್ಚಿಕೊಂಡು ಒಂದು ವಸ್ತ್ರದಲ್ಲಿ ಕಟ್ಟಿಕೊಂಡರು. ಅನಂತರ ಲವನು ಕುಶನಿಗೆ,

'ಎಲೈ ಅಣ್ಣನೇ ಕೇಳು. ಒಂದುರಥವನ್ನು ಹತ್ತಿ ಇನ್ನೂ ಎಚ್ಚೆತ್ತಿರುವವರ ಜುಟ್ಟುಹಿಡಿದು ಎಳೆತರುತ್ತೇನೆ' ಎಂದು ಹೇಳಿದನು. ಅದನ್ನು ಕೇಳಿದ ಹನುಮಂತನು ಜಾಂಬವಂತನಿಗೆ,

'ನೋಡಿದಿರಾ! ಕುಶಲವರು ಉಸಿರಿರುವವರನ್ನು ಎಳೆದೊಯ್ಯುವರು, ಇವರೊಡನೆಯುದ್ಧ ಮಾಡಲು ನಾವು ಶಕ್ತರಲ್ಲ. ಇವರು ನಮ್ಮನ್ನು ಸೀತೆಯ ಬಳಿಗೆ ಕರೆದುಕೊಂಡು ಹೋಗಲಿ. ಭಕ್ತರಾದ ನಮ್ಮನ್ನು ದೇವಿಯು ಕಾಪಾಡಲಿ ಅಥವಾ ಬಿಡಲಿ'.

ಅವರ ಸಂವಾದ ಆಲಿಸಿದ ಲವನು, ಅವರನ್ನು ಎಳೆದುಕೊಂಡು ಬಂದು,

'ಅಣ್ಣಾ, ಕೌತುಕದ ವಾನರರನ್ನು ನೋಡು' ಎಂದನು. ತಮ್ಮನನ್ನು ಆಲಂಗಿಸಿಕೊಂಡನು. ಈರ್ವರೂ ಸಕಲ ಆಭರಣಗಳೊಡನೆ, ಸೆರೆ ಸಿಕ್ಕಿದ ಕಪಿವೀರರನ್ನು ಹಿಡಿದುಕೊಂಡು ಆಶ್ರಮಕ್ಕೆ ಹೋದರು.

ನವೋನವ ಚಮತ್ಕಾರದ ತನ್ನಮಕ್ಕಳು ಏನಾದರೋ ಎಂದು ಜಾನಕಿ ಚಿಂತಿಸುತ್ತಿದ್ದಳು. ಆಗ ಕುಶಲವರು–ರಾಮಲಕ್ಷ್ಮಣಭರತಶತ್ರುಘ್ನರ ಆಭರಣಗಳನ್ನೂ, ಬೇಟೆಯಲ್ಲಿಸಿಕ್ಕಿ ಭಯಗೊಂಡ ಹುಲ್ಲೆಯ ಮರಿಯಂತೆ ಮಾತಿಲ್ಲದೆ, ಮೈಯುಡುಗಿ ನೊಂದಿರುವ ಹನುಮಜಾಂಬವಂತರನ್ನು – ತಂದುಕೊಟ್ಟು ನಮಸ್ಕರಿಸಿದರು. ಅದನ್ನು ಕಂಡ ಸೀತೆ ಭಯದಿಂದ ಗಡಗಡ ನಡುಗಿ ಹೇಳಿದಳು:

'ಯಾರೂ ತಿಳಿಯದ ಹಾಗೆ ನಾನು ಈ ಕಾನನದಲ್ಲಿದ್ದೆನು. ನಮಗೆ ರಾಜರ ಆಭರಣಗಳೇತಕ್ಕೆ? ಸ್ವಾಮಿ ಭಕ್ತರಾದ ಕಪಿಶ್ರೇಷ್ಠರಿಗೆ ಈ ಕಷ್ಟ ಹೇಗಾಯಿತು? ಮಕ್ಕಳಿರಾ ಕ್ರೂರಕೆಲಸಗಳಿಂದ, ಘೋರಕರ್ಮಗಳಿಂದ ದಾರಿತಪ್ಪಿದಿರಿ! ವಾಲ್ಮೀಕಿ ಮುನಿವರನು ಇದುವರೆಗೂ ಬರಲಿಲ್ಲ. ನಾನೇನು ಮಾಡಲಿ? ಈಗಲೇ ಇವರನ್ನು ರಣರಂಗದಲ್ಲಿ ಬಿಟ್ಟುಬನ್ನಿ. ಕುಶಲವರು ತಾಯಿಯ ನುಡಿಯಂತೆ ಅವರನ್ನು ರಣರಂಗದಲ್ಲಿ ಬಿಟ್ಟುಬಂದರು.

* * *

ತನ್ನ ಆಶ್ರಮದಲ್ಲಿ ನಡೆದ ವೃತ್ತಾಂತವನ್ನೆಲ್ಲ ನಾರದರಿಂದ ಕೇಳಿದ ವಾಲ್ಮೀಕಿಯು, ಪಾತಾಳ ಲೋಕದಿಂದ ಹೊರಟುಬಂದರು. ಸೀತೆಯು ಉಕ್ಕುಕ್ಕುವ ದುಃಖದಿಂದ ನಮಸ್ಕರಿಸಿದಳು. ಶಿಷ್ಯರು ಕೈಮುಗಿದರು. ಕುಶಲವರು ಪಾದದ ಮೇಲೆ ಬಿದ್ದು ವಂದಿಸಿದರು.

ಶರವೇದ ಮೂರ್ತಿಗಳಂತೆ ಹೊಳೆಯುವ ಬಾಲಕರನ್ನು ಎತ್ತಿಕೊಂಡು,

'ಮಕ್ಕಳೇ, ನಿಮಗೆ ರಾಮನ ಸೇನೆಯೊಡನೆ ಯುದ್ಧವಾಯಿತೇ? ಯುದ್ಧಕ್ಕೆ ಬಂದು ಸೋತವರು ಯಾರು? ನಿಮ್ಮಮೇಲೆ ಒಂದೂ ಬಾಣಾಘಾತದಿಂದಾದ ಗಾಯಗಳಿಲ್ಲವಲ್ಲ! ಇಂಥ ಪರಾಕ್ರಮ ಹೇಗೆಬಂದಿತು?'

'ಎಲೈ ತಾತ, ನೀವಿರಲು ನಮಗೆ ಯಾವಾಗಲೂ ಕ್ಷೇಮ! ನೀವು ಉಪದೇಶಿಸಿದ ದಿವ್ಯಮಂತ್ರಾಸ್ತ್ರಗಳ ಪ್ರಯೋಗದಿಂದ ನಾವು ಶತ್ರುಗಳನ್ನು ಗೆದ್ದೆವು. ತಪೋವನಕ್ಕೆ ಒಂದು ಕುದುರೆ ಬಂದಿತ್ತು. ಅದನ್ನು ಲವ ಕಟ್ಟಿಹಾಕಿದ. ಅವನ ಮೇಲೆ ಸೇನೆ ಮುತ್ತಿಕೊಂಡಿತ್ತು. ಶತ್ರುಘ್ನನೊಡನೆ ಯುದ್ಧಮಾಡಿ ಲವನುಸೋತ, ನಾನು ಸಹಾಯಕ್ಕೆ ಹೋದೆ. ಲಕ್ಷ್ಮಣ, ಭರತ, ಶ್ರೀರಾಮರು ಯುದ್ಧಕ್ಕೆ ಬಂದರು. ದೊರೆಗಳನ್ನೂ, ಚತುರಂಗಸೇನೆಯನ್ನೂ ಕೊಂದು ಕೆಡಹಿದೆ.' ಎಂದು ಕುಶನು ಹೇಳಿದನು.

'ಅಯ್ಯೋ, ಮಹಾಪರಾಧವಾಯಿತಲ್ಲಾ!' ಎಂದು ವಾಲ್ಮೀಕಿ ನುಡಿದರು. ಕಾತರದ ಕಣ್ಣುಗಳಲ್ಲಿ ಕಂಬನಿದುಂಬಿಕೊಂಡಿರುವ ಸೀತೆಯನ್ನು ಸಮಾಧಾನ ಪಡಿಸಿದರು. ಸಮಸ್ತ ಋಷಿಸಮೂಹದೊಡನೆ ಯುದ್ಧರಂಗಕ್ಕೆ ಬಂದರು.

**ನೊಂದಗಾಯದ ನೆತ್ತರೊರತೆಗಳ ರಾಮನಂ ಕಂಡು ಮುನಿಬೆರಗಾದನು**

ಶ್ರೀರಾಮಚಂದ್ರನು ಸಮುದ್ರಕ್ಕೆ ಸೇತುವೆಯನ್ನು ಕಟ್ಟುವಾಗ ಬೆಟ್ಟಗಳನ್ನೆಲ್ಲಾ ತರಿಸಿದನು. ಭೂಮಿಗೆ ಆಧಾರವಾಗಿದ್ದ ಬೆಟ್ಟಗಳ ಆಶ್ರಯ ತಪ್ಪಿಹೋಯಿತೆಂದು ಭಾವಿಸಿದ ಅವನ ಮಕ್ಕಳು – ಈಗ ಬೆಟ್ಟಗಳನ್ನು ತರಿಸಿ ಹರಡಿರುವರೋ ಎಂಬಂತೆ ಆನೆ ಕುದುರೆಗಳು ಸತ್ತುಬಿದ್ದಿದ್ದವು. ಉಗ್ರವಾಗಿ ಗೋಚರಿಸುತ್ತಿದ್ದ ರಣರಂಗದಲ್ಲಿ ವಾಲ್ಮೀಕಿ ಮುನಿಯು ರಾಮನನ್ನು ಕಂಡನು.

ಕಾಂತಿಗೆಟ್ಟು, ಎಡಬಲಕ್ಕೆಜಾರಿಬಿದ್ದ ಬಿಲ್ಲುಬಾಣಗಳ ನಡುವೆ, ನೆತ್ತರೊರತೆಯಲ್ಲಿ ಮೈ ಮರೆದು ಮಲಗಿರುವ ಶ್ರೀರಾಮನನ್ನು ಕಂಡು ವಾಲ್ಮೀಕಿಗೆ ಆಶ್ಚರ್ಯವಾಯಿತು. ಮುನಿವರನು ಕಮಂಡಲದಿಂದ ನೀರನ್ನು ಪ್ರೋಕ್ಷಿಸಲು, ಆದಿಶೇಷನ ಮೇಲೆ ಮಲಗಿನಿದ್ರಿಸುತ್ತಿದ್ದ ನಾರಾಯಣನು ಎದ್ದಂತೆ ಕಣ್ತೆರೆದುನೋಡಿ, ವಾಲ್ಮೀಕಿ ಋಷೀಶ್ವರನಿಗೆ ನಮಸ್ಕರಿಸಿದನು.

'ಜಗನ್ನಾಥ, ಸರ್ವಕಾರಣ, ರಾಕ್ಷಸಾಂತಕ, ಭಕ್ತವತ್ಸಲ, ಕೃಪಾಳು, ಶ್ರೀರಾಮನೇ ಸೈರಿಸು. ಚಿತ್ತಾವಧಾನ' ಎಂದು ವಾಲ್ಮೀಕಿಯು ಹೊಗಳಿದನು. ಶ್ರೀರಾಮನ ಸಿರಿಮುಡಿಗೆ ನಭದಿಂದ ಹೂಮಳೆ ಸುರಿಯಿತು. ಸಂತೋಷದಿಂದ ದೇವ ದುಂದುಭಿ ಮೊಳಗಿದುವು. ಋಷಿಯ ಮಂತ್ರಪೂತ ಜಲದಿಂದ ಭರತಾದಿಗಳು ಬದುಕಿದರು. ದೇವತೆಗಳು ಅಮೃತವನ್ನು ಚಿಮುಕಿಸಲು, ಮಡಿದಿದ್ದ ಸಮಸ್ತ ಸೈನಿಕರು ಜೀವಪಡೆದೆದ್ದರು. ಪೊರೆಬಿಟ್ಟ ಹಾವಿನಂತೆ ಚತುರಂಗಬಲ ನಲಿಯಿತು.

ವಾಲ್ಮೀಕಿಯು ಧ್ಯಾನದಿಂದ ಕಾಮಧೇನುವನ್ನು ಬರಮಾಡಿಕೊಂಡರು. ಸಂಪ್ರೀತಿಯಿಂದ ಬೇಕಾದ ಪದಾರ್ಥಗಳನ್ನು ತರಿಸಿದರು. ರಾಘವೇಶ್ವರನಿಗೆ ಕ್ಷೀರಾಭಿಷೇಕವನ್ನು ಮಾಡಿಸಿದರು. ಭರತಾದಿಗಳನ್ನು ಕುಳ್ಳಿರಿಸಿ ಶ್ರೀರಾಮನನ್ನು ಪೂಜಿಸಿದರು. ಕುಶಲವರನ್ನು ಶ್ರೀರಾಮನ ಪಾದಕಮಲದಲ್ಲಿ ಕೆಡಹಿ, ಮೆಲ್ಲಗೆ ಹೇಳಿದರು:

'ಎಲೈ ರಾಜೇಂದ್ರನೇ ಕೋಪಿಸಿಕೊಳ್ಳಬೇಡ. ನಿನ್ನನ್ನು ದಯಾಸಮುದ್ರನೆಂದು, ಶರಣಾಗತರಕ್ಷಕನೆಂದು ಮೂರುಲೋಕವು ಬಣ್ಣಿಸುತ್ತಿದೆ. ಈ ಮಕ್ಕಳು ನಿನ್ನ ಹೊಟ್ಟೆಯಲ್ಲಿ

ಹುಟ್ಟಿದವರು. ಜಾನಕಿಯ ಮಕ್ಕಳು. ನಾನು ವರುಣನ ಕರೆಯ ಮೇರೆಗೆ ಯಾಗಮಾಡಿಸಲು ಹೋಗಿದ್ದೆನು. ಈ ಯುದ್ಧದ ಕಾರಣ ನನಗೆ ತಿಳಿಯದು. ಎಷ್ಟೇ ಅಪರಾಧವಾಗಿದ್ದರೂ ಕ್ಷಮಿಸು.'

ಶ್ರೀ ರಾಮಚಂದ್ರನು ಲಕ್ಷ್ಮಣನೊಡನೆ,

'ಸೀತೆಯು ಹೇಗೆ ಈ ಮಕ್ಕಳನ್ನು ಪಡೆದಳು.'

'ನಿನ್ನ ಅಪ್ಪಣೆಯಂತೆ ಪೂರ್ಣಗರ್ಭಿಣಿಯಾದ ಸೀತೆಯನ್ನು ಗಂಗಾನದಿ ದಾಟಿಸಿ ಅರಣ್ಯದಲ್ಲಿ ಬಿಟ್ಟುಬಂದೆ. ಮುಂದಿನದು ನನಗೆ ತಿಳಿಯದು.'

ಅವರಿಬ್ಬರ ಮಾತುಗಳನ್ನು ಆಲಿಸಿದ ತಾಪಸಿ ವಾಲ್ಮೀಕಿಯು,

'ಜಾನಕಿಯು ದಿಕ್ಕಿಲ್ಲದವಳಾಗಿ, ವಿರಹ ತಾಪದಿಂದ ಅಲೆಯುತ್ತಿರುವುದನ್ನು ನೋಡಿ, ನಾನು ನನ್ನಆಶ್ರಮಕ್ಕೆ ಕರೆದುಕೊಂಡು ಹೋದೆನು. ಅಲ್ಲಿ ಅವಳಿ ಮಕ್ಕಳನ್ನು ಹಡೆದಳು' ಎಂದು ತಾನು ಮಕ್ಕಳಿಗೆ ವಿದ್ಯಾಭ್ಯಾಸ ನೀಡಿ, ಶಸ್ತ್ರಾಸ್ತ್ರ ಪರಿಣತರನ್ನಾಗಿಸಿದ್ದನ್ನು ವಿವರಿಸಿ ಹೇಳಿದರು.

**ಕುಶಲವರು ಹಾಡಿದ ರಾಮಾಯಣ**

ಕುಶಲವರನ್ನು ಪರ್ಣಶಾಲೆಗೆ ಕಳುಹಿಸಿ ಎರಡುವೀಣೆಗಳನ್ನು ತರಿಸಿದರು. ತಾನು ಅಭ್ಯಾಸ ಮಾಡಿಸಿದ್ದ ರಾಮಾಯಣ ಕಥೆಯನ್ನು ಆ ಮಕ್ಕಳಿಂದ ಲಲಿತ ಸುಸ್ವರದಲ್ಲಿ, ರಾಗ ತಾಳ ಲಯ ಬದ್ಧವಾಗಿ ಹಾಡಿಸಿದರು. ಆವರಿಬ್ಬರೂ ತುಂಬುರು ನಾರದರಂತೆ ಅಮೋಘವಾಗಿ ಹಾಡಿದರು. ಅದನ್ನು ಮೆಚ್ಚಿ ಕೊಂಡಾಡಿದ ಶ್ರೀರಾಮನು ನಸುನಗೆಯಿಂದ ಲಕ್ಷ್ಮಣನಿಗೆ ಹೇಳಿದನು:

'ಎಲೈ ಲಕ್ಷ್ಮಣನೇ ಬಾಲಕರ ಸುಲಲಿತ ಜಾಣನುಡಿಗಳನ್ನು ಗಮನಿಸು. ಇವರ ದನಿ, ಲಾವಣ್ಯ ನಡಿಗೆ ಬೆಡಗು ಸೀತಾದೇವಿಯನ್ನು ನೆನಪಿಗೆ ತರುತ್ತಿದೆ. ಸೀತೆಯನ್ನು ಅಗಲಿದ ವಿರಹತಾಪವು, ಸುತರ ದರ್ಶನದಿಂದಾದ ಅನಂದಬಾಷ್ಪಗಳಲ್ಲಿ ಆರಿಹೋಯಿತು. ಸೂರ್ಯವಂಶದ ಅಭಿವೃದ್ಧಿಯಾಯಿತು. ಈ ಪ್ರಪಂಚದಲ್ಲಿ ನನ್ನ ವಂಶಜರಲ್ಲದವರು ನನ್ನಬಾಣಗಳನ್ನು ನಿಷ್ಪ್ರಯೋಜನಗೊಳಿಸಲು ಸಾಧ್ಯವೇ?'

'ಸ್ವಾಮಿಯೆ, ನಿನ್ನ ಬಾಣಗಳು ಇತರರ ಬಾಣಗಳಿಂದ ಕುಂದಿಹೋಗದು. ಇವರು ನಿನ್ನ ಸುತರಾದುದರಿಂದ ನಿನ್ನಆತ್ಮಶಕ್ತಿ ಅವರಲ್ಲಿ ಸ್ಥಿರವಾಗಿ ನಿಂತಿತು. ಈ ಅವಳಿ ಮಕ್ಕಳನ್ನು ಪ್ರೀತಿಯಿಂದ ಪರಿಗ್ರಹಿಸು.'

'ಇಂದಿಗೆ ನಾವು ಕೃತಾರ್ಥರಾದೆವು, ವಾಲ್ಮೀಕಿಋಷಿಗಳ ತಪೋಶಕ್ತಿ, ಕರುಣೆ ನನ್ನ ವಂಶವನ್ನುದ್ಧರಿಸಿತು' ಎಂದು ಹೇಳುತ್ತ ನಲ್ಮೆಯಿಂದ ಕುಶಲವರನ್ನು ಕರೆದು ಮಾತಾಡಿಸಿದನು. ಆ ಬಾಲಕರು,

'ತಂದೆಯೇ, ಅಜ್ಞಾನದಿಂದ ನಿನ್ನನ್ನು ಯುದ್ಧದಲ್ಲಿ ನೋಯಿಸಿದೆವು. ನಮ್ಮ ಅಪರಾಧವನ್ನು ಕ್ಷಮಿಸು' ಎಂದು ಕಾಲಿಗೆ ಎರಗಿದರು. ಶ್ರೀರಾಮನು ಅವರನ್ನು ಎತ್ತಿಕೊಂಡು ಮುದ್ದಿಸಿದನು. ಸುತಮೋಹದಿಂದ ತಬ್ಬಿ ಅವರಿಬ್ಬರ ಶಿರವನ್ನು ಆಘ್ರಾಣಿಸಿದನು. ಮತ್ತೆಮತ್ತೆ ಅವರ ಮುಖಕ್ಕೆ ಮುತ್ತಿಡುತ್ತ, ವಾಲ್ಮೀಕಿಯನ್ನು ಆತ್ಮೀಯವಾಗಿ ಹೊಗಳಿದನು. ತಮ್ಮಂದಿರೊಡಗೂಡಿ ಆನಂದ ವನಧಿಯಲ್ಲಿ ಮುಳುಗಿ ಹೋದನು. ಆತನ ಸಂತಸ

ಕಂಡು ಉಬ್ಬಿಹೋದ ಸೇನೆಯು ಮಂಗಳವಾದ್ಯವನ್ನು ಮೊಳಗಿಸಿತು. ಶ್ರೀರಾಮನು ವಾಲ್ಮೀಕಿಋಷಿಯನ್ನು ಸತ್ಕರಿಸಿ,

'ಪೂಜ್ಯರೇ, ಈ ಲೋಕವು ತಿಳಿದ ಹಾಗೆ ಸೀತೆಪರಿಶುದ್ಧಳು. ಲೋಕಾಪವಾದಕ್ಕೆ ಹೆದರಿ ಅವಳನ್ನು ತೊರೆದಿದ್ದೆನು. ಅವಳು ಪುತ್ರರನ್ನು ಪಡೆದಳು. ಇನ್ನು ನೋಯಿಸುವುದು ಬೇಡ. ನನ್ನ ಬಳಿಗೆ ಕಳುಹಿಸಿಕೊಡಿ.'

ವಾಲ್ಮೀಕಿಋಷಿಗಳ ಕಣ್ಣು ಆನಂದಭಾಷ್ಪದಿಂದ ತುಂಬಿಹೋದವು. ಶ್ರೀರಾಮಚಂದ್ರನು ಮಕ್ಕಳು, ತಮ್ಮಂದಿರೊಡನೆ ಯಜ್ಞಾಶ್ವಸಹಿತವಾಗಿ ಅಯೋಧ್ಯೆಗೆ ಹೋದನು. ಮೂರುಲೋಕವು ಮೆಚ್ಚುವಂತೆ ನಿಂತುಹೋಗಿದ್ದ ಯಜ್ಞವನ್ನು ಪೂರ್ತಿಗೊಳಿಸಿದನು.

* * *

ಆಶ್ರಮಕ್ಕೆ ಹಿಂದಿರುಗಿದ ವಾಲ್ಮೀಕಿಯನ್ನು ಕಂಡು, ಮನಸ್ಸಿನಲ್ಲಿ ಮರುಗುತ್ತ ಸೀತೆಯು,

'ಎಲೈ ತಂದೆಯೇ, ನನ್ನ ಮಕ್ಕಳು ಎಲ್ಲಿಗೆ ಹೋದರು? ಅವರನ್ನು ಹೆತ್ತು ಪತಿಯ ವಿರಹವನ್ನು ಮರೆತಿದ್ದೆನು. ಈಗ ಹೇಗೆ ಜೀವಿಸಲಿ? ನನ್ನ ಮಕ್ಕಳನ್ನು ಯಾರಿಗೆ ನೀಡಿಬಂದೆ ಹೇಳು?' ಎಂದು ಆತನ ಕಾಲಮೇಲೆಬಿದ್ದು ಹೊರಳಾಡಿದಳು.

ಸೀತೆಯನ್ನು ಹಿಡಿದೆತ್ತಿ ಕುಳ್ಳಿರಿಸಿ, ಸಮಾಧಾನ ಪಡಿಸುತ್ತ,

'ಅಮ್ಮಾ, ಮಗಳೇ, ನಿನ್ನ ಮಕ್ಕಳನ್ನು ಅವರ ತಂದೆ ಶ್ರೀರಾಮಚಂದ್ರನು ಕರೆದುಕೊಂಡು ಹೋದನು. ಇನ್ನು ಚಿಂತಿಸಬೇಡ ನಿನ್ನನ್ನೂ ನಿನ್ನ ಕಾಂತನಲ್ಲಿಗೆ ಕಳುಹಿಸಿ ಬರುತ್ತೇನೆ' ಎಂದು ತೃಪ್ತಭಾವದಲ್ಲಿ, ನಯವಾಗಿ ನುಡಿದು ಸೀತೆಯನ್ನು ಒಪ್ಪಿಸಿದರು. ಸಕಲ ವೈಭವದಿಂದ ಸೀತೆಯನ್ನು ರತ್ನಖಚಿತ ತೇರಿನಲ್ಲಿ ಅಯೋಧ್ಯೆಗೆ ಕರೆದುಕೊಂಡು ಹೋಗಿ ರಘುನಾಥನನ್ನು ಕಾಣಿಸಿದರು.

ಎಲೈ ಜನಮೇಜಯರಾಯನೇ, ಅನಂತರ ಶ್ರೀರಾಮನು ಜಾನಕಿ ಸಹಿತನಾಗಿ ರಾಜ್ಯಭಾರ ಮಾಡುತ್ತ ಇದ್ದನು.

ಕುಶಲವರೊಡನೆ ಶ್ರೀರಾಮನಿಗೆ ಉಂಟಾದ ಕದನದ ಕಥೆಯನ್ನು ಕೇಳಿದೆಯಲ್ಲಾ, ಇನ್ನು ಇಂದ್ರಾರ್ಜುನರ ಕಾಳಗವನ್ನು ಹೇಳುವುದೇತಕ್ಕೆ? ಅದನ್ನು ನೀನು ಕೇಳಿದ್ದೀಯೆ. ಈಗ ಬಭ್ರುವಾಹನ ಮತ್ತು ಅರ್ಜುನರ ಯುದ್ಧವನ್ನು ವಿಸ್ತರಿಸಿ ಹೇಳುವೆನು ಕೇಳು.

* * *

# ಪರಾಕ್ರಮಿ ಬಭ್ರುವಾಹನ

ಜನಮೇಜಯರಾಯನೇ ಕೇಳು. ಅರ್ಜುನ ತಿರಸ್ಕರಿಸಿದ ಬಳಿಕ ಕಾಣಿಕೆಯಾಗಿ ತಂದಿದ್ದ ಎಲ್ಲವಸ್ತುಗಳನ್ನು ಬಭ್ರುವಾಹನನು ರಾಜಧಾನಿಗೆ ಕಳುಹಿಸಿದನು. ಒಂದುಸಾವಿರಕೋಟಿ ಆನೆಗಳು, ಹತ್ತುಕೋಟಿ ರಥಗಳು, ಎರಡುಸಾವಿರಕೋಟಿ ಕುದುರೆಗಳು, ಮೂರುಸಾವಿರಕೋಟಿ ಕಾಲಾಳುಗಳ ಅವನ ಸೇನೆ ನೆಲದಗಲಕ್ಕೆ ಹರಡಿಕೊಂಡಿತು. ಅವನು ರತ್ನಖಚಿತ ರಥವನ್ನು ಏರಿ ಯುದ್ಧಕ್ಕೆ ಹೊರಟನು. ಎರಡೂ ದಳಗಳ ವೀರಭಟರು ಬಾಣ, ತೋಮರ, ಪರಶು, ಕೃಪಾಣ, ಈಟಿ ಮುಂತಾದ ಆಯುಧಗಳಿಂದ ಹೋರಾಡಿದರು.

ಬಭ್ರುವಾಹನನು ಮಿಂಚಿನಂತೆ ಹೊಳೆಯುವ ತೇರಿನಲ್ಲಿ, ಸಿಡಿಲ ಗರ್ಜನೆಯಂತೆ ಧನುಷ್ಟೇಂಕಾರ ಮಾಡುತ್ತ ಅರ್ಜುನನ ಬಳಿಗೆ ಬಂದು,

'ಎಲೈ ಪಾರ್ಥನೇ, ತಂದೆಯಾದವನಲ್ಲಿ ಯುದ್ಧ ಮಾಡಬಾರದೆಂದು ಪ್ರೀತಿ, ಗೌರವ, ಭಕ್ತಿಯಿಂದ ನಮಸ್ಕರಿಸಿದೆ. ನೀನು ದೂಷಿಸಿ ತಿರಸ್ಕರಿಸಿದೆ. ನಿನ್ನನ್ನು ಈ ಯುದ್ಧದಲ್ಲಿ ಗೆಲ್ಲದಿದ್ದರೆ ನಾನು ನಿನ್ನ ಮಗನೇ ಅಲ್ಲ!' ಎಂದು ಬಾಣವನ್ನು ಪ್ರಯೋಗಿಸಿದನು. ಆಗ ಮಧ್ಯೆ ಪ್ರವೇಶಿಸಿದ ಅನುಸಾಲ್ವ,

'ಕುದುರೆ ಕಟ್ಟಿದ ಮೇಲೆ ಯುದ್ಧ ಮಾಡದಿರುವುದು ಕ್ಷತ್ರಿಯ ಧರ್ಮವಲ್ಲ ಎಂದು ಹೇಳಿದರೆ; ನೀನು ಪೌರುಷ ಪ್ರದರ್ಶಿಸುತ್ತಿರುವೆ! ತಂದೆಯನ್ನು ಹೀಯಾಳಿಸುವ ನೀನು ದೂರ್ತ' ಎಂದು ಹುಸಿ ನಗೆಯೊಡನೆ ಒಂಭತ್ತು ಬಾಣಗಳಿಂದ ಬಭ್ರುವಾಹನನ್ನು ನೋಯಿಸಿದನು.

'ದೈತ್ಯನೇ, ನಿನ್ನದು ಮೋಸದಹೊಡೆತವೋ, ಪರಾಕ್ರಮದ್ದೊ? ನೀನು ರುಂಡ ಮುಂಡ ಸಹಿತವಾಗಿ ಯುದ್ಧಕ್ಕೆ ಬಂದಿರುವುದು ಆಶ್ವರ್ಯ!'

ರಕ್ಕಸನ ಮಾಯಾಜಾಲದ ಬಗ್ಗೆ ಹೇಳುತ್ತ ಬಭ್ರುವಾಹನ ನೂರು ಬಾಣಗಳಿಂದ ಅವನನ್ನು ಹೊಡೆದನು. ಕೋಪದಿಂದ ಮೈಯುಬ್ಬಿಬಂದ ಅನುಸಾಲ್ವ ಅದಕ್ಕೆರಡರಷ್ಟು ಬಾಣಗಳಮಳೆ ಸುರಿಸಿದ. ಇಬ್ಬರ ಮೈಯಲ್ಲೂ ಅಂಬುಗಳ ಗಾಯದಿಂದ ರಕ್ತವು ಹೊಳೆಯಾಗಿಹರಿಯಿತು. ಅವರಿಬ್ಬರೂ ಸರಿಸಮರಾಗಿ ಹೋರಾಡಿದರು. ಬಭ್ರುವಾಹನನ ಚಮತ್ಕಾರದ ಬಾಣಪ್ರಯೋಗಕ್ಕೆ ಅನುಸಾಲ್ವನು ಮೂರ್ಛಿತನಾದನು. ಅದನ್ನು ಕಂಡ ಪ್ರದ್ಯುಮ್ನನು ಮುಂದೆಬಂದು,

'ಎಲೈ ಬಭ್ರುವಾಹನನೇ, ನನ್ನನ್ನು ಮೊದಲುಕಾಣದೆ, ರಾಜಕಾರ್ಯವನ್ನು ಕೆಡಿಸಿಕೊಂಡೆ! ನಿನ್ನನ್ನು ನಾನು ನೋಯಿಸುವುದಿಲ್ಲ. ನೀನು ಭಾವಮೈದುನ. ವಿನೋದಕ್ಕಾಗಿ ನಿನ್ನನ್ನು ಕೆಣಕುವೆ!'

'ಭಾವನವರೇ, ಸರಸವಾಡುವ ನಿಮಗೆ ವಿರಸವಾಗದೆ ಇರದು! ಸಿಹಿಯಾದ ಕಬ್ಬಿನ ಬಿಲ್ಲು, ಮಕರಂದಕುಡಿದ ದುಂಬಿಗಳ ಹೆದೆ, ಪರಿಮಳಯುಕ್ತ ಹೂಬಾಣ, ಶೃಂಗಾರಭರಿತ ಯುವತಿಯ ಕುಡಿನೋಟ ಇಲ್ಲಿಲ್ಲ! ಈ ರಣರಂಗವು ನಿಮಗೆ ಹರ್ಷಮಯವಾಗಲು ಸಾಧ್ಯವಿಲ್ಲ!' ಎಂಬ ನುಡಿಯೊಡನೆ ಬಭ್ರುವಾಹನನು ಹತ್ತು ಸಾವಿರ ಬಾಣಗಳಿಂದ ಅವನನ್ನು ಮುತ್ತಿ, ನಿಜವಾಗಿ ಅನಂಗನನ್ನಾಗಿಸಿದನು.

ಬಾಣಗಳನ್ನು ಚೂರುಚೂರಾಗಿ ಕತ್ತರಿಸಿ; ಅಷ್ಟದಿಕ್ಕುಗಳು ಏನಾದವೋ, ಆಕಾಶವು ಎಲ್ಲಿಅಡಗಿತೋ, ಭೂಮಿ ಎಲ್ಲಿದೆಯೋ ಎಂದು ತಿಳಿಯಲಾಗದಂತೆ ಭಯಂಕರವಾಗಿ ಪ್ರದ್ಯುಮ್ನನು ಕಣೆ ಹೂಡಿದನು.

ಜನಮೇಜಯರಾಯನೇ ಕೇಳು. ಬಭ್ರುವಾಹನನು ಆ ಬಾಣಗಳನ್ನು ಖಂಡಿಸಿ, ಅವನ ರಥ, ಛತ್ರ, ಚಾಮರಗಳನ್ನು ತನ್ನ ಅಂಬಿನ ಅಂಬುಧಿಯ ಅಲೆಗಳಿಂದ ಮುಚ್ಚಿದನು. ರಥದ ಕುದುರೆಗಳನ್ನೂ ಸಾರಥಿಯನ್ನೂ ಕೊಂದನು. ಪ್ರದ್ಯುಮ್ನ ಹೊಸರಥ ಏರಿಬಂದನು. ಅವನು ಏರಿಬಂದ ಎಪ್ಪತ್ತು ರಥಗಳನ್ನು ಪುಡಿ ಮಾಡಿ, ಅವನನ್ನು ಮೂರ್ಛೆಗೊಳಿಸಿದನು. ಎಚ್ಚತ್ತ ಪ್ರದ್ಯುಮ್ನನು ಹೋರಾಡಿ ಬಭ್ರುವಾಹನನ್ನು ಮೂರ್ಛೆಗೊಳಿಸಿದನು. ಎಚ್ಚೆರಗೊಂಡ ಬಭ್ರುವಾಹನ ವೀರಾವೇಶದಿಂದ ಯುದ್ಧ ಮಾಡಿದನು. ಅವರಿಬ್ಬರೂ ಸೋಲದೆ ಗರುಡಹನುಮಂತರಂತೆ – ನೆಲದ ಮೇಲೆ ನಿಂತು, ಅಂತರಿಕ್ಷದಲ್ಲಿ ಹಾರಿ ಯುದ್ಧಮಾಡಿದರು. ದೊಡ್ಡ ಬೆಟ್ಟಗಳ ಹಾಗೆ ನೆಲಕ್ಕೆ ಬಿದ್ದರು. ರಥವೇರಿ ಬಂದ ಬಭ್ರುವಾಹನನು ಪ್ರದ್ಯುಮ್ನನನ್ನು ಕಾಣದೆ ಹೆಬ್ಬುಲಿಯು ಹುಲ್ಲೆಗಳ ಹಿಂಡಿಗೆ ನುಗ್ಗುವಂತೆ, ಮದ್ದಾನೆ ಬಾಳೆತೋಟವನ್ನು ತುಳಿಯುವಂತೆ – ಆ ಸೇನೆಯ ಒಳಹೊಕ್ಕನು. ಅಸಂಖ್ಯಾತ ಸೈನಿಕರನ್ನು, ಅತಿರಥರನ್ನು ಸಂಹರಿಸಿದನು.

ವೃಷಕೇತು, ಯೌವನಾಶ್ವ, ಸುವೇಗ, ನೀಲಧ್ವಜರನ್ನು ಸೋಲಿಸಿದನು. ಅನಿರುದ್ಧನನ್ನು ಮೂರ್ಛೆಗೊಳಿಸಿ; ಕೃತಮರ್ಮ, ಸಾತ್ಯಕಿಗಳು ದಿಕ್ಕೆಟ್ಟು ಓಡುವಂತೆ ಮಾಡಿದನು. ತನ್ನ ಸೇನೆಯು ಧೈರ್ಯಗೆಟ್ಟು, ಮಹಾವೀರರು ಸೋತು ಓಡಿ ಹೋಗುತ್ತಿರುವುದನ್ನು ಕಂಡ ಅರ್ಜುನನು ಕೋಪದಿಂದ ಆರ್ಭಟಿಸುತ್ತ ಗಾಂಡೀವವನ್ನು ಠೇಂಕಾರ ಮಾಡಿದನು. ಆ ಕೂಡಲೆ ಹಂಸಧ್ವಜನು ಬಭ್ರುವಾಹನನ ಮೇಲೆ ಬಾಣಗಳ ಮಳೆ ಸುರಿದನು. ಸಮತೂಕದ ವೀರರು ಭಯಂಕರವಾಗಿ ಹೋರಾಡಿದರು.

**ಸಾಹಸಿ ವೃಷಕೇತು**

ಜನಮೇಜಯರಾಯನೇ ಕೇಳು. ಹಂಸಧ್ವಜನ ಐದುಅಕ್ಷೋಹಿಣಿ ಸೈನ್ಯವನ್ನು ನಾಶಮಾಡಿದ ಬಭ್ರುವಾಹನನು ಅವನನ್ನು ಮೂರ್ಛೆಗೊಳಿಸಿದನು. ಅವನ ಮಗ ಸುವೇಗನು ಮುತ್ತಲು, ಬಭ್ರುವಾಹನನು ಅವನನ್ನು ವಿರಥನನ್ನಾಗಿಸಿ ಭೂಮಿಗೆ ಬೀಳಿಸಿದನು.

ಬಭ್ರುವಾಹನನು ಪ್ರಳಯರುದ್ರನಂತೆ ಕೋಲಾಹಲವನ್ನುಂಟು ಮಾಡುತ್ತ ಅರ್ಜುನನ ಸೈನ್ಯವನ್ನು ಸಂಹಾರ ಮಾಡಿದನು. ಆಗ ಅವರ ಸೇನೆಯಲ್ಲಿ ಜೀವಾತ್ಮ, ಪರಮಾತ್ಮರಂತೆ ವೃಷಕೇತು, ಅರ್ಜುನ ಇಬ್ಬರೇ ಉಳಿದರು!

ಹಿಂದೆ ಅರ್ಜುನನು ತೀರ್ಥಯಾತ್ರೆಗಾಗಿ ಬಂದಿದ್ದಾಗ ಆದಿಶೇಷನಮಗಳು ಉಲೂಪಿ ಅವನನ್ನು ಮೆಚ್ಚಿ ಮದುವೆಯಾಗಿದ್ದಳು. ಯುದ್ಧ ವಿಷಯ ತಿಳಿದು ಪಾತಾಳ ಲೋಕದಿಂದ ಮಣಿಪುರಕ್ಕೆಬಂದು, ರಣರಂಗದಲ್ಲಿ ಮೂರ್ಛಿತರಾಗಿದ್ದ ಪ್ರದ್ಯುಮ್ನ, ಅನಿರುದ್ಧರನ್ನು ಕರೆಸಿಕೊಂಡು ಮಂತ್ರೌಷಧಗಳಿಂದ ಆರೈಕೆಮಾಡಿದಳು.

ಅರ್ಜುನನು ಕರ್ಣತನಯನಿಗೆ, 'ಎಲೈ ವೃಷಕೇತುವೇ, ನಮ್ಮ ಸೈನ್ಯ ನಾಶವಾಯಿತು. ಅನುಸಾಲ್ವನೇ ಮೊದಲಾದ ವೀರರು ಗಾಯಗೊಂಡು ಮೂರ್ಛಿತರಾದರು. ನನಗೆ ಗೆಲ್ಲುವಮಾರ್ಗ ಕಾಣುತ್ತಿಲ್ಲ. ನೀನು ಬೇಗ ಹಸ್ತಿನಾವತಿಗೆ ಹೋಗಿ, ನನ್ನ ದುರವಸ್ಥೆಯನ್ನು

ಧರ್ಮರಾಜನಿಗೂ, ಶ್ರೀಕೃಷ್ಣನಿಗೂ ತಿಳಿಸು.' ಎನ್ನುವಷ್ಟರಲ್ಲಿ ಅವನ ಕಿರೀಟದಮೇಲೆ ಹದ್ದುಬಂದು ಕೂತಿತು. ರಥದಲ್ಲಿ ಪಾರಿವಾಳಗಳು ಗೂಡುಕಟ್ಟಿದವು. ಅವನ ನೆರಳು ತಲೆಯಿಲ್ಲದ ಮುಂಡದಂತೆ ಕಾಣಿಸಿ ಅಪಶಕುನಗಳಾದವು. ಆಶ್ಚರ್ಯದಿಂದ ಧನಂಜಯ ಉದ್ಗರಿಸಿದ:

'ಆಹಾ! ನನಗೆಲ್ಲಿಯ ಜಯ! ಧರ್ಮರಾಯನು ಅದೃಷ್ಟಹೀನನಾಗುವನಲ್ಲ! ಶಿವ ಶಿವಾ; ಶ್ರೀಕೃಷ್ಣನು ಯಾಗವನ್ನು ಹೇಗೆ ಮಾಡಿಸುವನೊ?'

'ಎಲೈ ತಂದೆಯೇ, ದಿಕ್ಕಿಲ್ಲದ ಯುದ್ಧಭೂಮಿಯಲ್ಲಿ ನಿನ್ನನ್ನು ಒಂಟಿಯಾಗಿ ಬಿಟ್ಟು ಹೋಗಲೇ? ಹೆದರಿ ಚಿಂತಿಸಬೇಡ! ನನ್ನನ್ನು ಯುದ್ಧಕ್ಕೆ ಕಳುಹಿಸು. ಬಭ್ರುವಾಹನನ ಗರ್ವವನ್ನು ಮುರಿಯುತ್ತೇನೆ.' ಎಂದು ಬಲಾತ್ಕಾರದಿಂದ ಅರ್ಜುನನಿಗೆ ನಮಸ್ಕಾರ ಮಾಡಿ, ಬಭ್ರುವಾಹನನಿಗೆ ಎದುರಾಗಿ,

'ಎಲೈ ಮೂಢನೇ, ಅರ್ಜುನನ ಮಗನಾಗಿದ್ದರೆ ಯುದ್ಧಕ್ಕೆ ನಿಲ್ಲು. ನಾನು ಕರ್ಣನಮಗ ವೃಷಕೇತು' ಎಂಬ ನುಡಿಯೊಡನೆ ಬಭ್ರುವಾಹನನ ಮೇಲೆ ಬಾಣ ಪ್ರಯೋಗಿಸಿದನು.

'ಲೇಸಾಡಿದೆ. ನೀನು ಛಲಗಾರ. ನನ್ನ ತಂದೆ ಅರ್ಜುನನು, ನಿನ್ನ ತಂದೆಯಾದ ಕರ್ಣನನ್ನು ಕೊಂದನು. ನೀನು ನನಗೆ ಎದುರಾಗುವುದು ಉಚಿತ!' ಎಂದು ಹೇಳಿ ಬಾಣಗಳನ್ನು ಸುರಿಸಿ, ವೃಷಕೇತುವನ್ನು ನೋಯಿಸಿದನು. ಸಮಸಾಹಸಿಗಳಾದ ಈರ್ವರೂ ಪರಾಕ್ರಮ, ಲಕ್ಷ್ಯ, ಲಾಘವಗಳಲ್ಲಿ ಸರಿಮಿಗಿಲಾಗಿ ಹೋರಾಡಿದರು. ವೃಷಕೇತುವು ಮಂತ್ರಾಸ್ತ್ರಗಳಿಂದ ಪ್ರಬಲನಾಗಿರಲು, ಬಭ್ರುವಾಹನ ಆಗ್ನೇಯ, ವೈಷ್ಣವಾಸ್ತ್ರಗಳಿಂದ ಅವನನ್ನು ಎದುರಿಸಿದನು. ವೃಷಕೇತುವನ್ನು ಘಾತಿಸಿದ ಬಾಣಗಳು ತಮ್ಮಲ್ಲಿ ಅಂಟಿದ್ದ ಅವನ ರಕ್ತವನ್ನು ತೊಳೆದುಕೊಳ್ಳಲು ಪಾತಾಳದಲ್ಲಿ ಭೋಗವತಿ ನದಿಗೆ ಇಳಿದವು. ಕೋಪಗೊಂಡ ವೃಷಕೇತು ಎಸೆದ ಬಾಣಗಳು ಬಭ್ರುವಾಹನನ್ನು ಅರ್ಧಗಳಿಗೆ ಸುಳಿಗಾಳಿಯಂತೆ ಸುತ್ತಿಸಿದವು. ಬಭ್ರುವಾಹನನು ಕೋಪದಿಂದ ಹೂಂಕರಿಸುತ್ತ ವಾಯುವ್ಯಾಸ್ತ್ರವನ್ನು ಆಕರ್ಣಾಂತವಾಗಿ ಸೆಳೆದುನುಡಿದ,

'ಎಲೈ ವೃಷಕೇತುವೇ, ನನ್ನೊಡನೆ ಯುದ್ಧ ಮಾಡಿದ ವೀರರಲ್ಲಿ ನೀನೊಬ್ಬನೇ ಪರಾಕ್ರಮಿ! ಈ ನನ್ನ ಬಾಣ ಪರೀಕ್ಷಿಸಿ ನೋಡು!'

ಆ ಅಸ್ತ್ರ ವೃಷಕೇತುವನ್ನು ಆಕಾಶಕ್ಕೆ ಎತ್ತಿಕೊಂಡುಹೋಗಿ ಮೂರು ಮುಹೂರ್ತಗಳಕಾಲ ತಿರುಗಿಸಿತು. ಧನುರ್ವಿದ್ಯಾ ವಿಶಾರದರಾದ ಅವರಿಬ್ಬರೂ ಎದುರಾಳಿಗಳ ಪರಾಕ್ರಮಕ್ಕೆತಕ್ಕ ಪ್ರತೀಕಾರಮಾಡುತ್ತ ಐದುದಿವಸಗಳವರೆಗೆ ಕಾದಾಡಿದರು. ಬಭ್ರುವಾಹನನು,

'ಭಾಪುರೇ ವೃಷಕೇತು. ಪ್ರಪಂಚದಲ್ಲಿ ನೀನೊಬ್ಬನೇ ಪಟು ಭಟ! ಸಾಕು. ಮುಕ್ತಿ ದಾಯಕನಾದ ಶ್ರೀಪತಿಯ ಧ್ಯಾನಮಾಡು' ಎಂದು ಬಾಣವನ್ನು ಹೂಡಿ ಹೊಡೆಯಲು, ಆ ಬಾಣವನ್ನು ವೃಷಕೇತು ಕಡಿದು ಹಾಕುವಷ್ಟರಲ್ಲಿ, ಮತ್ತೊಂದು ಬಾಣದಿಂದ ಅವನ ತಲೆಯನ್ನು ಕಡಿದುಹಾಕಿದನು. ಆ ತಲೆ ಚೆಂಡಿನಂತೆ ಪುಟನೆಗೆದು ನಾರಾಯಣ, ಮುಕುಂದ, ಮಾಧವ ಎಂದು ಹೇಳುತ್ತ ಅರ್ಜುನನ ಕಾಲುಗಳ ಮೇಲೆ ಬಿದ್ದಿತು. ಮುಂಡವು ಮುನ್ನುಗ್ಗಿ ಬಭ್ರುವಾಹನನನ್ನುಹೊಡೆದು ನೆಲಕ್ಕುರುಳಿಸಿತು. ಸೈನ್ಯವನ್ನು ಸದೆಬಡಿದು ಭೂಮಿಗೆ ಉರುಳಿಸಿತು!

ಅರ್ಜುನನು ತಲೆಯನ್ನು ಎರಡುಕೈಗಳಿಂದಲೂ ಹಿಡಿದು ನೋಡುತ್ತ ಮೊಳಕೆ ಎಳೆ ಮೀಸೆಯ, ಹುಸಿನಗೆ ಮುಖಕಾಂತಿಯ, ಪರಾಕ್ರಮದ ವೀರರಸಗಟ್ಟಿಯಾದ ಮುಖವನ್ನು ಮುದ್ದಾಡಿ ಕಣ್ಣೀರು ಸುರಿಸುತ್ತ ಪ್ರಲಾಪಿಸಿದ:

'ಹಾ! ಮಗನೇ. ಎಷ್ಟು ಬೇಗ ಸತ್ತುಹೋದೆ! ಈ ಮರಣ ಕೃಷ್ಣನಿಗೆ ಸೊಗಸಿತೆ? ಇನ್ನು ಧರ್ಮರಾಯನಿಗೆ ಮುಖ ತೋರಿಸುವ ಮಕ್ಕಳಾರಿರುವರು? ಕುಂತಿ ಇನ್ನೆಷ್ಟು ದುಃಖಿಸುವಳೊ. ಹಗೆಯೆಂದು ನಿನ್ನತಂದೆಯನ್ನು ಕೊಂದ ನಾವು, ನಿನ್ನನ್ನು ಅವನಿಗಿಂತಲೂ ಚೆನ್ನಾಗಿ ನೋಡಿಕೊಂಡೆವಲ್ಲಾ. ನಮ್ಮ ಐವರಿಗೂ ಸದ್ಗತಿಯನ್ನುಂಟು ಮಾಡುವ ಮಕ್ಕಳಿನ್ನಾರು? ನೀನಿಲ್ಲದ ಪಾಂಡವರಸಿರಿ ಮೂಗಿಲ್ಲದ ಮುಖದಂತೆ, ಲಿಂಗವಿಲ್ಲದ ಪೀಠದಂತಾಗುವುದು!'

**ತಲೆಯ ಬೆಲೆಗಿದೆ ಸಾಹಸ ದ್ರವ್ಯಂ**

ದುಃಖದ ಮಡುವಿನಲ್ಲಿದ್ದ ಅರ್ಜುನನನ್ನು ನೋಡಿ ಬಭ್ರುವಾಹನ,

'ಎಲೈ ಅರ್ಜುನ, ನಾವು ವೈಶ್ಯಕುಲದಲ್ಲಿ ಹುಟ್ಟಿದವರು. ನಿಮ್ಮ ಸೇನಾ ಸಮೂಹದಲ್ಲಿ ಶಸ್ತ್ರಾಸ್ತ್ರಗಳ ಅಂಗಡಿಯನ್ನಿಟ್ಟುಕೊಂಡು ಜಯವೆಂಬ ಲಾಭವನ್ನು ಸಂಪಾದಿಸಿದ್ದೇವೆ! ಪರಾಕ್ರಮಿಗಳ ತಲೆಯನ್ನು ಹುಡುಕಿ ಅವನ್ನು ಕೊಂಡಿದ್ದೇವೆ. ಕಲಿಗಳು ಬಂದುಕೇಳಿದರೆ ಅವರಪ್ರಾಣಗಳಿಗೆ ಸಂಚಕಾರ ಕೊಟ್ಟಿದ್ದೇವೆ! ನಿನ್ನ ತಲೆಯನ್ನು ಕೊಂಡುಕೊಳ್ಳುವಷ್ಟು ಸಾಹಸದ್ರವ್ಯ ನನ್ನಲ್ಲಿದೆ!

'ವೃಷಕೇತು ಮಹಾಶೂರ. ಅವನ ತಲೆಯನ್ನು ಶಿವನಿಗೆಒಪ್ಪಿಸು. ಅದು ಶಿವನಿಗೆ ಪ್ರಿಯವಾಗಿ ರುಂಡಮಾಲೆಯಲ್ಲಿ ಪೂಜ್ಯವಾಗುವುದು. ಪಾಶುಪತಾಸ್ತ್ರ ನೀಡಿದ ಸ್ವಾಮಿಯನ್ನು ಮರೆಯುವರೇ? ಯುದ್ಧ ಮಾಡುವೆಯೋ, ಅಥವಾ ಕುದುರೆಯನ್ನು ಬಿಟ್ಟು ಹೋಗುವೆಯೋ?'

ಆ ನುಡಿಗಳು ಕಿವಿಗೆ ಬಡಿಯುತ್ತಿದ್ದಂತೆ ಕಣ್ಣುಕೆಂಪಾಗಿ, ರೋಷಗೊಂಡು ದುಃಖವನ್ನು ದೂರ ನೂಕಿದ ಅರ್ಜುನ ಉಗ್ರಬಾಣವನ್ನುಹೂಡಿ ಬಭ್ರುವಾಹನನ ಶರೀರದಲ್ಲಿ ಮಾಂಸಖಂಡ ಹೊರಸೂಸಿ ರಕ್ತದಹೊಳೆ ಹರಿಯುವಂತೆಮಾಡಿದನು.

'ಓಹ್, ನನ್ನ ಮೈಸಿರಿ ದುಃಖ ರೂಪವನ್ನು ತಾಳಿತು! ಕರ್ಣಪುತ್ರ ಹಗೆಯ ಮಗನಲ್ಲವೆ? ಹುಸಿಬಾಣ ಪ್ರಯೋಗಿಸದೆ ಇಂದ್ರಕೀಲದಲ್ಲಿ ಪರಮೇಶ್ವರ ನೀಡಿದ ಪಾಶುಪತಾಸ್ತ್ರ ಬಿಡು' ಎಂಬ ಸಾಹಸ ನುಡಿಗಳೊಡನೆ ಬಭ್ರುವಾಹನನು ಬಾಣ ಪ್ರಯೋಗಿಸಲು, ಅವು ಆಕಾಶ ಮಂಡಲವನ್ನು ಮುತ್ತಿಕೊಂಡವು. ಅದಕ್ಕೆ ಪ್ರತಿಯಾಗಿ ಹೂಡಿದ ಅರ್ಜುನನ ಪ್ರತಿಬಾಣವು ಹತ್ತುಸಾವಿರ ಬಾಣಗಳನ್ನು ಸೃಷ್ಟಿಸಿ ಮೂರು ಲೋಕಗಳನ್ನು ನಡುಗಿಸಿದವು. ಅವು ಬಭ್ರುವಾಹನನ ಸರ್ವಾಂಗವನ್ನು ಕೊರೆದುವು. ಜಾಲಂಧ್ರದಂತೆ ಮಾಡಿದುವು. ಕೆಂಬೆಟ್ಟದಿಂದ ಹರಿದುಬರುವ ಕೆಂಪಾದ ಪ್ರವಾಹದಂತೆ ಬಭ್ರುವಾಹನನ ಮೈಯಿಂದ ರಕ್ತಧಾರೆ ಹರಿಯುತ್ತಿತ್ತು. ಮೂರ್ಛಿತನಾದ ಬಭ್ರುವಾಹನ ಮತ್ತೆ ಚೇತರಿಸಿಕೊಂಡು, ಅರ್ಜುನನನ್ನು ಕೋಪದಿಂದ ಹೀಯಾಳಿಸಿದನು,

'ಎಲೈ ಅರ್ಜುನ, ಶ್ರೀಕೃಷ್ಣನು ನಿನಗೆ ಕರ್ಣ, ಭೀಷ್ಮ, ದ್ರೋಣರನ್ನು ಗೆದ್ದುಕೊಟ್ಟ. ಕರುಣೆತೋರಿ ಈಶ್ವರ ಯುದ್ಧಮಾಡಿದ. ಇದನ್ನು ಅರಿಯದ ಜನರು ನಿನ್ನನ್ನು ಪರಾಕ್ರಮಿ ಎನ್ನಲು ನೀನು ಗರ್ವದಿಂದಿರುವೆ. ನನ್ನನ್ನು ಗೆದ್ದರೆ ನೀನು ಶೂರನೆನಿಸುವೆ!'

ಸಮಸ್ತಲೋಕವು ಭಯಪಡುವಂತೆ ಬಾಣಗಳನ್ನು ಪ್ರಯೋಗಿಸಿದನು. ಶರ ಸಂಕುಲವು ಅರ್ಜುನನರಥವನ್ನು ಆಕಾಶಕ್ಕೆಹಾರಿಸಿ, ಕುದುರೆಗಳು ರಕ್ತಕಾರುವಂತೆ ಮಾಡಿ, ಸಾರಥಿಯನ್ನು ಸುರಲೋಕಕ್ಕೆ ಕಳುಹಿಸಿದವು. ಬಾಣಗಳ ವೇಗಕ್ಕೆ ಛತ್ರ ಚಾಮರ, ಪತಾಕೆಗಳು ತೂರಿಹೋದವು. ಆಂಜನೇಯ ಚೀರಿದನು. ಪಾರ್ಥನ ದೇಹದಲ್ಲಿ ಹೊಕ್ಕು ರಕ್ತ ಹೊಮ್ಮಿಸಿದವು. ಅವರಿಬ್ಬರ ದೇಹಗಳು ಹೂಬಿಟ್ಟ ಮುತ್ತುಗದ ಮರಗಳಂತೆ ಕೆಂಪಾದವು.

ಎಲೈ ಜನಮೇಜಯರಾಯನೇ ಕೇಳು. ಗಂಗೆಯ ಶಾಪದಿಂದ ಅರ್ಜುನನ ಸಾಹಸ ಕಡಿಮೆಯಾಯಿತು. ಸತ್ಯ ಮತ್ತು ಒಲವಿನ ಪ್ರತೀಕವಾದ ಬಭ್ರುವಾಹನನು,

'ಎಲೈ ಧನಂಜಯನೇ, ನನ್ನ ತಾಯಿ ಪತಿವ್ರತೆ. ನಿಷ್ಕಾರಣದಿಂದ ಆಕೆಯನ್ನು ದೂಷಿಸಿದುದರಿಂದ ನಿನ್ನ ಕೈಗುಂದುತ್ತಿದೆ. ಶ್ರೀಕೃಷ್ಣನ ಸಾರಥ್ಯವಿಲ್ಲದೆ ನೀನು ಯಾರನ್ನೂ ಗೆದ್ದಿಲ್ಲ. ಶ್ರೀಕೃಷ್ಣನನ್ನು ಧ್ಯಾನಿಸು.'

'ಎಲೈ ಬಭ್ರುವಾಹನ, ಪ್ರತಿಜ್ಞೆಯಿಂದ ಹಗೆಯನ್ನು ಕೊಂದರೂ, ಯುದ್ಧದಲ್ಲಿ ಸತ್ತರೂ ಅದು ಕ್ಷತ್ರಿಯನಿಗೆ ದೋಷವಿಲ್ಲ. ಕರ್ಣನನ್ನು ಕೊಂದರೇನು? ವೃಷಕೇತು ಸತ್ತರೇನು? ನಾನು ಬಲಹೀನನೇ? ನೀನೇ ಪರಾಕ್ರಮಶಾಲಿಯೇ? ಆಗಲಿ, ನೋಡೋಣ' ಎಂದು ಅರ್ಜುನನು ಬಾಣಗಳನ್ನು ಹೂಡಲು ಅವುಗಳನ್ನೆಲ್ಲ ತುಂಡುಮಾಡಿ,

'ಎಲೈ ಮರುಳೇ, ಆಪ್ತ ಶ್ರೀಕೃಷ್ಣನನ್ನು ಮರೆತುದರಿಂದ, ದ್ರೋಣಾಚಾರ್ಯರ ಬಿಲ್ವಿದ್ಯೆ, ಪರಮೇಶ್ವರಾದಿಗಳು ಕೊಟ್ಟಿರುವಬಾಣಗಳು ನಿನಗೆ ನಿಷ್ಫಲವಾಗಿವೆ.' ಎಂದು ಹೇಳಿ, ಗಂಗೆಯಶಾಪದಿಂದ ಬಲಗುಂದುತ್ತಿರುವ ಪಾರ್ಥನನ್ನು ಅಡಿಗಡಿಗೆ ಘಾತಿಸಿದನು. ಜ್ವಾಲಾಮುಖದ, ಸ್ವೇಚ್ಛೆಯಾಗಿ ಸಂಚರಿಸುವ ವಡಬಾಗ್ನಿಯಂತಹ ಅರ್ಧಚಂದ್ರಾಕೃತಿಯ ಬಾಣವನ್ನುಹೂಡಿದನು. ಅದು ಉಗ್ರಜ್ವಾಲೆಯಿಂದ ಕಿಡಿಗಳನ್ನು ಹೊರಸೂಸುತ್ತ ಭಯಂಕರವಾಗಿತ್ತು. ಅದಕ್ಕೆ ಅರ್ಜುನ ಪ್ರತಿ ಬಾಣವನ್ನು ಪ್ರಯೋಗಿಸಿದರೂ, ಲಕ್ಷಿಸದೆ ಅದು ಮುಂದೆಬಂದು; ಅರ್ಜುನ ಶ್ರೀಕೃಷ್ಣನನ್ನು ಧ್ಯಾನಿಸುವಷ್ಟರಲ್ಲಿಯೇ ಅವನ ತಲೆಯನ್ನುಕತ್ತರಿಸಿತು. ಆ ತಲೆ ಕೇಶವ, ಕೃಷ್ಣ ಎನ್ನುತ್ತ ಕರ್ಣ ಸುತನ ಶಿರವಿದ್ದಕಡೆ ಹೋಗಿ ಬಿದ್ದಿತು. ಅರ್ಜುನನ ಮುಂಡ ವೃಷಕೇತುವಿನ ಮುಂಡವನ್ನು ತಬ್ಬಿಕೊಂಡಿತು. ನೋಡಿದ ಎಲ್ಲರೂ ಕನಿಕರದಿಂದ ಮರುಗಿದರು.

ಕಾರ್ತೀಕ ಶುದ್ಧ ಏಕಾದಶೀ ಮಂಗಳವಾರ ಉತ್ತರಾ ನಕ್ಷತ್ರದ ದಿನ ಸೂರ್ಯಸ್ತ ಸಮಯದಲ್ಲಿ ಅರ್ಜುನನತಲೆ ಉರುಳಿತು. ಬಭ್ರುವಾಹನನಸೇನೆ ತಮಗುಂಟಾದ ಜಯಕ್ಕೆ ನಲಿವಿಂದ ಆರ್ಭಟಿಸಿ ಮಂಗಳವಾದ್ಯ ಮೊಳಗಿಸಿತು. ತಳಿರು ತೋರಣಗಳಿಂದ ಅಲಂಕರಿಸಿ ವಂದಿಮಾಗಧರು ಹೊಗಳುತ್ತಿರಲು; ಪ್ರಜೆಗಳು ಸ್ತ್ರೀಯರು ಹೂವು, ಹಣ್ಣು, ದಧಿ, ದೂರ್ವೆಗಳಿಂದ ಎದುರುಗೊಳ್ಳಲು; ಬಭ್ರುವಾಹನನು ಮಣಿಪುರವನ್ನು ಪ್ರವೇಶಿಸಿದನು.

**'ಅವಿವೇಕದಿಂದ ನನ್ನ ಬಾಳು ಹಾಳು ಮಾಡಿದೆ'**

ಅರಮನೆಯಲ್ಲಿ ಉಲೂಪಿಯೊಡನೆ ಸಂತಸದಿಂದಿದ್ದ ಚಿತ್ರಾಂಗದೆಗೆ ದಾದಿಯರು ಬಂದು ಹೇಳಿದರು:

'ದೇವಿ, ನೀನು ಎಷ್ಟುಪುಣ್ಯಮಾಡಿ ಮಗನನ್ನು ಹೆತ್ತೆಯೋ! ಅವನು ಯುದ್ಧದಲ್ಲಿ ಅರ್ಜುನನನ್ನು ಸಂಹಾರ ಮಾಡಿಬರುತ್ತಿದ್ದಾನೆ! ಆರತಿಗಳನ್ನು ತರಿಸು!'

ಆ ನುಡಿ ಕೇಳುತ್ತಿದ್ದಂತೆ ಚಿತ್ರಾಂಗದೆ ಬಹು ದುಃಖದಿಂದ ಮೂರ್ಛೆಹೋದಳು. ಎಚ್ಚೆತ್ತು.

'ಹಾ! ಪ್ರಾಣನಾಥ, ನಾನು ಕೆಟ್ಟೆ!' ಎಂದು ದೀನಳಾಗಿ ಅತ್ತಳು. ಅರಮನೆಯನ್ನು ದುಃಖಆವರಿಸಿತು.

ಅರಮನೆಯಲ್ಲಿ ಅಳುವ ದನಿ ಕೇಳಿದ ಬಭ್ರುವಾಹನನು ಅಂತಃಪುರ ಪ್ರವೇಶಿಸಿ, ತಾಯಿಯ ಸ್ಥಿತಿಯನ್ನು ಕಂಡು ಆಶ್ಚರ್ಯಗೊಂಡು ಕೇಳಿದ,

'ಅಮ್ಮಾ, ನಾನು ಯುದ್ಧದಲ್ಲಿ ಗೆದ್ದು ಬಂದಿರುವೆ. ಇಂಥಹ ಸಂತೋಷ ಕಾಲದಲ್ಲಿ ದುಃಖಪಡುವುದೇಕೆ? ಜರಿದು ನೂಕಿದ ಅರ್ಜುನನನ್ನು ಕೊಂದು, ಶತ್ರು ಭಯಂಕರ ವೃಷಕೇತುವನ್ನು ಸಂಹರಿಸಿರುವೆ.'

'ಮಗನೇ, ಒಳ್ಳೆಯದನ್ನು ಮಾಡಿದೆ! ಅರ್ಜುನನು ನಿನಗೆ ಶತ್ರುವಾದನೇ? ಕೊಂದು ಕೀರ್ತಿ ಬಂದಿತೇ? ನನ್ನಗಂಡ ಸತ್ತುಹೋದನೇ? ಇಂದ್ರನ ಮಗ, ಧರ್ಮಜನ ತಮ್ಮ ಪ್ರಾಣಬಿಟ್ಟನೇ? ಶ್ರೀಕೃಷ್ಣನ ಒಡನಾಡಿ ಮಡಿದನೇ? ಪರಾಕ್ರಮದಿಂದ ನಿನ್ನಹಾಗೆ ಹೆತ್ತತಂದೆಯನ್ನು ಕೊಲೆಗೈದು ಪಾಪ ಭೀತರಾಗದವರು ಇರುವರೇ?

'ನನಗೆ ಮಂಗಳಕರ ಐರದಾಳಿ, ಓಲೆ ಭಾಗ್ಯ ಇಲ್ಲದಂತೆ ಮಾಡಿದೆ. ನಿನ್ನನ್ನು ಹಡೆದದ್ದು ಸಾರ್ಥಕವಾಯಿತು. ನಮ್ಮ ಅತ್ತೆ ಕುಂತಿಯು ಮಗ, ಮೊಮ್ಮಗನು ಸತ್ತುದನ್ನು ಕೇಳಿ ಹೇಗೆ ಸಹಿಸಿಕೊಳ್ಳುವಳೋ? ಅಯ್ಯೋ, ಅವಿವೇಕದಿಂದ ನನ್ನ ಬಾಳು ಹಾಳು ಮಾಡಿದೆ!' ಎಂದು ಮಗನನ್ನು ಬೈಯುತ್ತ ಮರುಗಿದಳು. ಆಗ ಉಲೂಪಿಯು,

'ದೇವಿ ಚಿತ್ರಾಂಗದೆ, ಸ್ವಲ್ಪ ತಾಳು. ಅರ್ಜುನನ ಮರಣ ಸಂದೇಹವಾಗಿದೆ. ಮೊದಲು ಅರ್ಜುನ ಬಂದಾಗ, ನನ್ನೊಡನೆ ಕ್ರೀಡಾವನದಲ್ಲಿ ವಿಹರಿಸುತ್ತ; ಐದು ದಾಳಿಂಬೆ ಗಿಡ ತೋರಿಸಿ, ಈ ಗಿಡಗಳು ಒಣಗಿದ ದಿನ ನನ್ನ ಮರಣ–ಎಂದಿದ್ದನು. ನೋಡಿಕೊಂಡು ಬರುವೆ.' ಎಂದು ಶೃಂಗಾರವನಕ್ಕೆ ಹೋಗಿ ನೋಡಲು ಆ ದಾಳಿಂಬೆ ಗಿಡಗಳು ಕಾಡು ಕಿಚ್ಚಿನಿಂದ ಒಣಗಿಹೋಗಿದ್ದವು. ಚಿತ್ರಾಂಗದೆ ಉಲೂಪಿಯರು ಅರ್ಜುನನ ಮುಖ ನೋಡಲು ಕಾತರರಾಗಿ ಯುದ್ಧ ರಂಗಕ್ಕೆ ಹೋದರು. ಒಂದೇ ಸ್ಥಳದಲ್ಲಿ ಬಿದ್ದಿದ್ದ ಅರ್ಜುನ, ವೃಷಕೇತುವನ್ನು ಕಂಡು ಮೂರ್ಛೆಗೊಂಡರು. ಅರ್ಜುನನ ಕಾಲಮೇಲೆಬಿದ್ದು ಅವನ ಗುಣಗಳನ್ನು ಬಣ್ಣಿಸಿ ಹೊರಳಾಡಿ ಗೋಳಾಡಿದರು.

'ಓ ಪ್ರಾಣಕಾಂತ, ನಿನ್ನ ಅಂಗಸಂಗವಿಲ್ಲದೆ ಬಹುಕಾಲವಾಗಿದೆ. ಇನ್ನೊಮ್ಮೆ ಬಂದು ಕೂಡಬಾರದೆ? ಮೂರುಲೋಕದಲ್ಲಿ ನಿನಗೆ ಸಮನಾದ ರೂಪ, ಗುಣ, ಶೌರ್ಯ, ಪ್ರೌಢಿಮೆಯುಳ್ಳವರಿಲ್ಲ. ಕಲ್ಲೆದೆಯವರಾದ ನಾವು ಎದೆಯೊಡೆಯದೆ ಇದುವರೆಗೆ ಬದುಕಿದ್ದೇವೆ. ದ್ರೌಪದಿ, ಸುಭದ್ರೆಯರು ನಿನ್ನ ಸಾವನ್ನು ಕೇಳಿ ಹೇಗೆ ಉಳಿಯುವರೋ?' ಎಂದು ಹಂಬಲಿಸಿ ಅತ್ತರು. ದೇಹವನ್ನು ತಬ್ಬಿಕೊಂಡು, ತಲೆಯನ್ನು ಚುಂಬಿಸಿ; ವೃಷಕೇತುವನ್ನುನೋಡಿ ಗೋಳಾಡಿದರು. ಭಾವಾವೇಶಕ್ಕೊಳಗಾದ ಚಿತ್ರಾಂಗದೆ ಮಗನನ್ನುದಿಟ್ಟಿಸಿ ಹೇಳಿದಳು:

'ಅಪ್ಪಾ, ತಂದೆಯನ್ನು ಕೊಂದು ಹಾಕಿದೆಯಲ್ಲಾ, ಇನ್ನು ತಾಯಿಯರಾದ ನಾವಿದ್ದು ಫಲವೇನು? ಪರಶುರಾಮನು ಕೊಂದಂತೆ, ನಿನ್ನ ಖಡ್ಗದಿಂದ ನಮ್ಮನ್ನು ಕೊಂದುಬಿಡು! ತಾಯಿ ತಂದೆಗಳನ್ನು ಸಂಹರಿಸಿದ ಫಲ ನಿನಗೆ ಸಿದ್ಧಿಸುವುದು!'

ಆ ಮಾತಿಗೆ ಬಹುವಾಗಿ ದುಃಖಿಸಿದ ಬಭ್ರುವಾಹನನು ತನ್ನಲ್ಲಿಯ ಮಾತೃಪ್ರಜ್ಞೆ ಜಾಗೃತಗೊಂಡ ಸಂದರ್ಭವನ್ನು ತಿಳಿಸಿದನು.

'ಅಮ್ಮಾ, ನಾನು ಪ್ರೀತಿಯಿಂದ ಆತನಲ್ಲಿಗೆ ಹೋಗಿ ತಂದೆಯೆಂದು ವಿನಯದಿಂದ ಬೇಡಿಕೊಂಡೆ. ನಾನು ಆತನ ಮಗನಲ್ಲವೆಂದು ಹೀನಾಯವಾಗಿ ಜರಿದು ಸಂಕಟವಾಗುವಂತೆ ನೂಕಿದ. ಆ ಕಾರಣ ಕ್ಷತ್ರಿಯ ಪಂಥದಂತೆ ನಾನು ಯುದ್ಧದಲ್ಲಿ ಕೊಂದೆ. ಕೈಮೀರಿದ ಬಳಿಕ ಏನು ಹೇಳಿ, ಏನು ಫಲ? ಪಿತೃಹತ್ಯೆಯಿಂದ ನನ್ನ ಬಾಳು ಹೇಯವಾಯಿತು. ಈ ಕ್ಷಣವೇ ಈ ದೇಹವನ್ನು ತ್ಯಜಿಸುವೆ' ಎಂದು ಕಡುನೊಂದು ಅಗ್ನಿಪ್ರವೇಶಕ್ಕೆ ಸಿದ್ಧನಾದನು.

ಅಗರು, ಚಂದನ ಕಟ್ಟಿಗೆಗಳನ್ನು ತರಿಸುತ್ತಿರುವ ಮಗನನ್ನು ಕಂಡ ಚಿತ್ರಾಂಗದೆ ಕೋಪಗೊಂಡು, ತನ್ನೊಡಲಕುಡಿಯನ್ನು ಸಮಾಧಾನಿಸಿದಳು,

'ಶ್ರೀಕೃಷ್ಣನು ಅರ್ಜುನನ ಮಿತ್ರ. ಆತ ದಯಾಳು. ಅರ್ಜುನನ ಪ್ರಾಣದ ಹೊಣೆ ಅವನದೇ. ಅವನು ಇಲ್ಲಿಗೆ ಬರದೆ ಇರಲಾರನು. ಅದುವರೆಗೂ ಸೈರಿಸಿಕೊಂಡಿರು.'

**ಸಂಜೀವಕದ ಮಣಿ**

ಆದಿಶೇಷನಮಗಳಾದ ಉಲೂಪಿಯು ಆಗ ಒಂದುಉಪಾಯವನ್ನು ಸೂಚಿಸಿದಳು.

'ಅಪ್ಪಾ ಮಗನೇ, ಸತ್ತಿರುವ ಅರ್ಜುನನು ಮರಳಿ ಬದುಕುವ ಉಪಾಯವನ್ನು ಕೇಳು. ಗರುಡನು ಕೊಂದುಹಾಕಿದ ಸರ್ಪಗಳಪ್ರಾಣ ಮರಳುವಂತೆ ಫಣಿರಾಜ, ಪರಮೇಶ್ವರನನ್ನು ಬೇಡಿಕೊಳ್ಳಲು–ಆತ ಕೊಟ್ಟ ಸಂಜೀವಕದ ಮಣಿ ಪಾತಾಳ ಲೋಕದಲ್ಲಿದೆ. ಅದನ್ನು ತರುವ ಶೂರರನ್ನು ಮೂರು ಲೋಕದಲ್ಲಿಯೂ ಕಾಣೆ!'

ಆ ನುಡಿ ಕೇಳಿ ಉಬ್ಬಿಹೋದ ಬಭ್ರುವಾಹನನು,

'ಅಮ್ಮಾ, ಸಂಜೀವಕ ರತ್ನವನ್ನು ತರದಿದ್ದರೆ ನಾನು ಹುಟ್ಟಿ ಫಲವೇನು? ಮಡಿದಿರುವ ಧನಂಜಯನ ಜೀವವನ್ನು ಮತ್ತೆ ಬರಿಸುತ್ತೇನೆ. ರತ್ನವನ್ನು ನೀಡುವುದಿಲ್ಲವೆಂದರೆ ಪಾತಾಳವನ್ನೇ ಸುಟ್ಟುಬಿಡುತ್ತೇನೆ. ಬ್ರಹ್ಮ, ರುದ್ರರು ಅಡ್ಡಿ ಪಡಿಸಿದರೆ ಬಡಿದಟ್ಟುತ್ತೇನೆ. ದಿಕ್ಪಾಲಕರನ್ನು ಸದೆಬಡಿಯುತ್ತೇನೆ. ತಂದೆಯನ್ನು ಬದುಕಿಸಿದರೆ ನಾನು ಮಗನಾಗಿದ್ದು ಸಾರ್ಥಕ.'

'ಮಗನೇ, ಭ್ರಾಂತಿಯ ಮಾತಾಡಬೇಡ. ನೋಡಿದರೆ ಕಣ್ಣೆವೆಗಳು ಸೀದು ಹೋಗುವ ವಿಷದಿಂದ ತುಂಬಿದ ಆದಿಶೇಷನ ಭಂಢಾರದಲ್ಲಿ ಆ ಮಣಿ ಇದೆ. ಅದನ್ನು ಗುಳಿಕ, ವಾಸುಕಿ, ತಕ್ಷಕ, ಶಂಖ, ಪದ್ಮ, ಕಾರ್ಕೋಟಕ ಎಂಬ ಭೀಕರ ಸರ್ಪಗಳು ಕಾಯುತ್ತಿವೆ. ಅದನ್ನು ತರಲು ನಿನ್ನ ಪರಾಕ್ರಮ ಸಾಲದು.'

'ಅಮ್ಮಾ, ನನ್ನತಾಯಿಗೆ ತಂದೆಯಾಗಿ, ವಿಷ್ಣುವಿಗೆ ಹಾಸಿಗೆಯಾಗಿ, ಭೂಮಿಯನ್ನು ಹೊತ್ತಿರುವ ಆದಿಶೇಷನಿಗೆ ಆಯಾಸವಾಗುವುದೆಂಬ ಭಯ ನನಗಿದೆ. ಆ ಸರ್ಪಗಳ ವಿಷಕ್ಕೆ ಹೆದರುವುದಿಲ್ಲ. ಆ ಮಣಿಯನ್ನು ಕೊಡದೆ ಹೋದರೆ–ಸಪ್ತ ಪಾತಾಳವನ್ನು ನನ್ನ ಸಾಮರ್ಥ್ಯದಿಂದ ಭೇದಿಸಿ ತರುತ್ತೇನೆ! ನನ್ನ ತಂದೆಯನ್ನು ಬದುಕಿಸುತ್ತೇನೆ!'

'ಸಾಹಸಿಮಗನೇ ಕೇಳು. ಒಂದು ಮೊದಲಾಗಿ ಒಂಭತ್ತು ನೂರು ಹೆಡೆ ಹೊಂದಿದ ಭಯಂಕರ ವಿಷಜ್ವಾಲೆಯ ಸರ್ಪಗಳು ನಾಗಲೋಕದಲ್ಲಿ ಆದಿಶೇಷನನ್ನು ಓಲೈಸುತ್ತಿವೆ. ಗರುಡ ಆಗಾಗ್ಗೆ ಬಂದು ಕೊಂದುಹಾಕಿದಾಗ, ಸರ್ಪಗಳನ್ನು ಬದುಕಿಸಲು ಆ ಮಣಿಯನ್ನು ಹೊರತೆಗೆಯುತ್ತಾರೆ. ಹಾಗಲ್ಲದೆ ಇನ್ನಾವಸಂದರ್ಭದಲ್ಲಿಯೂ ಹೊರತೆಗೆಯುವುದಿಲ್ಲ.'

'ಅಮ್ಮಾ, ಪಾತಾಳದಲ್ಲಿರುವ ಸರ್ಪಗಳನ್ನುಕೊಂದು ಮಣಿಯನ್ನು ತೆಗೆದುಕೊಂಡುಬಂದು ಸತ್ತಿರುವ ಇಂದ್ರಸುತನನ್ನು, ವೃಷಕೇತುವನ್ನು ಬದುಕಿಸುವೆ. ಅನಂತರ ಅದನ್ನು ಹಿಂದಿರುಗಿಸುವೆ. ಸತ್ತಸರ್ಪಗಳನ್ನು ಅವರು ಬದುಕಿಸಿಕೊಳ್ಳಲಿ!'

'ಅಪ್ಪಾ ಮಗನೇ, ಇನ್ನೊಬ್ಬರಲ್ಲಿರುವ ವಸ್ತುವನ್ನು ಸ್ನೇಹಭಾವದಲ್ಲಿ, ವಿನಯದಿಂದ ಪಡೆದುಕೊಂಡರೆ ಸುಖದಾಯಕ. ಬಲಾತ್ಕಾರ ದುಃಖಕ್ಕೆ ಕಾರಣವಾಗುತ್ತದೆ. ಆದುದರಿಂದ ನೀನು ಅತಿಕ್ರಮಿಸಬೇಡ. ನನಗೆ ಅನುಕೂಲಕರನಾದ ಪುಂಡರೀಕನೆಂಬ ಒಬ್ಬ ಸರ್ಪರಾಜನಿದ್ದಾನೆ. ಅವನನ್ನು ನೆನೆದರೆ ಬರುವನು. ಆತನಿಂದ ಮಣಿಯನ್ನು ತರಿಸುತ್ತೇನೆ.'

**ಉದಾತ್ತ ಬಭ್ರುವಾಹನ**

ಉಲೂಪಿ ಪುಂಡರೀಕನನ್ನು ನೆನೆದಳು. ಅವನು ಬರಲು,

'ಅಯ್ಯಾ, ನೀನು ಆದಿಶೇಷನ ಬಳಿಗೆ ಹೋಗಿ; ನಿನ್ನ ಮಗಳ ಓಲೆ ಭಾಗ್ಯಕ್ಕಾಗಿ, ಅರ್ಜುನ ಬದುಕಲು ಸಂಜೀವಕ ಮಣಿ ನೀಡುವುದೆಂದು ಕೇಳು. ಇಲ್ಲಿನ ವೃತ್ತಾಂತವನ್ನೆಲ್ಲಾ ತಿಳಿಸು. ಆ ರತ್ನವನ್ನು ತೆಗೆದುಕೊಂಡು ಬಾ' ಎಂದು ಹೇಳಿದಳು. ದುಃಖತಪ್ತೆಯಾದ ಆಕೆಯನ್ನು ಸಮಾಧಾನಪಡಿಸಿ ಪುಂಡರೀಕ ಹೇಳಿದನು:

'ತಾಯಿ, ನಾಗಲೋಕದಲ್ಲಿ ಆದಿಶೇಷನನ್ನು ಕಂಡುಬರುವುದು ತಡವಾಗಬಹುದು. ಅದುವರೆಗೆ ಅರ್ಜುನನದೇಹ ಕೆಡದಂತಿರಲು ನಾನು ಕಚ್ಚುವೆನು. ನನ್ನವಿಷ ವ್ಯಾಪಿಸಿದರೆ ದೇಹಕೊಳೆಯುವುದಿಲ್ಲ.'

ಆ ಮಾತು ಕಿವಿಗೆಬೀಳುತ್ತಿದ್ದಂತೆ ಉದಾತ್ತಚರಿತನಾದ ಬಭ್ರುವಾಹನ ಕೇಳಿಕೊಂಡ,

'ಎಲೈ ಪುಂಡರೀಕನೇ, ಈ ಕರ್ಣಪುತ್ರ ಶೂರ, ಚೆಲುವ, ಶುದ್ಧ, ಸುಗುಣಿ, ವಂಶೋದ್ಧಾರಕ. ಈತನದೇಹವನ್ನು ಮೊದಲುಕಚ್ಚಿ ಅನಂತರದಲ್ಲಿ ಅರ್ಜುನನ ಶರೀರವನ್ನು ಕಚ್ಚು.'

ಅದರಂತೆ ಪುಂಡರೀಕ ಅವರಿಬ್ಬರನ್ನೂ ಕಚ್ಚಿ, ಬಭ್ರುವಾಹನ ಉಲೂಪಿಯರನ್ನು ಸಮಾಧಾನಪಡಿಸಿ ಪಾತಾಳಕ್ಕೆ ಹೋದನು.

ಜನಮೇಜಯರಾಯನೇ ಕೇಳು. ಪುಂಡರೀಕ ಫಣಿಪತಿಯು ಅತಳದ ಆಶ್ಚರ್ಯವನ್ನು, ವಿತಳದ ವಿಚಿತ್ರವನ್ನು, ಸುತಳದ ಮಹಾಪ್ರಕಾಶವನ್ನು, ಮಹಾತಳದ ಮಣಿಮಯ ಪ್ರಭೆಯನ್ನು, ತಳಾತಳದ ಅತಿಶಯ ಸೊಬಗನ್ನು, ರಸಾತಳದ ರಮಣೀಯತೆಯನ್ನು ನೋಡಿ ವಿಸ್ಮಯಗೊಂಡು ಪಾತಾಳದ ನಾಗಲೋಕಕ್ಕೆ ಬಂದನು. ಅದು ಬಂಗಾರದ ಮರ ಬಳ್ಳಿಗಳಿಂದ, ನವರತ್ನ ಸೌಧಗಳಿಂದ, ಅಮೃತದ ಬಾವಿಗಳಿಂದ; ಸುವರ್ಣ ಕಮಲಗಳ ಸರೋವರದಿಂದ, ಲಾವಣ್ಯವತಿಯರಾದ ನಾಗಕನ್ನಿಕೆಯರಿಂದ ಕೂಡಿ ಮನೋಹರವಾಗಿತ್ತು. ಅವನು ಭೋಗವತಿ ನದಿಯ ದಡದಲ್ಲಿರುವ ಮಹಾ ಹಾಟಕೇಶ್ವರ ಶಿವಲಿಂಗಕ್ಕೆ ವಂದಿಸಿದನು. ದಿವ್ಯ ಭವನದಲ್ಲಿ ಅನೇಕ ದೇವಾಸುರ, ನಾಗರಗಳಿಂದ ಆವೃತ್ತನಾಗಿ, ತನ್ನ ತಲೆಯಲ್ಲಿರುವ ಸಹಸ್ರ ಮಣಿಗಳ ಕಾಂತಿಯಿಂದ ದೇದೀಪ್ಯಮಾನವಾಗಿರುವ ಆದಿಶೇಷನನ್ನು ಕಂಡನು. ಆತ ನಿಶ್ಚಲ ಭಾವದಲ್ಲಿ ಶ್ರೀಹರಿಯ ಧ್ಯಾನದಲ್ಲಿದ್ದು, ಭೂಮಿಯ ಭಾರವನ್ನು ಹೊರುವ ಕರ್ತವ್ಯದಲ್ಲಿ ನಿರತನಾಗಿದ್ದನು. ಆತನ ಓಲಗದಲ್ಲಿ ಸಮಯವರಿತು ನಮಸ್ಕರಿಸಿ ಪ್ರಾರ್ಥಿಸಿದನು:

'ಎಲೈ ಫಣೀಂದ್ರ ಕೇಳು. ಧರ್ಮರಾಯನು ಶ್ರೀಕೃಷ್ಣನ ಆಜ್ಞೆಯಂತೆ ಅಶ್ವಮೇಧಯಾಗ ಕೈಗೊಂಡಿರಲು, ಕುದುರೆಯೊಡನೆ ಬಂದ ಅರ್ಜುನನನ್ನು ಬಭ್ರುವಾಹನನು ಗಂಗೆಯ ಶಾಪ ನಿಮಿತ್ತ ಕೊಂದನು. ನಿನ್ನ ಮಗಳು ಉಲೂಪಿ ತನ್ನ ಗಂಡನ ಪ್ರಾಣ ಉಳಿಸಲು ಸಂಜೀವಕದ ಮಣಿ ತರಲು ಕಳುಹಿಸಿರುವಳು. ಅವಳು ನೀಡಿರುವ ಗುರುತನ್ನು ನೋಡು.'

ಉಲೂಪಿ ನೀಡಿದ್ದ ಐರದಾಳಿ, ಓಲೆಗಳನ್ನು ನೋಡಿ ದುಃಖಿತನಾದ ಆದಿಶೇಷ ತನ್ನ ಬಳಿಯಲ್ಲಿರುವ ತಕ್ಷಕಾದಿಗಳ ಕಡೆ ತಿರುಗಿ,

'ನಾವು ಸಂಪಾದಿಸಿದ ಉತ್ತಮ ವಸ್ತು ಲೋಕದ ಜನರ ಸಮಯಕ್ಕೆ ಒದಗಿದರೆ ಸಾರ್ಥಕವಾಗುವುದು. ನನ್ನ ಅಳಿಯನಾದ ಅರ್ಜುನ ಉತ್ತಮನೂ, ವಿಷ್ಣು ಭಕ್ತನೂ ಆಗಿರುವನು' ಎಂದಾಗ,

ಆ ಮಾತಿಗೆ ಸರ್ಪಗಳೆಲ್ಲವೂ ದುಮ್ಮಾನದಿಂದ ಚಿಂತಿಸುತ್ತಿರಲು, ಧೃತರಾಷ್ಟ್ರನೆಂಬ ದುಷ್ಟ ಸರ್ಪರಾಜನು ಆದಿಶೇಷನಿಗೆ ಹೇಳಿದನು:

'ಎಲೈ ನಾಗೇಂದ್ರ, ನಮ್ಮ ಸಮಯಕ್ಕೆ ಬೇಕಾದ ಸಂಜೀವಕ ಮಣಿಯನ್ನು ಅನ್ಯರಿಗೆ ನೀಡಿದರೆ, ಮರಳಿ ಪಡೆಯುವುದು ಹೇಗೆ? ಮಾನವರು ನೀಚರು, ಕೃತಘ್ನರು. ಉಪಕಾರವನ್ನು ಸ್ಮರಿಸುವವರಲ್ಲ. ಮಣಿಯನ್ನು ಕೊಡಬೇಡ.'

'ಧೃತರಾಷ್ಟ್ರನೇ ನಿನ್ನಂತಹ ಪರಪೀಡಕರು, ದುರ್ಮಾರ್ಗಿಗಳು ಊರಿಗೂ, ಮನೆಗೂ ಒಬ್ಬೊಬ್ಬರಿರುವರು. ಶಿವ ಶಿವಾ! ದುಃಖದಿಂದ ಕಂಗೆಟ್ಟು ಬಂದು ಕೇಳಿದರೆ, ತನ್ನಲ್ಲಿರುವ ವಸ್ತುವನ್ನು ಕೊಡದೆ ಕಡೆಗಣಿಸುವವನು ದೊಡ್ಡವನೆ? ದಧೀಚಿ, ಶಿಬಿ ಚಕ್ರವರ್ತಿಗಳ ಕೊರತೆಯಾಯಿತೆ? ಅರ್ಜುನನಿಗೆ ಸಂಜೀವಕ ಮಣಿ ಕೊಡುವೆನು.'

'ರಾಜನೇ, ನಿನ್ನಾಜ್ಞೆಯಂತೆ ಮಣಿ ಕೊಟ್ಟರೆ ನಾಗಲೋಕದ ಬಾಳು ಕೆಡುತ್ತದೆ. ಮತಂಗ ಋಷಿಯ ಶಾಪದಿಂದ ಗರುಡನು ಪಾತಾಳಕ್ಕೆ ಬಾರದಿದ್ದರೂ, ಭೂಲೋಕದಲ್ಲಿ ನಮ್ಮ ರತ್ನವನ್ನು ಕಂಡು ಸುಮ್ಮನಿರುವುದಿಲ್ಲ. ನರರ ಆಯುಷ್ಯ ಅಲ್ಪವಾದುದು. ಇಂದು ಬದುಕಿದರೂ, ನಾಳೆ ಅರ್ಜುನ ಸಾಯದಿರುವನೆ? ರತ್ನವನ್ನು ಕೊಡಬೇಡ.'

'ಪಾಂಡವರ ಪ್ರಾಣನಾಗಿರುವ ಶ್ರೀಕೃಷ್ಣನು ಅರ್ಜುನನಸ್ನೇಹಿತ. ಭಕ್ತರಿಗೆ ಆತನೇ ಸಂಜೀವ ರತ್ನವಾಗಿದ್ದಾನೆ. ನಮ್ಮ ರತ್ನದಹಂಗು ಅವರಿಗೇಕೆ? ನೀನು ವಿರೋಧಿಯಾಗಬೇಡ. ಜೀವದಾಯಕಮಣಿಯನ್ನು ಉಳಿಸಿಕೊಳ್ಳೋಣ.'

ಜನಮೇಜಯರಾಯನೇ ಕೇಳು, ಖಿನ್ನನಾದ ಆದಿಶೇಷನು ಪುಂಡರೀಕನಿಗೆ,

'ಈ ನಾಗಲೋಕದ ಸರ್ಪಗಳು ಪರೋಪಕಾರಕ್ಕೆ ಮಣಿಯನ್ನು ಕೊಡಗೊಡಿಸವು ಎಂಬುದನ್ನು ಉಲೂಪಿಗೆ ಹೇಳು' ಎಂದನು.

ರಣರಂಗಕ್ಕೆ ಬಂದ ಪುಂಡರೀಕ ನಡೆದ ವರ್ತಮಾನವನ್ನು ತಿಳಿಸಿದನು.

ಚಿತ್ರಾಂಗದೆ ತಾನು ವಿಧವೆಯಾಗಿ ಬದುಕಿರಲಾರೆ ಎಂದು ಅಗ್ನಿ ಪ್ರವೇಶಕ್ಕೆ ನಿಶ್ಚಯಿಸಿದಳು. ಅದನ್ನು ಕಂಡ ಬಭ್ರುವಾಹನ ಕಿಡಿಗೊಂಡು,

'ನನ್ನ ತಂದೆ, ಶ್ರೀಕೃಷ್ಣನಭಕ್ತ, ಧರ್ಮಜನತಮ್ಮ, ಇಂದ್ರನಮಗ ಅಶ್ವಮೇಧಕ್ಕಾಗಿ ಮಡಿದಿದ್ದಾನೆ. ಬದುಕಿಸಿಕೊಳ್ಳಲು ಸಂಜೀವಕ ಮಣಿ ಕೇಳಿದರೆ ಆದಿಶೇಷ ಕೊಡುವುದಿಲ್ಲವೆಂದಿದ್ದಾನೆ. ನಾನೀಗ ನಾಗಲೋಕವನ್ನು ಆಕ್ರಮಿಸಿ ಮಹಾಮಣಿಯನ್ನು ತರುತ್ತೇನೆ. ನಾನು ಬರುವವರೆಗೆ ವೃಷಕೇತು ಅರ್ಜುನರ ದೇಹಗಳು ಜೋಪಾನವಾಗಿರಲಿ'

ಎಂದು ಹೇಳಿ ಸೇನೆಯೊಡನೆ ಹೊರಟನು. ವಜ್ರಮಯ ಬಾಣಗಳಿಂದ ಭೂಮಿಯಲ್ಲಿ ದೊಡ್ಡ ದಾರಿಮಾಡಿಕೊಂಡು ಪಾತಾಳಲೋಕಕ್ಕೆ ಮುತ್ತಿಗೆ ಹಾಕಿದನು. ಅವನ ಬಾಣಾಘಾತವನ್ನು ಸರ್ಪಗಳು ಸಹಿಸಲಾರದಾದವು. ಆದಿಶೇಷನಿಗೆ ದೂರು ಹೇಳಲು ಅವನು ಧೃತರಾಷ್ಟ್ರನನ್ನು ಬೈದು ಸರ್ಪಗಳನ್ನು ಕಾಳಗಕ್ಕೆ ಕಳುಹಿಸಿದನು.

**ಮಧುಶರ, ಪಿಪೀಲಿಕಾಸ್ತ್ರ**

ವಾಸುಕಿ ಮೊದಲಾದ ಹಾವುಗಳು ಸೂಸಿದ ವಿಷಜ್ವಾಲೆ ಬಭ್ರುವಾಹನನ ಸೈನ್ಯವನ್ನು ಸುಡತೊಡಗಿತು. ಧೃತರಾಷ್ಟ್ರ ಸೇನಾಪತಿಯ ಗುಳಿಕ, ತಕ್ಷಕ, ಶಂಖ, ಕಾರ್ಕೋಟಕರ ತಂಡ ಇಪ್ಪತ್ತೊಂದುಸಾವಿರ ವೈರಿಗಳನ್ನು ಕೊಂದು ಹಾಕಿತು. ಬಭ್ರವಾಹನನು ಕೋಪಗೊಂಡು ಹರಿತಬಾಣಗಳನ್ನು ಸುರಿಸಲು; ಪ್ರಳಯಕಾಲದಲ್ಲಿ ಗಗನದಿಂದ ಇಳೆಗೆ ಉದುರುವ ನಕ್ಷತ್ರ ಮಂಡಲದಂತೆ ಸರ್ಪಗಳ ತಲೆಗಳು ತುಂಡಾಗಿ, ಹೆಡೆಯ ರತ್ನಸಮೇತ ಭೂಮಿಗೆ ಬಿದ್ದವು. ಕಡಿದುಬಿದ್ದರೂ ಹಾವುಗಳ ವಿಷಜ್ವಾಲೆ ಸೇನೆಯನ್ನು ಸುಡುತ್ತಿತ್ತು. ಅದನ್ನು ಕಂಡ ಬಭ್ರುವಾಹನ ಚಾತಕ, ನವಿಲು, ಹದ್ದು, ಮುಂಗುಸಿಗಳಾಗಿ ಸರ್ಪಗಳನ್ನು ಸೀಳುವ ಶ್ರೇಷ್ಠ ಮಂತ್ರಾಸ್ತ್ರಗಳನ್ನು ಹೂಡಿದನು. ಅವು ಸರ್ಪಗಳನ್ನು ಮುತ್ತಿ ಕೊಂದುಹಾಕಿದವು.

ಬಭ್ರುವಾಹನನು ಮಧುಶರದಿಂದ ಸರ್ಪಸಮೂಹದ ಮೇಲೆ ಜೇನು ಸುರಿಸಿದನು. ತಕ್ಷಣ ಪಿಪೀಲಿಕಾಸ್ತ್ರ ಇರುವೆಗಳ ಬಾಣವನ್ನು ಬಿಟ್ಟನು. ಕಟ್ಟಿರುವೆಗಳು ಸರ್ಪಗಳನ್ನು ಮುತ್ತಿಕೊಂಡು ಅವುಗಳ ಕಣ್ಣುಕಚ್ಚಿ, ಚರ್ಮಗಳನ್ನುತಿಂದು, ಮೂಳೆಗಳನ್ನುಕೊರೆದು ಹಾಕಿದವು.

ದಿಕ್ಕೆಟ್ಟ ಸರ್ಪಗಳು ಆದಿಶೇಷನಲ್ಲಿಗೆ ಹೋಗಿ–ನಮ್ಮ ನಾಗಲೋಕ ಬೆಂದು ಹೋಗುವ ಮೊದಲು ಬಭ್ರುವಾಹನನಿಗೆ ಸಂಜೀವಕ ಮಣಿ ಕೊಡಿ–ಎಂದು ಗೋಳಿಟ್ಟವು. ಶ್ರೀಕೃಷ್ಣನ ದರ್ಶನಾಕಾಂಕ್ಷಿಯಾದ ಆದಿಶೇಷನು ತನ್ನ ಸಕಲ ಸರ್ಪಗಳನ್ನು ಕರೆದುಕೊಂಡು ಬಂದು– ಮಹಾಮಣಿಯನ್ನು ಬಭ್ರುವಾಹನನಿಗೆ ನೀಡಿದನು. ನಾಗಲೋಕದ ಉತ್ತಮವಸ್ತುಗಳನ್ನು ತೆಗೆದುಕೊಂಡು ಸಂಭ್ರಮದಿಂದ ಅರ್ಜುನನು ಮಡಿದಿದ್ದ ರಣಭೂಮಿಗೆ ಬಂದನು.

**ಧೃತರಾಷ್ಟ್ರ, ದುರ್ಬುದ್ಧಿ, ದುಸ್ವಭಾವ**

ಜನಮೇಜಯರಾಯನೇ ಕೇಳು. ಆದಿಶೇಷನು ಶ್ರೀಕೃಷ್ಣನ ದರ್ಶನಕ್ಕೆ ಬಭ್ರುವಾಹನನೊಡನೆ ಹೋಗುತ್ತಿರುವುದನ್ನು ಸಹಿಸದ ಧೃತರಾಷ್ಟ್ರನು, ತನ್ನ ತೊಂದರೆಗಳು ಯಶಸ್ವಿಯಾಗದುದಕ್ಕೆ ಚಿಂತಿಸತೊಡಗಿದನು. ಅವನ ದುರ್ಬುದ್ಧಿ, ದುಸ್ವಭಾವರೆಂಬ ಇಬ್ಬರು ಮಕ್ಕಳು–'ನಾವು ಆದಿಶೇಷನ ಜೊತೆ ಹೋಗಿ ಮೋಸದಿಂದ ಅರ್ಜುನನ ತಲೆಯನ್ನು ಹಾರಿಸಿಬಿಡುವೆವು' ಎಂದು ಹೇಳಿದರು. ಆದಿಶೇಷನು ಮಡಿದ ಅರ್ಜುನನಲ್ಲಿಗೆ ಬರುವುದಕ್ಕೆ ಮೊದಲೇ ಅವರು ಮಾಯೆಯಿಂದ ಅರ್ಜುನನತಲೆಯನ್ನು ಅಪಹರಿಸಿದರು. ಬಕದಾಲ್ಭ್ಯಋಷಿಯ ನಿರ್ಜನ ಅರಣ್ಯದಲ್ಲಿ ಬಿಸುಟುಬಂದರು.

ಅಕ್ಕರೆಯಿಂದ ಅರ್ಜುನನ ಕಾಲಬಳಿ ಕುಳಿತಿದ್ದ ಚಿತ್ರಾಂಗದೆ ಉಲೂಪಿಯರು ಅರ್ಜುನನ ಶಿರಸ್ಸು ಕಾಣದೆ ವಿಭ್ರಾಂತರಾದರು. ಆದಿಶೇಷನನ್ನು ಮುಂದಿಟ್ಟುಕೊಂಡು ಬಂದ ಕಲಿಬಭ್ರುವಾಹನ ಯುದ್ಧಭೂಮಿಯಲ್ಲಿ ಅರ್ಜುನನ ತಲೆಕಾಣದೆ; ಹಲವು ಬಗೆಯ ಚಿಂತೆಗೊಳಗಾಗಿ ಸತ್ತವನಂತೆ ಭೂಮಿಗೆ ಉರುಳಿಬಿದ್ದನು.

* * *

ಅತ್ತ ಹಸ್ತಿನಾಪುರದಲ್ಲಿ ಕುಂತಿಯು ಅರ್ಜುನನು ಮಡಿದುಬಿದ್ದ ರಾತ್ರಿ ಒಂದು ಭೀಕರ ಕನಸುಕಂಡಳು. ಅದು ಅರ್ಜುನನು ತೈಲಬಾವಿಯಲ್ಲಿ ಮುಳುಗಿ, ಕೆಂಪು ದಾಸವಾಳ ಹೂವಿನಮಾಲೆ ಹಾಕಿಕೊಂಡು, ಸಗಣಿಬಳಿದುಕೊಂಡು, ಕತ್ತೆಯನ್ನು ಏರಿ, ದಕ್ಷಿಣದಿಕ್ಕಿಗೆ ಹೋಗುತ್ತಿರುವುದಾಗಿತ್ತು. ಅದನ್ನು ಶ್ರೀಕೃಷ್ಣ, ಧರ್ಮರಾಯ, ಭೀಮರಿಗೆಹೇಳಿ ಅಳತೊಡಗಿದಳು. ಸುಭದ್ರೆ ಕಂಬನಿದುಂಬಿದಳು.

ಶ್ರೀಕೃಷ್ಣನು ಗರುಡನನ್ನು ನೆನೆದನು. ಗರುಡಬರಲು ಅವನ ಬೆನ್ನಮೇಲೆ ಕುಳಿತು ಭೀಮ, ಯಶೋದೆ, ದೇವಕಿ, ಕುಂತಿ ಮೊದಲಾದವರೊಡನೆ ಮಣಿಪುರಕ್ಕೆ ಹೊರಟನು. ಆಕಾಶ ಮಾರ್ಗದಲ್ಲಿ ಬರುತ್ತ ಶ್ರೀಕೃಷ್ಣನು ಭೀಮನಿಗೆ ಮಣಿಪುರದ ಹೊರಭಾಗದಲ್ಲಿ ರಣರಂಗದಲ್ಲಿ ಅರ್ಜುನನ ಸುತ್ತಲೂ ಗುಂಪುಗೂಡಿರುವ ಹೆಂಗಸರನ್ನು ತೋರಿಸಿ,

'ಭೀಮಸೇನಾ, ಇಲ್ಲಿ ನೋಡು. ಅರ್ಜುನನ ಮುಂಡಮಾತ್ರ ಇದೆ! ಮುಖ ಕಮಲ ಕಾಣುತ್ತಿಲ್ಲ! ಅವನ ಸುತ್ತಲೂ ಇರುವ ಸ್ತ್ರೀಯರ ಮುಖವೆಂಬ ಚಂದ್ರ ಮಂಡಲದಿಂದ ಅದು ಮರೆಯಾಯಿತೇ?'

'ಕೃಷ್ಣಾ, ನಿನ್ನ ಮನೋಹರ ಸೂರ್ಯಮೂರ್ತಿ ಲೋಕದಲ್ಲಿ ಉದಯಿಸಲು, ಅರ್ಜುನನ ಮುಖಕಮಲ ಪ್ರಕಾಶಿಸದಿರುವುದೇ?'

**ಮಾನವರ ರೀತಿ ಮರುಗಿದ ಶ್ರೀಕೃಷ್ಣ**

ಲಲಿತರತ್ನಗಳ ಪ್ರಕಾಶದಿಂದಲೂ, ಲಲನೆಯರ ಆಭರಣಗಳ ಕಾಂತಿಯಿಂದಲೂ, ಕರ್ಪೂರಶ್ರೀಗಂಧದ ಎಣ್ಣೆಯ ದೀಪಗಳಿಂದಲೂ ಯುದ್ಧಭೂಮಿ ಮಧ್ಯರಾತ್ರಿಯಲ್ಲಿ ಹಗಲಿನಂತೆ ಕಾಣುತ್ತಿತ್ತು. ಶ್ರೀಕೃಷ್ಣನು ಭೀಮ, ಕುಂತಿ, ದೇವಕಿ, ಯಶೋದೆಯರೊಡಗೂಡಿ ಯುದ್ಧಭೂಮಿಗೆ ಇಳಿದುಬಂದನು. ಪಾರ್ಥನ ಶರೀರವನ್ನು ನೋಡಿ ದುಃಖಿತನಾಗಿ,

'ತಂದೆ, ಅಪ್ಪಾ ಅರ್ಜುನ, ನಿನಗೆ ಮರಣ ಯಾರಿಂದ ಬಂದಿತು?' ಎಂದು ಹಲುಬಿದನು. ಆಪ್ತ ಬಾಂಧವ್ಯದ ಕೊಂಡಿ ಕಳಚಿತೆಂಬ ಭಾವಕ್ಕೆ ಒಳಗಾಗಿ ಮಾನವರ ರೀತಿ ಅತಿಯಾಗಿ ವಿಲಾಪಿಸಿ,

'ಅರ್ಜುನ ಏಳು. ನಾನು ಕೃಷ್ಣ, ನಿನ್ನನ್ನು ಕಾಣಲು ಬಂದಿರುವೆ. ತಾಯಿ ಕುಂತಿಗೆ ನಮಸ್ಕರಿಸು. ಅಳಿಯನೆಂದು ಹರಸುತ್ತಿರುವ ದೇವಕಿ, ಯಶೋದೆಯರನ್ನು ಮಾತನಾಡಿಸು. ಅಣ್ಣ ಭೀಮನನ್ನು ನೋಡು. ಅಪ್ಪಾ, ನೀನು ಹೀಗೆ ಮಾತನಾಡದಿದ್ದರೆ ಧರ್ಮಜನ ಅಶ್ವಮೇಧಯಾಗ ಪೂರೈಸುವವರು ಯಾರು?'

ತನ್ನ ಮಗನ ಸ್ಥಿತಿಯನ್ನು ಕಂಡು ಕುಂತಿದೇವಿಯು ದುಃಖಿತಳಾಗಿ ಮೂರ್ಛೆ ಹೋದಳು. ಭೀಮನ ಕಣ್ಣುಗಳು ಕಂಬನಿದುಂಬಿದವು. ಶ್ರೀಕೃಷ್ಣನೇ ರಕ್ಷಕ ಎಂದು ತಿಳಿದ ಅವನು,

'ದೇವ, ಸೂರ್ಯನ ಸಂಚಾರದಲ್ಲಿ ಕತ್ತಲೆಯೇ? ವ್ಯಸನ ಪಡಬೇಡ. ನಿನ್ನ ಕೃಪಾವಲೋಕನದಿಂದ ಅರ್ಜುನ ಬದುಕದಿರುವನೇ? ಅರ್ಜುನನೊಡನೆ ವೃಷಕೇತುವೂ ಸತ್ತುಬಿದ್ದಿರುವನು. ಕರುಣಾದೃಷ್ಟಿ ಬೀರು. ಈ ವೀರರನ್ನು ಸಂಹರಿಸಿದ ಶೂರ ನನ್ನೊಡನೆ ಯುದ್ಧಕ್ಕೆ ಬರಲಿ!' ಎಂದು ಮಾತಾಡುತ್ತಿರುವಾಗ, ಉಲೂಪಿಯ ಮನೆಯಲ್ಲಿ ಶುಶ್ರೂಷೆಯಿಂದ ಚೇತರಿಸಿಕೊಂಡ ಅನಿರುದ್ಧ ಸಾತ್ಯಕಿಗಳು ಯುದ್ಧಭೂಮಿಗೆ ಬಂದರು.

ತಂದೆ ಮಕ್ಕಳಲ್ಲಿ ನಡೆದ ಸಂವಾದ, ನಡೆದ ಸಂಗತಿಗಳನ್ನೆಲ್ಲ ತಿಳಿಸಿದರು. ಬಭ್ರುವಾಹನನನ್ನು ಶ್ರೀಕೃಷ್ಣ ಭೀಮರಿಗೆ ಪರಿಚಯಿಸಿದರು.

ಜನಮೇಜಯರಾಯನೇ ಕೇಳು. ಬಹುದುಃಖಿತನಾದ ಬಭ್ರುವಾಹನನು ಭೀಮನ ಪಾದಗಳ ಮೇಲೆ ಬಿದ್ದು,

'ಓ ತಂದೆ, ನಿನ್ನ ತಮ್ಮನನ್ನು ಕೊಂದವನು ನಿನಗೆ ಹಗೆಯಲ್ಲವೇ? ತಂದೆಯನ್ನು ಕೊಂದ ಪಾಪಿ ನಾನು. ನನ್ನನ್ನು ಗದೆಯಿಂದ ಅಪ್ಪಳಿಸು' ಎಂದು ಹೇಳಿ; ಶ್ರೀಕೃಷ್ಣನನ್ನು ನೋಡಿ, ಭಕ್ತಿ ಭಾವದಿಂದ ತಲೆ ತಗ್ಗಿಸಿ ಆತನ ಪಾದಹಿಡಿದು ಕೇಳಿಕೊಂಡನು:

'ಶ್ರೀಹರಿಯೇ, ದುಷ್ಟರನ್ನು ಶಿಕ್ಷಿಸುವವನು, ಶಿಷ್ಟರನ್ನು ರಕ್ಷಿಸುವವನು ನೀನೆ ಆಗಿರುವೆ. ನಾನು ನಿನ್ನ ಭಕ್ತನಾದ ನನ್ನ ತಂದೆಯನ್ನು ಕೊಂದು ಕೊಲೆಗೆ ಗುರಿಯಾಗಿರುವೆ. ಹಿಂದೆ ರಾಹುವನ್ನು ಕೊಂದ ಹಾಗೆ ನಿನ್ನ ಚಕ್ರಾಯುಧದಿಂದ ನನ್ನನ್ನು ಸಂಹರಿಸು.'

ಶ್ರೀಕೃಷ್ಣ, ಭೀಮರ ಮನಸ್ಸು ಅವನ ಮುಗ್ಧ ನಿಷ್ಕಲ್ಮಷ ಪ್ರೀತಿಗೆ ಕರಗಿ ನೀರಾಯಿತು. ಬಭ್ರುವಾಹನನು ಕಡುಶೋಕದಿಂದ ದೇವಕಿ, ಯಶೋದೆ, ಕುಂತಿಯರ ಕಾಲುಗಳ ಮೇಲೆ ಬಿದ್ದು,

'ತಂದೆಯನ್ನು ಕೊಂದ ಮೊಮ್ಮಗನನ್ನು ಹರಸುವಿರೇಕೆ? ಪಾರ್ಥನ ಪತ್ನಿಯರಾದ, ನನ್ನ ತಾಯಿಯರಾದ ಚಿತ್ರಾಂಗದೆ, ಉಲೂಪಿಯರು ಇಲ್ಲೇ ಇರುವರು ನೋಡಿ' ಎಂದು ಅತಿ ದುಃಖಿತನಾದನು. ಚಿತ್ರಾಂಗದೆ ಉಲೂಪಿಯರು ಕುಂತಿ, ದೇವಕಿ, ಯಶೋದೆಯರನ್ನು ಕಂಡು–ತಾವು ಅರ್ಜುನನ ಹೆಂಡತಿಯರೆಂದು ಹೇಳಿಕೊಂಡರು. ತಾಯಿ ಕುಂತಿಯು ಮಗನ ಮುಂಡವನ್ನು ಮುಟ್ಟಿ ಗೋಳಿಡುತ್ತ, ಕೃಷ್ಣನಕಡೆಗೆ ತಿರುಗಿ,

'ಕೃಷ್ಣ, ಫಲ್ಗುಣನ ಸ್ಥಿತಿ ನೋಡಿದೆಯಾ? ನೀನು ಯಾರ ತೇರನ್ನು ನಡೆಸುವೆ? ತ್ರೈಲೋಕ ವೀರನೆಂದು ಹೊಗಳಿಸಿಕೊಳ್ಳುವವರು ಇನ್ನು ಯಾರಿದ್ದಾರೆ? ಪರಮೇಶ್ವರನನ್ನು ಜಯಿಸಿ ತಂದ ಬಿಲ್ಲನ್ನು ಇನ್ನು ಹಿಡಿಯುವವರಾರು? ಅಣ್ಣ ತಮ್ಮಂದಿರ ನಡುವೆ ಇನ್ನು ತೇಜಸ್ಸಿನಿಂದ ಹೊಳೆಯುವವರಾರು? ಧರ್ಮಜ ಇನ್ನು ಯಾರನ್ನು ಆಲಂಗಿಸಿಕೊಳ್ಳುವನು ಹೇಳು?

'ಕರ್ಣನನ್ನು ಕಂಡು ಯಾರಿಗೂ ಗೊತ್ತಾಗದಂತೆ ಹಿಗ್ಗುತ್ತಿದ್ದೆ. ಅವನನ್ನು ಅರ್ಜುನ ಕೊಂದ ಮೇಲೆ ಈ ಮೊಮ್ಮಗನ ಮುಖ ನೋಡಿ ಕರ್ಣನ ದುಃಖ ಮರೆಯುತ್ತಿದ್ದೆ. ಇಂದು ವೃಷಕೇತುವಿನಲ್ಲಿ ನಮ್ಮವಂಶ ಕೊನೆಯಾಯಿತಲ್ಲಾ!' ಎಂದು ಮರುಗಿದಳು.

ಶ್ರೀಕೃಷ್ಣನನ್ನು ಧ್ಯಾನಿಸುತ್ತ ನಿಂತ ಆದಿಶೇಷ ನಮಸ್ಕರಿಸುತ್ತ ಪ್ರಾರ್ಥಿಸಿದ:

'ಎಲೈ ಸ್ವಾಮಿಯೇ, ಸಮಸ್ತ ಲೋಕವನ್ನು ಪೊರೆಯುವ ನಿನಗೆ, ಈ ನರನನ್ನು ಬದುಕಿಸುವುದು ಅಸಾಧ್ಯವೆ? ಧರ್ಮರಾಯನವಂಶ ಮುಳುಗಿತು. ಅಲಕ್ಷ್ಯ ಮಾಡದೆ ಉದ್ಧರಿಸು. ನಿನ್ನ ಭಕ್ತರಿಗೆ ಸದಾ ಶುಭವಲ್ಲದೆ; ಪಾಪ, ದುಃಖ, ಭಯ, ಸಂಕಟಗಳೆ? ಬಭ್ರುವಾಹನನು ಅರ್ಜುನನ ಪ್ರಾಣ ಉಳಿಸಲು ಸಂಜೀವಕ ಮಣಿಗಾಗಿ ನಮ್ಮ ಮೇಲೆ ಯುದ್ಧ ಮಾಡಿದ. ಇಗೋ ಸಂಜೀವಕ ರತ್ನ ನನ್ನಲ್ಲಿದೆ. ಅರ್ಜುನನ ತಲೆಯನ್ನು ತರಿಸು. ನೀನು ಸರ್ವಾಂತರ್ಯಾಮಿ. ನಿನಗೆ ತಿಳಿಯದಿರುವುದಾವುದು!'

ಶ್ರೀಕೃಷ್ಣನು ಸ್ತ್ರೀಯರನ್ನು ಸಮಾಧಾನಪಡಿಸಿ, ಅವರ ರೋದನ ನಿಲ್ಲಿಸಿ ನುಡಿದ:

'ನೀವೆಲ್ಲರೂ ನನ್ನ ಪ್ರತಿಜ್ಞೆ ಕೇಳಿ. ಇದುವರೆಗೂ ನಾನು ಬ್ರಹ್ಮಚರ್ಯದಿಂದ ಇಂದ್ರಿಯಗಳನ್ನು ಕಾಪಾಡಿಕೊಂಡು ಬಂದಿದ್ದರೆ, ಕರ್ಣಕುಂಡಲ ವಿಭೂಷಿತವಾದ ಪಾರ್ಥನಶಿರ ಇಲ್ಲಿಗೆ ಬರಲಿ. ಅದನ್ನು ಕದ್ದ ಅಪರಾಧಿಗಳು ನನ್ನ ಆಜ್ಞೆಯಿಂದ ಮಡಿಯಲಿ. ನಾನು ಸಾರಿ ಹೇಳಿದ್ದೇನೆ ತಿಳಿಯಿರಿ.'

ಎಲೈ ಜನಮೇಜಯರಾಯನೇ ಕೇಳು. ಕೃಷ್ಣನು ಹೇಳಿ ಬಿಟ್ಟ ಸುದರ್ಶನಚಕ್ರವು ದುಸ್ವಭಾವ ದುರ್ಬುದ್ಧಿಗಳನ್ನು ಕೊಂದುಹಾಕಿ, ಆ ಕ್ಷಣದಲ್ಲಿ ಪಾರ್ಥನ ತಲೆಯನ್ನು ತೆಗೆದುಕೊಂಡು ಬಂದಿತು. ಜನ ಕೊಂಡಾಡಿದರು. ಹರುಷದಿಂದ ಆದಿಶೇಷನು ಸಂಜೀವಕ ಮಣಿಯನ್ನು ಶ್ರೀಕೃಷ್ಣನ ಕೈಗಿತ್ತನು. ಶ್ರೀಹರಿಯು ತಾನೇ ಮೊದಲು ಕರ್ಣಪುತ್ರನ ಮುಂಡರುಂಡಗಳನ್ನು ಕೂಡಿಸಿ ಸಂಜೀವಕ ಮಣಿಯನ್ನು ಎದೆಯ ಮೇಲಿಟ್ಟನು. ಅನಂತರ ಅರ್ಜುನನ ಕಾಯಕ್ಕೆ ಶಿರವನ್ನು ಸೇರಿಸಿ ಎದೆಯ ಹತ್ತಿರಕ್ಕೆ ಆ ದಿವ್ಯ ರತ್ನವನ್ನಿಟ್ಟನು. 'ಇವರಿಬ್ಬರೂ ಪರಮೇಶ್ವರನ ಅಪ್ಪಣೆಯಂತೆ ಬದುಕಲಿ' ಎಂದು ಕೃಪೆದೋರಿ ನೋಡಿದನು.

ಪರಮೇಶ್ವರನ ಪ್ರಸಾದದಿಂದ ಅವರಿಬ್ಬರೂ ಬದುಕಿಕೊಂಡರು. ಅವರಿಬ್ಬರ ಕಣ್ಣುಗಳು ಅರಳಿ, ಒಡಲೊಳಗೆ ಪ್ರಾಣ ವ್ಯಾಪಿಸಿಕೊಂಡಿತು. ಅವರು ಶ್ರೀಕೃಷ್ಣನನ್ನು ಧ್ಯಾನಿಸುತ್ತ ಮೈಮುರಿದೆದ್ದರು. ಶ್ರೀಕೃಷ್ಣನನ್ನು ಕಂಡು ಪಾದಗಳಿಗೆ ನಮಸ್ಕರಿಸಿದರು. ಶ್ರೀಕೃಷ್ಣ ಅವರನ್ನು ತಬ್ಬಿಕೊಂಡು ಮುದ್ದಿಸುತ್ತ, ದಯಾಮಯನಾಗಿ ಮೈದಡವಿದ. ಆಕಾಶದಲ್ಲಿ ದೇವ ದುಂದುಭಿ ಮೊಳಗಿದುವು. ದೇವತೆಗಳು ಅರ್ಜುನ ವೃಷಕೇತುವಿನ ಮೇಲೆ ಹೂವಿನಮಳೆಗರೆದರು.

ಭೀಮನು ಅವರನ್ನು ಆಲಂಗಿಸಿಕೊಂಡನು. ಕುಂತಿ ಜೀವವ್ಮೈದುಂಬಿದಂತೆ ಮುದ್ದಾಡಿದಳು. ದೇವಕಿ ಯಶೋದೆಯರು ಹರಸಿದರು. ಶ್ರೀಕೃಷ್ಣನು ಆದಿಶೇಷನನ್ನು ಭೇಟಿ ಮಾಡಿಸಲು ಅವರಿಬ್ಬರೂ ಆತನಿಗೆ ಎರಗಿದರು. ಶ್ರೀಹರಿಯು ಸಂತೋಷದಿಂದ ಪಾಂಚಜನ್ಯವನ್ನುಊದಿ ಧ್ವನಿಮಾಡಿದನು.

ಅನಿರುದ್ಧ, ಸಾತ್ಯಕಿ ಮೊದಲಾದ ಯದುವೀರರು ಚೇತರಿಸಿಕೊಂಡೆದ್ದರು. ಉಲೂಪಿ, ಚಿತ್ರಾಂಗದೆಯರು ತಮಗೆ ಮಾಡಿದ ಉಪಚಾರಗಳನ್ನು ಸಂತಸದಿಂದ ಹೇಳಿಕೊಂಡರು. ಅನುಸಾಲ್ವ, ಯೌವನಾಶ್ವ, ನೀಲಧ್ವಜ, ಹಂಸಧ್ವಜರಿಗೆ ಶ್ರೀಕೃಷ್ಣನನ್ನು ಕಂಡು ಸಂತೋಷ ಉಕ್ಕಿಬಂದಿತು. ಎಲ್ಲರೂ ಶ್ರೀಕೃಷ್ಣನಿಗೆ ನಮಸ್ಕರಿಸಿದರು.

ಶ್ರೀಕೃಷ್ಣನು ಗಂಗೆಯ ಶಾಪದಿಂದ ಅಪಜಯ ಉಂಟಾಯಿತೆಂದು ಅರ್ಜುನನಿಗೆ ಹೇಳಿ, ಸಂತೈಸಿದನು. ಉಲೂಪಿ ಚಿತ್ರಾಂಗದೆಯರು ಉತ್ತಮ ವಸ್ತುಗಳನ್ನು ಕಾಣಿಕೆ ಕೊಟ್ಟು ಅಸುರಾರಿಯನ್ನು ದರ್ಶನ ಮಾಡಿದರು. ಉಭಯ ಸೈನ್ಯವು ಸಂತೋಷದಿಂದ ನೆರೆಯಿತು. ಮಂಗಳ ವಾದ್ಯಗಳು ಸಂತಸದಲ್ಲಿ ಮೊಳಗಿದವು. ಶ್ರೀಕೃಷ್ಣನ ದರ್ಶನದಿಂದ ಸಕಲರ ಸಂಕಟವೂ ದೂರವಾಯಿತು.

ಬಭ್ರುವಾಹನನ ವಿನಯಭರಿತ ಪ್ರಾರ್ಥನೆಯಂತೆ ಎಲ್ಲರೂ ಮಣಿಪುರಕ್ಕೆ ಬಂದರು. ಮಣಿಪುರದ ಜನರು ತಮ್ಮ ಪುರವನ್ನು ಸಂಭ್ರಮದಿಂದ ಶೃಂಗರಿಸಿದರು. ಶ್ರೀಹರಿ, ಆದಿಶೇಷ, ಅರ್ಜುನ, ರಾಜಾಧಿರಾಜರನ್ನು ಬರಮಾಡಿಕೊಂಡು, ಅವರನ್ನು ಕಂಡು ಧನ್ಯಭಾವದಲ್ಲಿ ಮಿಂದರು.

**ಕುದುರೆಯ ರಕ್ಷಣೆಗೆ ಹೊರಟ ಶ್ರೀಕೃಷ್ಣ**

ಎಲ್ಲರೂ ಓಲಗ ಶಾಲೆಯನ್ನು ಪ್ರವೇಶಿಸಿದರು. ಬಭ್ರುವಾಹನನು ತಂದೆ ಅರ್ಜುನನಿಗೆ ಅಖಿಲ ರಾಜ್ಯವನ್ನು ನೀಡಿ, ತನ್ನ ಸಿಂಹಾಸನವನ್ನು ಒಪ್ಪಿಸಿ ತುಸು ನಾಚಿಕೆಯಲ್ಲಿ ಸುಮ್ಮನೆ ನಿಂತುಕೊಂಡನು. ಅರ್ಜುನನು ಮೌನದಿಂದಿದ್ದನು.

ಜನಮೇಜಯರಾಯನೇ ಕೇಳು. ಖಿನ್ನನಾಗಿರುವ ಅರ್ಜುನನನ್ನು ಕಂಡು ಆದಿಶೇಷ, ಭೀಮರು ಸಮಾಧಾನಪಡಿಸುತ್ತ ಹೇಳಿದರು:

'ಅರ್ಜುನ, ಇದುವರೆಗೂ ಅಜೇಯನಾಗಿದ್ದ ನಿನಗೆ, ನಿನ್ನ ಮಗನಿಂದ ಅಪಜಯವಾಗಿದೆ. ಇದಕ್ಕಾಗಿ ವ್ಯಥೆ ಪಡಬೇಡ. ನಿನಗಿನ್ನೂ ಮಗನ ಮೇಲೆ ಒಲವು ಉಂಟಾಗಲಿಲ್ಲವೆ? ಮಗನನ್ನು ಕ್ಷಮಿಸು. ದೇವಗಂಗೆಯ ಶಾಪದಿಂದ ನಿನಗೆ ಸೋಲಾಯಿತು. ಶ್ರೀಕೃಷ್ಣನಕೃಪೆಯಿಂದ ಬದುಕಿಕೊಂಡೆ!'

ಅವರ ದನಿಗೆ ದನಿಯಾಗಿ ಹಂಸಧ್ವಜ, ಕುಂತಿ, ಯಶೋದೆ ಮೊದಲಾದವರು,

'ಧನಂಜಯನೆ, ಉಲೂಪಿ, ಚಿತ್ರಾಂಗದೆ ನಿನ್ನ ಹೆಂಡತಿಯರು. ಅವರನ್ನು ಪ್ರೀತಿಯಿಂದ ಆದರಿಸದೆ, ಮಗನಿಂದ ಸಿರಿಯನ್ನು ಸ್ವೀಕರಿಸದೆ. ಅವರನ್ನು ಕ್ಷಮಿಸದೆ ಮರುಳನಂತೇಕಿರುವೆ?

'ಎಲೈ ಕೃಷ್ಣನೇ, ನೀನಾದರೂ ನಿನ್ನ ಭಾವಮೈದುನನಿಗೆ ಬುದ್ಧಿ ಹೇಳಬಾರದೆ?' ಎಂದು ಒತ್ತಾಯಿಸಿದರು. ನಾಚಿ ಮುದ್ದೆಯಾಗಿದ್ದ ಬಭ್ರುವಾಹನನು ನುಡಿದ!

'ನಾನೀಗ ಏನು ಮಾಡುವೆನೆಂದು ನೀವೆಲ್ಲಾ ಕೇಳಿ. ಈ ರಾಜ್ಯವನ್ನು ನನ್ನ ತಂದೆಯ ಪಾದಕ್ಕೆ ಒಪ್ಪಿಸಿ, ಹಿಮಾಲಯವನ್ನು ಸೇರಿ ಈ ದೇಹವನ್ನು ತ್ಯಜಿಸಿ ಮೋಕ್ಷವನ್ನು ಪಡೆಯುವೆ. ಹಾಗಲ್ಲದಿದ್ದರೆ ನನ್ನ ತಂದೆಯೂ, ಧರ್ಮಾತ್ಮನೂ, ವಿಷ್ಣು ಭಕ್ತನೂ ಆದ ಅರ್ಜುನನನ್ನು ಕೊಂದ ಪಾಪ ಪರಿಹಾರವಾಗುವುದಿಲ್ಲ!'

ಎಲ್ಲವನ್ನೂ ಶಾಂತಮನಸ್ಸಿನಿಂದ ಗಮನಿಸುತ್ತಿದ್ದ ವಾಯುಪುತ್ರ ಭೀಮಸೇನನು ತಕ್ಷಣ,

'ಮಗನೇ, ತಪ್ಪು ಮಾತನಾಡಿದೆ. ನಿನ್ನೆದುರಿಗೆ ಶ್ರೀಕೃಷ್ಣನಿರುವಾಗ ಪಾಪ ಉಂಟಾಗುವುದೇ? ಗುರು, ಪಿತಾಮಹರನ್ನು ಸಂಹರಿಸಿದ ನಮಗೆ ಎಳ್ಳಷ್ಟಾದರೂ ಪಾಪ ಸೋಕಿತೆ? ಹೊಳೆಯುವ ಸೂರ್ಯನೆದುರು ಕತ್ತಲೆ ನಿಲ್ಲುವುದೇ? ಶ್ರೀಹರಿಯನ್ನು ಆಶ್ರಯಿಸಿದವರಿಗೆ ಭಯ, ಶೋಕ, ನರಕಾದಿಗಳು ಉಂಟಾಗುವುದೇ? ಪರಮಪುರುಷನ ನಾಮಸ್ಮರಣೆಯಿಂದ ಸಕಲ ಪಾಪವೂ ಪರಿಹಾರವಾಗುವುವು. ಶ್ರೀಕೃಷ್ಣನೇ ನಿನ್ನ ಮುಂದಿರಲು ನಿನಗೆಲ್ಲಿ ಪಾತಕ? ಧರ್ಮರಾಯನ ಯಜ್ಞಾಶ್ವವನ್ನು ಸಂರಕ್ಷಿಸಿ ಸುಖಿಯಾಗು' ಎಂದು ನುಡಿಯಲು, ಸಭೆಯಲ್ಲಿದ್ದವರೆಲ್ಲರೂ ಸಂತೋಷಗೊಂಡರು.

ಅರ್ಜುನನು ಮಗನನ್ನು ಸಮಾಧಾನಪಡಿಸಿ, ಸಿಂಹಾಸನದಲ್ಲಿ ಶ್ರೀಕೃಷ್ಣಭೀಮಸೇನರೊಡನೆ ಕುಳ್ಳಿರಿಸಿಕೊಂಡನು. ಕುಂತಿಯು ಮಕ್ಕಳು ಮೊಮ್ಮಕ್ಕಳ ವೈಭವಕ್ಕೆ ಹಿಗ್ಗಿದಳು. ಮಣಿಪುರದಲ್ಲಿ ಉತ್ಸವಗಳು ಜರುಗಿದವು. ಆದಿಶೇಷನನ್ನು ಸತ್ಕರಿಸಿ ಪಾತಾಳ ಲೋಕಕ್ಕೆ ಕಳುಹಿಸಿದರು.

ಉಲೂಪಿ ಚಿತ್ರಾಂಗದೆಯರು ಕೃಷ್ಣ, ಭೀಮ, ಅರ್ಜುನ, ಪ್ರದ್ಯುಮ್ನ, ವೃಷಕೇತು, ದೇವಕಿ, ಯಶೋದೆಯರನ್ನು ತಮ್ಮ ಅರಮನೆಯಲ್ಲಿ ಹರ್ಷದಿಂದ ಉಪಚರಿಸಿದರು. ನಿತ್ಯವೂ

ನೃತ್ಯಸಂಗೀತಗಳ ಸವಿಯುಣಿಸಿದರು. ಅವರೆಲ್ಲರೂ ಐದುದಿನಗಳಕಾಲ ಮಣಿಪುರದಲ್ಲಿ ಸಂತೋಷದಿಂದಿದ್ದರು.

ಹಸ್ತಿನಾಪುರದಲ್ಲಿ ಧರ್ಮರಾಯನು, ತಾವು ಬರಲಿಲ್ಲವೆಂದು ಚಿಂತೆಗೊಳಗಾಗುವನೆಂದು ಶ್ರೀಕೃಷ್ಣನು ಭಾವಿಸಿದನು. ಕುಂತಿ, ಚಿತ್ರಾಂಗದೆ, ಉಲೂಪಿ, ದೇವಕಿ, ಯಶೋಧೆಯರನ್ನು; ಮಣಿಪುರದ ಅಮೂಲ್ಯ ವಸ್ತುಗಳನ್ನು ಭೀಮನೊಡನೆ ಹಸ್ತಿನಾವತಿಗೆ ಕಳುಹಿಸಿದನು. ಅರ್ಜುನ ಬಭ್ರುವಾಹನರ ಕೂಡೆ ಶ್ರೀಕೃಷ್ಣನು ತಾನೇ ಕುದುರೆಯ ರಕ್ಷಣೆಗೆ ಹೊರಟನು.

* * *

# ಮಯೂರಧ್ವಜ

ಜನಮೇಜಯರಾಯನೇ ಮುಂದಿನ ಆಶ್ಚರ್ಯವನ್ನು ಕೇಳು. ಧರ್ಮರಾಯನ ಯಜ್ಞಾಶ್ವವು ಮಣಿಪುರದಿಂದ ಶರತ್ಕಾಲದಲ್ಲಿ ಮುಂದಕ್ಕೆ ಹೊರಟಿತು. ನದಿಗಳ ಆರ್ಭಟ ನಿಂತು, ಅವು ತಿಳಿನೀರಿನಿಂದ ಹರಿಯುತ್ತಿದ್ದುವು. ರಾಜಹಂಸಗಳು ಸುಳಿದಾಡುತ್ತಿದ್ದುವು. ಆಗಸವು ನಿರ್ಮಲವಾಗಿದ್ದು ನಕ್ಷತ್ರಗಳು ಥಳಥಳಿಸುತ್ತಿದ್ದುವು. ದುಂಬಿಗಳು ತಾವರೆಯನ್ನುಹುಡುಕುತ್ತ ಹೊರಟಿದ್ದುವು. ದಿಗ್ವನಿತೆಯ ಮೊಲೆಯ ಮೇಲ್ಸೆರಗು ಸೆಳೆದಂತೆ ಪರ್ವತ ಸಮೂಹಗಳು ಪ್ರಕಾಶಿಸುತ್ತಿದ್ದುವು. ಹೊಂಬಣ್ಣದ ತೆನೆಗಳೊಡನೆ ಭೂದೇವಿ ಶೋಭಿಸುತ್ತಿದ್ದಳು.

ಯಾಗದ ಕುದುರೆಯು ಸಂಚರಿಸುತ್ತ ಮಯೂರಧ್ವಜನ ರಾಜ್ಯ ರತ್ನಪುರಕ್ಕೆ ಬಂದಿತು. ಅವನು ಈ ಮೊದಲು ಏಳುಅಶ್ವಮೇಧಗಳನ್ನು ಯಶಸ್ವಿಯಾಗಿ ನಡೆಸಿ, ನರ್ಮದಾನದಿಯತೀರದಲ್ಲಿ ಎಂಟನೆಯಯಾಗಕ್ಕೆ ದೀಕ್ಷಿತನಾಗಿ ಕುಳಿತಿದ್ದನು. ಆತನು ಸಂಚಾರಕ್ಕೆಬಿಟ್ಟ ಕುದುರೆಯರಕ್ಷಣೆಗೆ ಆತನಮಗತಾಮ್ರಧ್ವಜನಿದ್ದನು. ಮಾರ್ಗಮಧ್ಯದಲ್ಲಿ ಆ ಕುದುರೆಗೆ ಅರ್ಜುನನಕುದುರೆ ಎದುರಾಯಿತು.

ಜನಮೇಜಯರಾಯನೇ ಕೇಳು. ಮಯೂರಧ್ವಜನಕುದುರೆ ಅರ್ಜುನನ ಕುದುರೆಯನ್ನು ಕಂಡು ಕೆನೆದು, ಓಡಿಬಂದು ಮೂಸಿನೋಡಿತು. ಕಿವಿಗಳನ್ನು ಅಲ್ಲಾಡಿಸಿತು. ಮುಂಗಾಲೆತ್ತಿ ಒಂದಕ್ಕೊಂದು ಆಡಿದವು. ಹಿಂದಣ ಕಾಲುಗಳಿಂದ ಒದ್ದು ಕೆನೆದಾಡಿದವು. ಒಂದನ್ನೊಂದು ಕೆಣಕಿ ಹೆಗಲಲ್ಲಿ ತಿವಿದಾಡಿ ತಮ್ಮ ಭೂಷಣಗಳನ್ನು ಹರಿದಿಕ್ಕಿದುವು. ತಾಮ್ರಧ್ವಜನ ಮಂತ್ರಿ ನಕುಲಧ್ವಜನು ಆ ಕುದುರೆಯ ಹಣೆಯಲ್ಲಿದ್ದ ಕನಕಪಟ್ಟವನ್ನು ತರಿಸಿ, ಅದರಲ್ಲಿಯ ಬಿರುದಾವಳಿಗಳನ್ನು ಓದಿಹೇಳಿದನು.

**ಸಾಹಸಿ ತರುಣ ತಾಮ್ರಧ್ವಜ**

ಅದನ್ನು ಕೇಳಿದ ತಾಮ್ರಧ್ವಜನು ಕೋಪಗೊಂಡು ಪಾರ್ಥನ ಕುದುರೆಯನ್ನು ಕಟ್ಟಿಹಾಕಿದನು. 'ಓಹ್! ಹಿಂದಿನ ಏಳುಯಾಗಗಳು ಕೃಷ್ಣನಿಲ್ಲದೆ ಆದವುಗಳು. ಈಗಿನದು ಕೃಷ್ಣಸಹಿತವಾಗಿ ನಡೆಯುವುದು! ಶ್ರೀಕೃಷ್ಣನೊಡನೆ ಯುದ್ಧಮಾಡುವ ಅವಕಾಶ ದೊರೆಯುವುದು!' ಎಂದು ಹಿಗ್ಗಿದನು. ಮಂತ್ರಿ ನಕುಲಧ್ವಜನಿಗೆ,

'ನನ್ನ ತಂದೆಯ ಯಾಗಕ್ಕೆ ಕೃಷ್ಣನು ಜೊತೆಯಾಗುವನು. ಶೂರ ಪಾಂಡವರೊಡನೆ ನನಗೆ ಯುದ್ಧವಾಗುವುದು.'

'ಪೌರುಷಹೀನರು, ಅಲ್ಪ ಭಾಗ್ಯರು ನಿನ್ನೊಡನೆ ಯುದ್ಧಕ್ಕೆ ನಿಲ್ಲುವುದು ಎಂದಿಗೂ ಸಾಧ್ಯವಿಲ್ಲ! ನಿನ್ನನ್ನು ಪ್ರತಿಭಟಿಸಿ ನಿಲ್ಲುವ ಶೂರರು ಸುತ್ತಲ ಐವತ್ತಾರು ದೇಶಗಳಲ್ಲಿ ಯಾರೂ ಇಲ್ಲ! ನಿಮ್ಮ ತಂದೆಯ ಆಸ್ಥಾನದ ನರ್ತಕಿಯರ ಪುಷ್ಪಾಂಜಲಿಯ ಸಂಗ್ರಹಕ್ಕೆ ತಪ್ಪದೆ ಕೊಡುವ ಮುತ್ತುಗಳ ಕಪ್ಪಕಾಣಿಕೆಯನ್ನು ನೀಡಲು ಬಭ್ರುವಾಹನ ಬಂದಿರುವನೋ? ಏನೋ! ಆದರೆ ಸೇನೆಯ ಸದ್ದು ಬೇರೆಯೇ ಆಗಿದೆಯಲ್ಲ!'

'ಭೂಮಿಯ ಮೇಲೆ ವೀರರಿಲ್ಲ ಎನ್ನಬೇಡ. ನಿನ್ನೆ ರಾತ್ರಿ ನಾರದ ಮುನಿಗಳು ಬಂದು ನನ್ನೊಡನೆ–ಧರೆಯಲ್ಲಿ ಬಭ್ರುವಾಹನ, ವೃಷಕೇತು ಪರಾಕ್ರಮಿಗಳಿರು ವರೆಂದು ತಿಳಿಸಿದರು.

ಶ್ರೀಕೃಷ್ಣ, ಅರ್ಜುನರು ಮನುಜ ಮಾತ್ರರಾಗಿರದೆ ನರ ನಾರಾಯಣ ಅವತಾರಿಗಳು. ಅನಿರುದ್ಧ, ಸಾತ್ಯಕಿ, ಪ್ರದ್ಯುಮ್ನ, ಭೋಜ ಮೊದಲಾದ ಯಾದವರು ಶ್ರೀಕೃಷ್ಣನ ಸಮಾನ ಶೂರರು ಎಂದು ಹೇಳಿದನು.

'ಅವರೆಲ್ಲರೂ ಉನ್ನತ ಪರಾಕ್ರಮಿಗಳು. ಅವರೊಡನೆ ಯುದ್ಧ ಮಾಡ ಬೇಕಾಗುವುದು. ನಮ್ಮ ಸೇನೆಯು ಅರ್ಧಚಂದ್ರಾಕೃತಿಯಲ್ಲಿ ನಿಂತು, ಯುದ್ಧಕ್ಕೆ ಸನ್ನದ್ಧವಾಗಿರಲಿ.'

* * *

ಯುದ್ಧ ಸನ್ನದ್ಧನಾಗಿ ಬರುತ್ತಿರುವ ತಾಮ್ರಧ್ವಜನನ್ನು ಕಂಡು ಶ್ರೀಕೃಷ್ಣನು,

'ಎಲೈ ಅರ್ಜುನ, ಇವನು ತಾಮ್ರಧ್ವಜ. ಅಸೂಯೆಯಿಲ್ಲದವನು, ಧೀರ, ಸತ್ಯವಾದಿ, ಪಾಪರಹಿತ, ತೃಪ್ತಮನಸ್ಸಿನ ವಿಷ್ಣುಭಕ್ತ. ಇವನೊಡನೆ ಯುದ್ಧ ಸುಲಭವಲ್ಲ! ಇವನ ತಂದೆ ಮಯೂರಧ್ವಜ ನರ್ಮದಾನದಿಯತೀರದಲ್ಲಿ ಅಶ್ವಮೇಧಯಾಗ ದೀಕ್ಷಿತನಾಗಿದ್ದಾನೆ. ಇವನನ್ನು ಗೆಲ್ಲುವುದು ಅಸಾಧ್ಯ!' ಎಂದು ಹೇಳಿ, ಸೇನೆಯನ್ನು ಹದ್ದಿನ ಆಕಾರದಲ್ಲಿ ನಿಲ್ಲಿಸಿದನು. ಆದರ ಕುತ್ತಿಗೆಯ ಬಳಿ ಅನುಸಾಲ್ವನನ್ನು; ಕಣ್ಣುಗಳ ಹತ್ತಿರ ಹಂಸಧ್ವಜ, ನೀಲಧ್ವಜರನ್ನು; ಎರಡು ರೆಕ್ಕೆಗಳಲ್ಲಿ ಪ್ರದ್ಯುಮ್ನ, ಅನಿರುದ್ಧರನ್ನು; ಕಾಲುಗಳ ಹತ್ತಿರ ಸಾತ್ಯಕಿ, ಭೋಜರನ್ನು; ಹಿಂಭಾಗದ ಪುಚ್ಛದ ಬಳಿ ಮೇಘನಾದ, ಯೌವನಾಶ್ವರನ್ನು ನಿಲ್ಲಿಸಿದನು. ಹದ್ದಿನ ವ್ಯೂಹದ ಕೊಕ್ಕಿನ ಸ್ಥಾನದಲ್ಲಿ ಬಭ್ರುವಾಹನ, ವೃಷಕೇತುಗಳನ್ನು; ಅವಯವಗಳಬಳಿ ಉಳಿದ ವೀರರನ್ನು, ಹೃದಯಮಧ್ಯದಲ್ಲಿ ಅರ್ಜುನನನ್ನು ಸೇನೆಸಹಿತನಿಲ್ಲಿಸಿದನು. ಶ್ರೀಕೃಷ್ಣನು ತನ್ನ ರಥದಲ್ಲಿ ಕುಳಿತು ಶತ್ರುಗಳ ಎದೆಯೊಡೆಯುವಂತೆ ಪಾಂಚಜನ್ಯವನ್ನು ಊದಿದನು. ಅದರ ಧ್ವನಿಗೆ ರೋಮಾಂಚನಗೊಂಡ ತಾಮ್ರಧ್ವಜನು ಶ್ರೀಕೃಷ್ಣನಿಗೆಎದುರಾಗಿ,

'ಎಲೈ ದೇವ, ಅರ್ಜುನನ ಕುದುರೆಯನ್ನು ಕಟ್ಟಿಹಾಕಿರುವೆನು. ಇಚ್ಛೆಯಿದ್ದರೆ ಬಿಡಿಸಿ, ಅರ್ಜುನನನ್ನು ರಕ್ಷಿಸು. ನೀನು ಚಕ್ರವನ್ನು ಹಿಡಿದು ಯುದ್ಧಕ್ಕೆ ನಿಂತರೆ ನಾನು ಹೆದರುವವನಲ್ಲ. ಶಕ್ತಿಯಿದ್ದರೆ ನನ್ನ ಯಾಗದಕುದುರೆಯನ್ನು ಹಿಡಿದು ಕಟ್ಟು!' ಎಂದು ಹೇಳುತ್ತ ಕೃಷ್ಣನ ಮೇಲೆ ಮೂರು, ಸಾರಥಿಗೆ ಐದು, ಕುದುರೆಗಳಿಗೆ ನಾಲ್ಕು, ಅರ್ಜುನನಿಗೆ ಇಪ್ಪತ್ತು, ಕೃತವರ್ಮನಿಗೆ ಎಂಟು, ಸಾತ್ಯಕಿಗೆ ಒಂಭತ್ತು, ಹಂಸಧ್ವಜನಿಗೆ ಹತ್ತು, ವೃಷಕೇತು, ಬಭ್ರುವಾಹನ, ಅನುಸಾಲ್ವ, ಪ್ರದ್ಯುಮ್ನ, ಯೌವನಾಶ್ವ, ಅನಿರುದ್ಧ, ನೀಲಧ್ವಜರಿಗೆ ಎರಡೆರಡು, ಮೇಘವರ್ಣನಿಗೆ ಏಳು ಬಾಣಗಳನ್ನು ಹೊಡೆದು ಆರ್ಭಟಿಸಿದನು.

ತಾಮ್ರಧ್ವಜನ ಪರಾಕ್ರಮಕ್ಕೆ ಕೃಷ್ಣನು ಬೆರಗಾದನು. ಅರ್ಜುನನು ಮೆಚ್ಚಿದನು. ಅನಿರುದ್ಧನು,

'ಎಲೈ ತಾಮ್ರಧ್ವಜನೇ, ನೀನು ವಿಚಾರಿಸದೆ ಕೆಚ್ಚೆದೆಯಿಂದ ಯುದ್ಧಕ್ಕೆ ನಿಂತಿರುವೆ. ನಾನು ಶ್ರೀಕೃಷ್ಣನ ಮೊಮ್ಮಗ. ಹೆದರಿದರೆ ಕುದುರೆಯನ್ನು ಬಿಡು. ಇಲ್ಲದಿದ್ದರೆ ನನ್ನ ಬಾಣದ ಏಟನ್ನು ಅನುಭವಿಸು.'

'ಬಾಣಾಸುರನ ಮಗಳಾದ ಉಷೆಯುಗಂಡನಾಗಿ, ಪುಷ್ಪಬಾಣನಾದ ಮನ್ಮಥನಿಗೆ ಮಗನಾದ ನಿನ್ನ ಬಾಣಗಳು ನನ್ನನ್ನೇನು ಮಾಡಬಲ್ಲವು? ಅಂದು ತನ್ನ ಮಗಳಪ್ರಾಣೇಶನೆಂದು ಬಾಣಾಸುರ ನಿನ್ನನ್ನು ಉಳಿಸಿದ. ನನ್ನ ಬಾಣಗಳು ನಿನ್ನ ಪ್ರಾಣವನ್ನು ಸುಮ್ಮನೆ ಬಿಡಲಾರವು, ನೋಡು' ಎಂದು ತಾಮ್ರಧ್ವಜನು ಬಿಟ್ಟ ಬಾಣಗಳನ್ನು ಕತ್ತರಿಸಿದ ಅನಿರುದ್ಧ,

'ಎಲೈ ಮರುಳೇ, ಯುದ್ಧಕ್ಕೆ ಬೇಕಾದುದು ಸಾಹಸವೋ, ಬೆಡಗಿನ ಮಾತೋ? ಹಿಂದಿನ ಕಥೆ ಏತಕ್ಕೆ? ಈ ಪೆಟ್ಟನ್ನು ಸಹಿಸಿಕೊ' ಎಂದು ಹೇಳುತ್ತ, ತಾಮ್ರಧ್ವಜನ ರಥ, ಸಾರಥಿ, ಬಿಲ್ಲು ಬತ್ತಳಿಕೆಗಳನ್ನು ಖಂಡಿಸಿ; ಕಾವಲಿನ ಚತುರಂಗ ಸೇನೆಯನ್ನು ಸಂಹರಿಸಿ, ಅವನ ಸೈನ್ಯದ ಒಳಹೊಕ್ಕನು. ಕ್ಷಣಮಾತ್ರದಲ್ಲಿ ಶತ್ರುವಿನ ಮೂರು ಅಕ್ಷೋಹಿಣಿ ಸೈನ್ಯವನ್ನು ಸಂಹರಿಸಿದನು. ರಣರಂಗ ಹೆಣದ ರಾಶಿಯಿಂದ ಭಯಂಕರವಾಯಿತು.

ತಾಮ್ರಧ್ವಜ ಹೊಸ ರಥವೇರಿ ಬಂದು ಚತುರಂಗಸೇನೆಯೊಡನೆ ಅನಿರುದ್ಧನನ್ನು ಮುತ್ತಿದನು. ತಾಮ್ರಧ್ವಜನು ಹೂಡಿದ ಬಾಣಗಳು ಸಾವಿರ ಕೋಟಿಯಾಗಿ ಅರ್ಜುನನ ಸೈನ್ಯವನ್ನು ಮುತ್ತಿದವು. ಬಾಣಾಘಾತದಿಂದ ಗಾಯಗೊಂಡ ಅನಿರುದ್ಧನು ಮೂರ್ಛಿತನಾದನು. ಬೇಸಿಗೆಯ ಭಯಂಕರ ಬಿರುಗಾಳಿ ಧೂಳನ್ನು ಹಾರಿಸುವ ಹಾಗೆ ತಾಮ್ರಧ್ವಜನ ಬಾಣಗಳು ಸಕಲಸೇನೆಯನ್ನು ಓಡಿಸಿದುವು.

ತಾಮ್ರಧ್ವಜನು ಹಂಸಧ್ವಜನನ್ನು ಹೊಡೆದು, ಕೃತವರ್ಮ ಸಾತ್ಯಕಿಗಳನ್ನು ಕೊಂದು, ಬಭ್ರುವಾಹನ ಯೌವನಾಶ್ವರನ್ನು ಹಿಂಸಿಸಿ, ನೀಲಧ್ವಜ ಅನುಸಾಲ್ವರನ್ನು ಘಾತಿಸಿ, ಮನ್ಮಥನನ್ನು ಗಣಿಸದೆ, ಕೃಷ್ಣಾರ್ಜುನರ ಮೇಲೆ ಮುನ್ನುಗ್ಗಿ ಹೋದನು. ಅದನ್ನು ಕಂಡ ವೃಷಕೇತು ಅವನನ್ನು ತಡೆದು, ಅವನ ರಥವನ್ನು ಮುರಿದು ಕೆಡವಿದನು.

ಮತ್ತೊಂದು ರಥವನ್ನು ಹತ್ತಿಬರಲು, ವೃಷಕೇತು ಅದನ್ನೂ ಕಡಿದು ಕೆಡಹಿದನು. ಹೀಗೆ ತಾಮ್ರಧ್ವಜನ ನೂರು ರಥಗಳನ್ನು ಖಂಡಿಸಿ ವೃಷಕೇತು ಹತ್ತಿರಕ್ಕೆ ಬರುತ್ತಿರಲು ಅವನು ಅತಿಕೋಪಗೊಂಡು ನೆಲದಮೇಲೆನಿಂತು ಮೂರು ಬಾಣಗಳಿಂದ ವೃಷಕೇತುವನ್ನು ಹೊಡೆದು ಬೀಳಿಸಿದನು.

**ಅರ್ಜುನ ತಾಮ್ರಧ್ವಜರ ಕಾಳಗ**

ರಥವೇರಿ ಹೊರಟ ತಾಮ್ರಧ್ವಜನು ಅನುಪಮ ಸಾಹಸಿ ಬಭ್ರುವಾಹನನನ್ನು ಗಾಯಗೊಳಿಸಿ ಮುನ್ನುಗ್ಗುತ್ತಿದ್ದನು. ತನ್ನ ಸೇನೆ ಪಲಾಯನಗೈಯುತ್ತಿರುವುದನ್ನು ಕಂಡು ವ್ಯಗ್ರಗೊಂಡ ಅರ್ಜುನನು ಗಾಂಡೀವವನ್ನು ಹಿಡಿದು ಆಕಾಶವನ್ನು ಬಾಣಗಳಿಂದ ತುಂಬಿದನು.

'ಎಲೈ ಅರ್ಜುನನೇ, ಇಷ್ಟು ದಿನ ಶ್ರೀಕೃಷ್ಣನ ಸಹಾಯದಿಂದ ಎಲ್ಲರನ್ನೂ ಗೆದ್ದೆ. ಆದರೆ ನನ್ನೊಡನೆ ಛಲ ಬೇಡ. ಗೋತ್ರ ಹತ್ಯಾದೋಷದ ಪಾಪ ಪರಿಹರಿಸಿಕೊಳ್ಳಲು ಅಶ್ವಮೇಧಕ್ಕಾಗಿ ಎಷ್ಟು ಕುದುರೆಗಳು ಬೇಕು ಅಷ್ಟನ್ನೂ ನಾನು ಕೊಡುವೆ. ಅಯ್ಯೋ ಮರುಳೇ, ಧನದಾಸೆಯಿಂದ ಧರ್ಮವನ್ನು ಮಾಡದಂತಿರುವ ಮೂಢನಂತಿರುವೆ! ಶ್ರೀಕೃಷ್ಣನು ನಿನ್ನ ಬಳಿಯೇ ಇರಲು ಅಶ್ವಮೇಧವೇಕೆ?' ಎಂದು ಹೇಳುತ್ತ ತಾಮ್ರಧ್ವಜನು ಅರ್ಜುನನ ಮೇಲೆ ಬಾಣ ಪ್ರಯೋಗಿಸಿದನು.

'ಎಲೈ ತಾಮ್ರಧ್ವಜನೇ, ಧರ್ಮಾರ್ಜಿತ ದ್ರವ್ಯದಿಂದ ದಾನ ಧರ್ಮವನ್ನು ನೆಲೆಗೊಳಿಸ ಬೇಕಲ್ಲದೆ, ಪಾಪಾರ್ಜಿತ ದ್ರವ್ಯದಿಂದ ಅಲ್ಲ. ಶ್ರೀಹರಿಯನ್ನು ವಿಧಿ ವಿಧಾನಗಳಿಂದ ಮೆಚ್ಚಿಸಬಹುದಲ್ಲದೆ; ಹಲವು ಮುಖದಿಂದ ಜಗತ್ತನ್ನು ಆವರಿಸಿಕೊಂಡಿರುವ ಹರಿಯನ್ನು ನೀನು ತಿಳಿಯಲು ಹೇಗೆ ಸಾಧ್ಯ? ಛೀ! ಹೋಗು' ಎಂದು ಬಾಣ ಹೂಡಿ ತಾಮ್ರಧ್ವಜನ ಕುದುರೆ, ಸಾರಥಿಯನ್ನು ನೆಲಕ್ಕೆ ಬೀಳಿಸಿದನು. ತಾಮ್ರಧ್ವಜನು ಹೊಸ ರಥವೇರಿ ಬಂದನು. ಅದನ್ನು ಮುರಿದು ಹಾಕಿದ ಅರ್ಜುನನು ಅವನ ಒಂದುಸಾವಿರ ರಥಗಳನ್ನು ಪುಡಿಗೈದ

ಮೇಲೆ ದೇವದತ್ತವೆಂಬ ಶಂಖವನ್ನು ಊದಿದನು. ಇಕ್ಕೆಲದ ಚತುರಂಗ ಬಲವನ್ನು ಕೊಂದು ಹಾಕಿದನು.

ಅರ್ಜುನನ ಸಾಹಸ ಮೆಚ್ಚಿ ಹೊಗಳುತ್ತ ತಾಮ್ರಧ್ವಜನು ಕೋಪಗೊಂಡು ಆರ್ಭಟಿಸಿ ಹೊಡೆದ ಬಾಣಕ್ಕೆ – ಬರಸಿಡಿಲ ರಭಸಕ್ಕೆ ಉರುಳಿದ ಬೆಟ್ಟದ ಹಾಗೆ ಅರ್ಜುನನು ಬಿದ್ದನು. ಆದರೂ ಪುನರ್ಜನ್ಮ ಉಂಟಾಯಿತೋ ಎಂಬಂತೆ ಎಚ್ಚತ್ತು ತಾಮ್ರಧ್ವಜನ ಬಿಲ್ಲನ್ನು ತುಂಡು ಮಾಡಿದನು.

ಎಲೈ ಜನಮೇಜಯರಾಯನೇ ಕೇಳು. ತಾಮ್ರಧ್ವಜನು ರೋಷದಿಂದ ಇನ್ನೊಂದು ಬಿಲ್ಲು ಹಿಡಿದು, ಹಲ್ಲು ಕಡಿಯುತ್ತ ಬಾಣವನ್ನು ಸೆಳೆದು ಹೊಡೆಯಲು ಅರ್ಜುನನ ರಥವು ಒಂದು ಗಾವುದ ಹಿಂದಕ್ಕೆ ಹೋಯಿತು. ಮರು ಬಾಣ ಪ್ರಯೋಗದಲ್ಲಿ ಅರ್ಜುನನು ತಾಮ್ರಧ್ವಜನ ರಥವನ್ನು ಗಗನ ಮಂಡಲಕ್ಕೆ ಹಾರಿಸಿದನು. ಕೃಷ್ಣನು ಮೆಚ್ಚಿ ತಲೆದೂಗಿದನು. ಈರ್ವರೂ ಸಾಹಸದಿಂದ, ಆಲಸ್ಯಕ್ಕೆಡೆಗೊಡದೆ ಭಯಂಕರವಾಗಿ ಏಳು ದಿನಗಳವರೆಗೆ ಹಗಲು ರಾತ್ರಿ ಹೊಡೆದಾಡಿದರು. ಅರ್ಜುನನು ವೈರಿಗಳ ಇನ್ನೂರು ಅಕ್ಷೋಹಿಣಿ ಸೇನೆಯನ್ನು ಕೊಂದನು. ತಾಮ್ರಧ್ವಜ ಪಾಂಡವರ ಹತ್ತುಲಕ್ಷ ಸೈನ್ಯವನ್ನು ಕೊಂದನು.

ತಾಮ್ರಧ್ವಜನಲ್ಲಿ ನಾಟಿದ ಅಂಬಿನಿಂದ ಚಿಮ್ಮಿದ ರಕ್ತ, ಆಕಾಶಕ್ಕೆ ಹಾರಿ, ವಾಯು ವಶದಿಂದ ಮಳೆಯ ಹನಿಯಂತೆ ಕೃಷ್ಣನತಲೆಯಮೇಲೆ ಬಿದ್ದಿತು. ಅರ್ಜುನನು ತಾಮ್ರಧ್ವಜನ ಬಿಲ್ಲನ್ನು ಮತ್ತೆ ಕಡಿದನು. ವ್ಯಘ್ರನಾದ ತಾಮ್ರಧ್ವಜನು ಅರ್ಜುನನ ರಥ ಅಂತರಿಕ್ಷಕ್ಕೆ ಹಾರಿ ನೆಲಕ್ಕೆ ಅಪ್ಪಳಿಸುವಂತೆ ಬಾಣ ಪ್ರಯೋಗಿಸಿದನು. ರಥ ಭೂಮಿಗೆ ಅಪ್ಪಳಿಸುವಷ್ಟರಲ್ಲಿ ಶ್ರೀಕೃಷ್ಣ ಅದನ್ನು ತನ್ನ ಕೈಗಳಿಂದಹಿಡಿದು ಸ್ವಸ್ಥಾನದಲ್ಲಿಟ್ಟನು.

* * *

ಎಲೈ ಜನಮೇಜಯರಾಯನೇ ಕೇಳು. ಆತ್ಮಸ್ಥೈರ್ಯದ ಯುವಸಾಹಸಿ ತಾಮ್ರಧ್ವಜನ ಹೋರಾಟವನ್ನು ಕಂಡು ನಸುನಗುತ್ತ ಕೃಷ್ಣನು ಅರ್ಜುನನಿಗೆ,

'ಅಧರ್ಮಕ್ಕೆ ಹೆದರಿ ನಾವಿಬ್ಬರೂ ಪರಾಕ್ರಮವನ್ನು ತೋರಿಸದಿದ್ದರೆ ಗೆಲುವು ಸಾಧ್ಯವಿಲ್ಲ. ನೀನೊಂದುಕಡೆನಿಂತು ಹೊಡೆ, ನಾನೊಂದುಕಡೆನಿಂತು ಹೊಡೆಯುವೆ.' ಎಂದು ಹೇಳಿ ಅವರಿಬ್ಬರೂ ಸುರಿಸಿದ ಬಾಣಗಳಿಂದ ಸೂರ್ಯ ಮಂಡಲ ಕಾಣದಾಯಿತು. ವೀರಭಾವದಿಂದ ರೋಮಾಂಚನಗೊಂಡ ತಾಮ್ರಧ್ವಜನು ತನ್ನ ಸಾಹಸವನ್ನು ತೋರಿಸುತ್ತ ಹುಸಿನಗೆ ನಗುತ್ತ ಶ್ರೀಕೃಷ್ಣನಿಗೆ ಹೇಳಿದನು:

'ಎಲೈ ಸ್ವಾಮಿಯೇ, ನೀನು ಪ್ರತ್ಯೇಕವಾಗಿ ಬಿಲ್ಲುಹಿಡಿದು ಪಾರ್ಥನನ್ನು ನೋಯಿಸಬೇಡ! ಯುದ್ಧವನ್ನು ಬಿಡು. ಅರ್ಜುನನಿಗೆ ಸಾರಥಿಯಾಗು!'

ಕೃಷ್ಣನು ಅವನ ಮಾತಿಗೆ ಒಪ್ಪಿ ರಥದಿಂದಿಳಿದನು. ಪಾರ್ಥನಿಗೆ ಸಾರಥಿಯಾದನು. ತಾಮ್ರಧ್ವಜನು ಮತ್ತೆ ಹತ್ತು ಬಾಣಗಳಿಂದ ಕೃಷ್ಣನನ್ನು, ಅರುವತ್ತು ಬಾಣಗಳಿಂದ ಅರ್ಜುನನನ್ನು ಹೊಡೆದು ಆರ್ಭಟಿಸಿದನು. ಅರ್ಜುನನು ಅವನ ರಥವನ್ನು ಹುಡಿಗೈದನು.

ರೋಷಭೀಷಣನಾದ ತಾಮ್ರಧ್ವಜ ಅರ್ಜುನನ ಬಳಿಗೆ ಬಂದು ಹೊಡೆಯುವವಷ್ಟರಲ್ಲಿ ಕೃಷ್ಣನು ಕಾಲಿನಿಂದ ಅವನನ್ನು ಒದ್ದನು. ಕೆಳಕ್ಕೆ ಬಿದ್ದ ತಾಮ್ರಧ್ವಜನು ಚೇತರಿಸಿಕೊಂಡು ಒಂದು ಮದ್ದಾನೆಯನ್ನು ಏರಿದನು. ಶತ್ರು ಸೈನ್ಯವನ್ನೆಲ್ಲಾ ಶರಪಂಜರದಲ್ಲಿ ಕಟ್ಟಿಹಾಕಿದನು.

ಶ್ರೀಕೃಷ್ಣನು ಆಶ್ಚರ್ಯಚಕಿತನಾಗಿ ತನ್ನ ಚಕ್ರಾಯುಧವನ್ನು ಧರಿಸಿ ಮೂರು ಲೋಕಗಳು ತಲ್ಲಣಿಸುವ ಹಾಗೆ ಯುದ್ಧಕ್ಕೆ ನಿಂತನು. ಅದನ್ನು ಕಂಡ ತಾಮ್ರಧ್ವಜ ಬಾಣದ ಮಳೆಯನ್ನು ಸುರಿಸುತ್ತ ಸೇನಾ ಜನರನ್ನು ಕೊಂದು ಯಮನಪಟ್ಟಣವನ್ನು ಸಿಂಗರಿಸಿದನು. ಕೃಷ್ಣನನ್ನು ಹೊಡೆದು ಹಿಂದಕ್ಕೆ ಓಡಿಸಿದನು.

ಕೋಪಗೊಂಡಕೃಷ್ಣನು ಮರಳಿಬರಲು ತಾಮ್ರಧ್ವಜನು ತಡೆದು ನಿಲ್ಲಿಸಿ ಯುದ್ಧ ಮಾಡಿದನು. ಕೃಷ್ಣನ ಚಕ್ರಾಯುಧದಿಂದ ಕ್ಷಣ ಮಾತ್ರದಲ್ಲಿ ವೈರಿಯ ನೂರು ಅಕ್ಷೋಹಿಣಿ ಸೈನ್ಯ ಸತ್ತುಬಿದ್ದಿತು. ಅದನ್ನು ಕಂಡ ತಾಮ್ರಧ್ವಜ ಶ್ರೀಕೃಷ್ಣನನ್ನು ಜರಿದನು:

'ಎಲೈ ಸ್ವಾಮಿಯೇ, ವ್ಯರ್ಥವಾಗಿ ಸೇನೆಯನ್ನುಕೊಂದರೆ ಫಲವೇನು? ಸುಧನ್ವನ ಕಾಳಗದಲ್ಲಿ ಅರ್ಜುನನಿಗೆ ನಿನ್ನ ಪುಣ್ಯಫಲಗಳನ್ನು ನೀಡಿದೆಯಲ್ಲಾ! ಈಗ ಧನಂಜಯನಿಗಾಗಿ ನಿನ್ನ ದೇಹವನ್ನು ಕೊಡಬೇಡ! ನಿನ್ನನ್ನೂ ಕಿರೀಟಿಯನ್ನೂ ಹಿಡಿದು ಕಟ್ಟಿ ನನ್ನತಂದೆಯ ಯಜ್ಞವನ್ನು ಪೂರೈಸುತ್ತೇನೆ!'

**ಕೃಷ್ಣಾರ್ಜುನರನ್ನು ಬಿಗಿದು ಕಟ್ಟಿದ ತಾಮ್ರಧ್ವಜ**

ಜನಮೇಜಯರಾಯನೇ ಕೇಳು. ತಾಮ್ರಧ್ವಜನು ಚಕ್ರಪಾಣಿಯಾಗಿದ್ದ ಶ್ರೀಕೃಷ್ಣನ ಮೇಲೆ ಬಿದ್ದು ಹಿಡಿದುಕೊಂಡನು. ಒಂದು ಕೈಯಿಂದ ಅವನ ಎರಡು ಕೈಗಳನ್ನು, ಇನ್ನೊಂದರಿಂದ ಕಾಲುಗಳನ್ನು ಬಿಗಿಹಿಡಿದು ಪಾದಗಳನ್ನು ಹಣೆಯ ಮೇಲಿಟ್ಟುಕೊಂಡನು. ಮೂರುಲೋಕಗಳು ಆಶ್ಚರ್ಯಪಡುವಂತೆ ಅರ್ಜುನನ ಬಳಿಗೆ ನುಗ್ಗಿದನು. ತಾಮ್ರಧ್ವಜನ ಹಿಡಿತದಲ್ಲಿದ್ದ ಶ್ರೀಕೃಷ್ಣನು ಮಹಾಸ್ತ್ರವನ್ನು ತೊಡು ಎಂದು ಹೇಳಿ, ಅರ್ಜುನ ಗಾಂಡೀವದಲ್ಲಿ ಬಾಣ ಹೂಡುವಷ್ಟರಲ್ಲಿ – ತಾಮ್ರಧ್ವಜ ಓಡಿಹೋಗಿ ತೊಡರುಗಾಲಿನಿಂದ ಅರ್ಜುನನನ್ನು ಕೆಡವಿದನು. ತೋಳನ್ನು ಹಿಡಿದು ಮೇಲಕ್ಕೆತ್ತಿ ಅವರಿಬ್ಬರನ್ನೂ ಮಿಡುಕದಂತೆ ಬಿಗಿದುಕಟ್ಟಿದನು.

ಕೃಷ್ಣನು ಕಾಲಿನಿಂದಒದೆಯಲು ಭೂಮಿಗೆಬಿದ್ದನು. ಮೂವರೂ ಒಬ್ಬರನ್ನೊಬ್ಬರು ಒತ್ತಿಹಿಡಿದಿರಲು, ಕೃಷ್ಣಾರ್ಜುನರು ಮೂರ್ಛೆಗೊಂಡರು. ತನ್ನೊಡನೆ ಕಾದುವ ವೀರರಾರೂಇಲ್ಲದಿರಲು ತಾಮಧ್ವಜನು ಎರಡುಕುದುರೆಗಳನ್ನು ತೆಗೆದುಕೊಂಡು ರತ್ನಪುರಕ್ಕೆ ಹಿಂದಿರುಗಿದನು.

**ಸ್ವಕರಸ್ಥನಾದ ಹರಿಯಂ ಬಿಟ್ಟು ಕಟ್ಟಿದಂ ಹರಿಯ ತಾನಾಹವದೊಳು!**

ರತ್ನಪುರದ ಹೊರಗಿನ ಮನೋಹರ ಯಾಗಮಂಟಪದಲ್ಲಿ ದೀಕ್ಷಿತನಾಗಿ ಬ್ರಾಹ್ಮಣೋತ್ತಮ ರೊಡನೆ ಕುಳಿತಿದ್ದ ತನ್ನ ತಂದೆ ಮಯೂರಧ್ವಜನ ಬಳಿಗೆ ತಾಮ್ರಧ್ವಜನು ನಡೆದನು. ಸಾಷ್ಟಾಂಗನಮಸ್ಕಾರ ಮಾಡಿದನು. ಎರಡುಯಾಗಾಶ್ವಗಳನ್ನು ನಿಲ್ಲಿಸಿದನು. ಮಗನನ್ನು ನೋಡಿ ಮಯೂರಧ್ವಜನು,

'ಮಗನೇ, ವರ್ಷತುಂಬುವಮೊದಲೆ ಈ ಕುದುರೆ ಏಕೆಹಿಂದಿರುಗಿ ಬಂದಿತು? ಪರಾಕ್ರಮದಿಂದ ತಂದಿರುವ ಈ ಹೊಸಕುದುರೆ ಯಾರದು? ಯಾವ ರಾಜರಜೊತೆ ಯುದ್ಧ ನಡೆಯಿತು? ನನ್ನಬಳಿಗೆಬರಲು ಕಾರಣವೇನು?'

'ಅಪ್ಪಾ ಕೇಳು. ಇದು ಧರ್ಮರಾಯನ ಅಶ್ವಮೇಧಯಾಗದ ಕುದುರೆ. ನಾನು ಅದನ್ನು ಕಟ್ಟಿದೆ. ಅದರ ಬೆಂಗಾವಲಿಗೆ ಬಂದಿದ್ದ ಕೃಷ್ಣಾರ್ಜುನರೊಡನೆ ಯುದ್ಧವಾಯಿತು.'

ಸಂಶಯಗ್ರಸ್ತನಾದ ಮಯೂರಧ್ವಜನು ಮಂತ್ರಿ ನಕುಲಕೇತುವಿನ ಕಡೆ ನೋಡಲು.

ಅವನು 'ಸ್ವಾಮಿಯೇ, ನಿಮ್ಮ ಮಗನು ಹೇಳಿದ್ದು ಸುಳ್ಳಲ್ಲ. ಯಾಗದ ಕುದುರೆಯ ರಕ್ಷಣೆಗೆ ಬಂದಿದ್ದ ಬಭ್ರುವಾಹನಾದಿಗಳನ್ನು ಕೆಡವಿ, ಕೃಷ್ಣಾರ್ಜುನರನ್ನು ಪ್ರಾಣಸಹಿತ ಹಿಡಿದು ಕಟ್ಟಿ, ಅವರ ಯಾಗದ ಕುದುರೆಯನ್ನು ನಿನ್ನ ಮಗ ನಿರಾಯಾಸವಾಗಿ ತೆಗೆದುಕೊಂಡು ಬಂದಿರುವನು.'

'ಅಯ್ಯೋ, ಕೆಲಸವನ್ನು ಕೆಡಸಿದನಲ್ಲಾ! ಯಜ್ಞ ನಮಗಿನ್ನೇತಕೆ? ನಮಗೆ ಮಗನೇ ಶತ್ರು! ಕೈಗೆ ಸಿಕ್ಕಿದ ಹರಿಯನ್ನು ಬಿಟ್ಟು ಕುದುರೆಯನ್ನು ತಂದನಲ್ಲಾ! ಎಲ್ಲವೋ, ನಿನ್ನನ್ನೇನು ಮಾಡಲಿ? ತುಳಸಿಮಾಲೆ ಕಟ್ಟುವುದನ್ನು ಬಿಟ್ಟು ಕಾಡ ಹೂಗಳಮಾಲೆ ಕಟ್ಟುವ ಹಾಗೆ; ಕೃಷ್ಣಾರ್ಜುನರನ್ನು ಬಿಟ್ಟು ಈ ಕುದುರೆಗಳನ್ನು ತಂದುಕೊಟ್ಟೆ, ಇನ್ನು ಯಜ್ಞ ಸಾಕು. ಕುದುರೆಯನ್ನು ಎತ್ತಲಾದರೂ ಹೊಡೆದೋಡಿಸು. ಕೃಷ್ಣಾರ್ಜುನರೆಲ್ಲಿರುವರೆಂದು ತೋರಿಸು' ಎಂದು ಮಯೂರಧ್ವಜನು ಮರುಗುತ್ತ, ಮಗನನ್ನು ನಿಂದಿಸುತ್ತ, ತನ್ನ ಮಡದಿಸಹಿತ ದೇವಪುರದೊಡೆಯ ಶ್ರೀಲಕ್ಷ್ಮೀಶನನ್ನು ಕಾಣುವ ತವಕದಲ್ಲಿದ್ದನು.

**ಅರ್ಧ ದೇಹವನ್ನು ದಾನವಾಗಿ ನೀಡಿದ ಮಯೂರಧ್ವಜ**

ಯುದ್ಧಭೂಮಿಯಲ್ಲಿ ಕೃಷ್ಣಾರ್ಜುನರಿಗೆ ಎಚ್ಚರವಾಯಿತು. ವೀರಭಟರೆಲ್ಲರೂ ಮೂರ್ಛೆ ತಿಳಿದೆದ್ದರು. ಕೃಷ್ಣನು ಸೇನೆಯನ್ನು ಸಂತೈಸಿದನು. ಚೋರ ಬುದ್ಧಿಯಲ್ಲಿ ಒಂದು ಉಪಾಯವನ್ನು ಹೂಡಿ ಅರ್ಜುನನಿಗೆ ಹೇಳಿದನು:

'ಎಲೈ ಅರ್ಜುನನೇ, ತಾಮ್ರಧ್ವಜನು ನೀಡಿದ ಹೊಡೆತ ನೋಡಿದೆಯಾ? ನಮ್ಮನ್ನು ಕೆಡವಿ ಕುದುರೆಯನ್ನು ತೆಗೆದುಕೊಂಡು ತಂದೆಯ ಬಳಿಗೆ ಹೋಗಿದ್ದಾನೆ. ಮಾತಾಡಿ ಫಲವೇನು? ಸೈನ್ಯವು ಹಿಂದೆ ನಿಧಾನವಾಗಿ ಬರುತ್ತಿರಲಿ. ನಾವು ಮುಂದಾಗಿ ಹೋಗೋಣ. ಒಂದು ಉಪಾಯವನ್ನು ಹೇಳುವೆನು!'

ಅದರಂತೆ ಅರ್ಜುನ ಸೇನೆಯನ್ನು ಹಿಂದೆನಿಲ್ಲಿಸಿ ಕೃಷ್ಣನೊಡನೆ ರತ್ನಪುರಿಗೆ ಹೊರಟನು. ಅವರಿಬ್ಬರೂ ಗುರುತು ಸಿಕ್ಕದಹಾಗೆ ಬ್ರಾಹ್ಮಣವೇಷ ಧರಿಸಿದರು. ಕೃಷ್ಣನು ಮುದುಕನಾದರೆ, ಅರ್ಜುನನು ಅವನ ಕೈಹಿಡಿದು ನಡೆಸುವ ಬಾಲಕನಾದನು. ಈರ್ವರೂ ರತ್ನಪುರಿಗೆ ಬರುವಷ್ಟರಲ್ಲಿ ಸೂರ್ಯ ಮುಳುಗಿ ಕತ್ತಲಾಯಿತು. ತಾವರೆಗಳು ಮುಚ್ಚಿ ಮಧುಪಾನದಲ್ಲಿದ್ದ ತುಂಬಿಗಳೊಡನೆ ಮೊಗ್ಗಾಗಿ ಹೋಗಿದ್ದವು. ಕಗ್ಗತ್ತಲೆಯು ಮುಳ್ಳು ಮೊನೆಯಾಡುವುದಕ್ಕೂ ಸ್ಥಳವಿಲ್ಲದಂತೆ ಮುತ್ತಿಕೊಂಡಿತ್ತು. ಮನ್ಮಥನ ಸೆಳೆತಕ್ಕೊಳಗಾದ ಸ್ತ್ರೀಯರು ತಂತಮ್ಮ ಪ್ರಿಯರನ್ನು ಅರಸುತ್ತಿದ್ದರು.

ಅವರಿಬ್ಬರೂ ಆ ನಗರದ ಕೇರಿಕೇರಿಗಳಲ್ಲಿ ಬರುತ್ತ ಜಾರಜಾರೆಯರ ವಿವಿಧ ಚೇಷ್ಟೆಗಳನ್ನು ನೋಡಿದರು. ಚಂದ್ರೋದಯವಾಗಲು ಚಂದ್ರಕಾಂತ ಶಿಲೆಯಿಂದ ನಿರ್ಮಿಸಿದ ಮಹಡಿಗಳ ಚಂದ್ರಶಾಲೆಯಲ್ಲಿ ಚಂದ್ರವದನೆಯರ ಅಂತರಂಗದ ಕೆಚ್ಚು ದ್ರವಿಸುವಂತೆ ಪುರುಷರು ರಮಿಸುತ್ತಿದ್ದರು. ಅಗ್ನಿಯನ್ನುಅಪ್ಪಿ ಬದುಕಿದ ಗಾಳಿ, ಹಾವುಕಚ್ಚಿದರೂ ಸಾಯದ ಚಂದ್ರ, ಶಿವನುಸುಟ್ಟರೂ ಬಾಳುತ್ತಿರುವ ಮನ್ಮಥರು–ತನ್ನನ್ನು ಹಿಂಸಿಸಲು ಬದುಕಿರುವರೆಂದು ಪ್ರಿಯನನ್ನು ಅಗಲಿದ ಓರ್ವ ಕಾಮಿನಿ ಕೊರಗುತ್ತಿದ್ದಳು. ಬೆಳ್ದಿಂಗಳು ಮಾಯವಾಗಿ ಪೂರ್ವದಿಗ್ವನಿತೆಯು ಸೂರ್ಯನೊಡನೆ ಸೇರಲು ಮಂಗಳಸ್ನಾನ ಮಾಡಿದಳೊ ಎಂಬಂತೆ ಮೂಡಲಕೆಂಪು ಪ್ರಕಾಶಿಸಿತು.

ಎಲೈ ಜನಮೇಜಯರಾಯನೇ ಕೇಳು. ಸೂರ್ಯನು ಉದಯಿಸಲು ರಾಜ ಮಯೂರಧ್ವಜನು ಸಂಧ್ಯಾವಿಧಿ ಪೂರೈಸಿ ಶ್ರೀಕೃಷ್ಣನ ದರ್ಶನ ಮಾಡಬೇಕೆಂದು ನಿಶ್ಚಯಿಸಿದನು. ಮಗ ತಾಮ್ರಧ್ವಜನನ್ನು, ಮಂತ್ರಿಗಳನ್ನು, ಬ್ರಾಹ್ಮಣರನ್ನು, ರಾಜರನ್ನು ಕರೆಸಿ ಯಾಗಶಾಲೆಯಲ್ಲಿ ಓಲಗವನ್ನಿತ್ತನು. ಅಲ್ಲಿಗೆ ವೃದ್ಧ ಬ್ರಾಹ್ಮಣ ವೇಷಧಾರಿ ಕೃಷ್ಣನು ತನ್ನ ಶಿಷ್ಯ ಪಾರ್ಥನೊಡನೆ ಬಂದು,

'ಎಲೈ ರಾಜನೇ, ನಿನಗೆ ಮಂಗಳವಾಗಲಿ, ನೀನು ಕೇಳಿದುದನ್ನು ನೀಡುವ ಮಹಾದಾನಿ ಎಂದು ತಿಳಿದು, ನಾನು ನನ್ನ ಶಿಷ್ಯನೊಂದಿಗೆ ಈ ಯಾಗ ಮಂಟಪಕ್ಕೆ ಬಂದಿರುವೆನು' ಎಂದು ಹೇಳಲು, ಆತನನ್ನು ಕಂಡು ಬೆದರಿದ ಮಯೂರಧ್ವಜನು ಎದ್ದು, ಆತನ ಪಾದಕ್ಕೆ ನಮಸ್ಕರಿಸಿದನು. ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ, ಉಪಚರಿಸಿ, ಕುಳ್ಳಿರಿಸಿ ನುಡಿದನು:

'ನಿಮ್ಮ ಆಶೀರ್ವಾದದಿಂದ ನಾನು ಧನ್ಯನಾದೆ. ಆದರೆ ಜನರು ನಮಸ್ಕಾರ ಮಾಡುವ ಮೊದಲೇ; ಶುಭವಾಗಲಿ ಎಂದು ಬ್ರಾಹ್ಮಣರು ಹರಸಿದರೆ, ಅದು ಉಪಾಯದಿಂದ ಕೊಂದಹಾಗೆ! ಬೇರೊಂದು ಶಾಪದ ಅಗತ್ಯವಿಲ್ಲ!'

ಆಶೀರ್ವಾದದ ಸೂಕ್ಷ್ಮ ಅರಿತು ಹೇಳಿದ ರಾಜನಮಾತಿಗೆ ಕಪಟಬ್ರಾಹ್ಮಣನು,

'ಬ್ರಾಹ್ಮಣರು ಇತರರನ್ನು ನಮಸ್ಕಾರಕ್ಕೆ ಮುಂಚೆ ಹರಸಬಾರದು. ಆದರೆ ತನ್ನ ಕಷ್ಟದ ಸುಖಗಳನ್ನು ಹೇಳಿಕೊಳ್ಳಲು ಬಂದವನು ಮೊದಲೇ ಆಶೀರ್ವದಿಸದಿರುವನೇ? ರಾಜನು ವಂದನಾರ್ಹನಲ್ಲವೇ? ನಾನು ಮಾಡಿದ ಆಶೀರ್ವಾದದಲ್ಲಿ ತಪ್ಪೇನು? ಅತಿ ದೀನನಾಗಿ, ನೀನಿರುವ ಯಜ್ಞಮಂಟಪಕ್ಕೆ ಬಂದಿರುವೆನು.'

'ಎಲೈ ದ್ವಿಜತಿಲಕನೇ, ನೀನು ಶಿಷ್ಯನೊಡನೆ ಯಜ್ಞಶಾಲೆಗೆ ಬಂದ ಕಾರಣವೇನು? ಹೇಳು. ನನ್ನಿಂದ ಏನಾಗಬೇಕು ತಿಳಿಸು. ನಾನು ನಡೆಸಿಕೊಡುತ್ತೇನೆ. ಎಲ್ಲವನ್ನೂ ವಿವರಿಸು.' ಮಯೂರಧ್ವಜನ ಆ ಮಾತಿಗಾಗಿ ಕಾತರಿಸುತ್ತಿದ್ದ ಕಪಟ ಬ್ರಾಹ್ಮಣನು ರಾಜನಿಗೆ ವಿವರವಾಗಿ ಹೇಳಿದನು.

'ನಾನು ಕೃಷ್ಣಶರ್ಮ. ಊರು ಧರ್ಮಪುರ. ನನಗೆ ಒಬ್ಬ ಮಗನಿದ್ದು ಅವನ ಮದುವೆಗೆ ರತ್ನಪುರದಲ್ಲಿರುವ ಸತ್ಯಶೀಲನ ಮನೆಗೆ ಕನ್ನೆಗಾಗಿ ಮಗನೊಡನೆ ಬರುತ್ತಿದ್ದೆ. ದೊಡ್ಡ ಹೊದರಿರುವ ಕಾಡಿನ ಮಧ್ಯೆ ಬರುವಾಗ ನನ್ನ ಮಗನನ್ನು ಒಂದು ಉಗ್ರಸಿಂಹ ಹಿಡಿಯಿತು. ನಾನು ಹೆದರದೆ ಶ್ರೀನರಸಿಂಹ ಧ್ಯಾನ ಮಾಡುತ್ತಿರಲು ಆ ಸಿಂಹ ನಖದಂಷ್ಟ್ರಗಳಿಂದ ಮಗನಿಗೆ ಘಾಸಿ ಮಾಡದೆ ಮನುಷ್ಯರಂತೆ ಮಾತನಾಡಿತು. ಗೋಳಾಡದೆ ಬಿಡಿಸಿಕೊಳ್ಳುವ ಸಮರ್ಥರು ಯಾರಿದ್ದಾರೆ ಯೋಚಿಸು ಎಂದಿತು. ನಾನು ವೃದ್ಧನಾಗಿದ್ದು ಕೆಲವೇ ದಿನ ಉಳಿಯುವ ಕಾರಣ ನನ್ನನ್ನು ತಿಂದು ಮಗನನ್ನು ಬಿಡು ಎಂದೆನು. ನೀನು ಮುದಿಗೂಡು. ತಪಶ್ಚರ್ಯೆಯಿಂದ ಬಾಡಿಹೋಗಿರುವ ನಿನ್ನ ಶರೀರವನ್ನು ಒಲ್ಲೆನು. ಸಾಧ್ಯವಾದರೆ ಯಜ್ಞದೀಕ್ಷೆಯಿಂದ ಸಂಪನ್ನವಾಗಿರುವ ಮಯೂರಧ್ವಜನ ಮೈಯಲ್ಲಿ ಅರ್ಧಭಾಗವನ್ನು ತಂದುಕೊಡು ಎಂದು ಹೇಳಿತು. ನಿನ್ನೆಡೆಗೆ ಬಂದೆನು. ಆದರೆ ಉಳಿಸು, ಆಗದಿದ್ದರೆ ಬಿಡು.'

ಶಾಂತಚಿತ್ತದಿಂದ ಎಲ್ಲವನ್ನೂ ಆಲಿಸಿದ ದಯಾಸಮುದ್ರನಾದ ಮಯೂರಧ್ವಜನು ಈ ಪ್ರಪಂಚದಲ್ಲಿ ಉಳಿಯುವುದು ಕೀರ್ತಿ, ನರರ ಬಾಳುವೆ ಅಲ್ಲ ಎಂದು ನಿಶ್ಚೈಸಿಕೊಂಡನು. ಬ್ರಾಹ್ಮಣನಿಗೆ ಅಭಯ ನೀಡಿದನು:

'ನಿನಗೆ ಈ ದೇಹವನ್ನು ಸೀಳುಮಾಡಿ ಕೊಡುವೆನು.'

ತನ್ನ ರಾಜ್ಯವನ್ನು ಮಗ ತಾಮ್ರಧ್ವಜನಿಗೆ ಒಪ್ಪಿಸಿಕೊಟ್ಟನು. ಯಾಗ ಶಾಲೆಯಲ್ಲಿ ನೆರೆದಿರುವವರೆಲ್ಲರಿಗೂ ಅಲ್ಲಿಯೇಇರಲು ಹೇಳಿ, ಸಂತೋಷಚಿತ್ತನಾಗಿ ಹೊರ ಹೊರಟನು.

* * *

ಜನಮೇಜಯರಾಯನೇ ಕೇಳು. ರಾಜನು ಗಂಗಾಜಲವನ್ನು ತರಿಸಿ ಸ್ನಾನ ಮಾಡಿ, ಪರಮ ಸಾಲಗ್ರಾಮತೀರ್ಥ ಸೇವಿಸಿ, ತುಲಸೀ ಮಾಲೆಯನ್ನು ಧರಿಸಿ ಯಾಗ ಮಂಟಪಕ್ಕೆ ಬಂದನು. ಬ್ರಾಹ್ಮಣ ಸಮೂಹಕ್ಕೆ ಕೈಮುಗಿದು, ಸ್ಥಿತಪ್ರಜ್ಞಭಾವದಲ್ಲಿ ಮಿಂದು ವಿಜ್ಞಾಪಿಸಿಕೊಂಡನು:

'ಈ ಮಹಾ ಸಭೆಯಲ್ಲಿ ಸಮಸ್ತಬ್ರಾಹ್ಮಣರು ಕೇಳಿ, ಪೂರ್ವದಲ್ಲಿ ಬಲಿ ಚಕ್ರವರ್ತಿಯ ಯಾಗಮಂಟಪಕ್ಕೆ ವಾಮನನು ಬಂದಂತೆ, ನನ್ನ ಯಾಗಶಾಲೆಗೆ ಈ ದ್ವಿಜನು ಶ್ರೀಮಾಧವ ಸ್ವರೂಪದಲ್ಲಿ ತಾನಾಗಿ ಬಂದಿದ್ದಾನೆ. ಆದ ಕಾರಣದಿಂದ ಈಗ ನನ್ನ ದೇಹದ ಅರ್ಧಭಾಗವನ್ನು ಪ್ರೀತಿಯಿಂದ ಕೊಡುತ್ತೇನೆ. ಈತನ ಮಗನು ಬದುಕಲಿ. ಈ ದಾನ ಇಳೆಗೆ ಹೊಸದಾಗಲಿ.'

ರಾಜಶ್ರೇಷ್ಠನ ಆ ಮಾತುಗಳನ್ನು ಕೇಳಿ ಸಮಸ್ತ ಪ್ರಧಾನಿಗಳು, ರಾಜ ಪುರೋಹಿತರು, ಬ್ರಾಹ್ಮಣರು,

'ದೊರೆಯೆ, ಇದೆಂತಹ ದಾನ ! ಈ ಬ್ರಾಹ್ಮಣನು ಯಮಸ್ವರೂಪನಾಗಿದ್ದಾನೆ. ದಾನವೆಂದು ಕೇಳಿದರೆ ರಾಜ್ಯ, ಐಶ್ವರ್ಯ, ಧನಕನಕ, ರತ್ನ, ಗೋವುಗಳನ್ನು ಕೊಡುವರು. ದೇಹವನ್ನು ಕೊಯ್ದುಕೊಡುವ ಕಾರಣ ತಿಳಿಯದು !' ಎಂದು ನಡುಗುತ್ತಿರಲು ರಾಜನು,

'ಈ ಬ್ರಾಹ್ಮಣನು ತನ್ನಮಗನನ್ನು ಉಳಿಸಿಕೊಳ್ಳಲು ನನ್ನದೇಹದಲ್ಲಿ ಅರ್ಧ ಭಾಗವನ್ನು ಕೇಳಿದನು. ಒಪ್ಪಿರುವೆ. ಇದಕ್ಕೆ ತಪ್ಪಿನಡೆದರೆ ಲೋಕದಜನರು ಹಾಸ್ಯಮಾಡಿ ನಿಂದಿಸದಿರುವರೇ? ಸುಳ್ಳುಹೇಳಿದರೆ ಯಮದೂತರು ನರಕದಲ್ಲಿ ಬೇಯಿಸದಿರುವರೇ? ಶರೀರದಅರ್ಧಭಾಗವನ್ನು ಸೀಳಿಕೊಡಲು ಯೋಚನೆ ಮಾಡುವುದೇಕೆ?' ಎಂದು ಎಲ್ಲರನ್ನೂ ಸಮಾಧಾನಪಡಿಸಿದನು. ಬ್ರಾಹ್ಮಣರಿಗೆ ಅನೇಕ ದಾನಗಳನ್ನು ನೀಡಿ ತೃಪ್ತಿಪಡಿಸಿದನು. ಎರಡುಕಂಬಗಳನ್ನು ನೆಡಿಸಿ ಅದರ ಮಧ್ಯದಲ್ಲಿ ತನ್ನ ಮನೋಹರಶರೀರವನ್ನು ತೂರಿಸಿ ಚಿನ್ನದ ಹಗ್ಗಗಳಿಂದ ತೋಳು ತೊಡೆಗಳನ್ನು ಕಟ್ಟಿಸಿಕೊಂಡು ನಿಂತನು. ಆ ಬ್ರಾಹ್ಮಣನ ಪಾದಕಮಲಗಳನ್ನು ತೊಳೆದು ಹೀಗೆಂದನು:

'ಎಲೈ ಬ್ರಾಹ್ಮಣ ಶ್ರೇಷ್ಠನೇ, ನಾನು ಕೊಡುವ ಅರ್ಧದೇಹದ ದಾನದಿಂದ ಯಜ್ಞದ ಒಡೆಯನಾದ ಶ್ರೀಮನ್ನಾರಾಯಣನು ತೃಪ್ತನಾಗಲಿ, ನನ್ನ ವಂಶದಲ್ಲಿ ಹುಟ್ಟಿದವರು ಬ್ರಾಹ್ಮಣರಿಗೆ ತನು ಧನವನ್ನು ನೀಡುವಾಗ ಸಮಚಿತ್ತದಿಂದಿರಲಿ.'

ಕ್ರೂರಕಟುಕರನ್ನು ಕರೆಸಿ, ಹರಿತವಾದ ಗರಗಸಗಳನ್ನು ತರಿಸಿದನು. ತನ್ನ ದೇಹವನ್ನು ಸಮಹೋಳಾಗಿ ಸೀಳಿ ಎಂದು ಆಜ್ಞಾಪಿಸಿದನು. ಆಗ ಆತನ ಹೆಂಡತಿ ಕುಮುದ್ವತಿಯು ಹೇಳಿದಳು:

'ಎಲೈ ದೊರೆಯೆ, ಕಾಡಿನಸಿಂಹವು ಹೇಳಿದ ನುಡಿ ನೀನೂ ತಿಳಿಯಲಿಲ್ಲ, ಬ್ರಾಹ್ಮಣೋತ್ತಮನೂ ತಿಳಿಯನು. ಹೆಂಡತಿಯು ಪುರುಷನ ಅರ್ಧಾಂಗ ಎಂದು ಸಕಲ ಶಾಸ್ತ್ರಗಳ

ಸಿದ್ಧಾಂತವಾಗಿದೆ. ಸಿಂಹವು ನಿನ್ನ ವಾಮಾಂಗಿಯಾದ ನನ್ನನ್ನು ಕೇಳಿದರೆ, ನೀನು ನಿನ್ನ ಶರೀರವನ್ನು ಸೀಳಿ ಕೊಡುವ ಭ್ರಾಂತಿಗೆ ಒಳಗಾದೆ ! ನನ್ನನ್ನು ಪ್ರಾಣ ಸಹಿತ ಕೊಟ್ಟುಬಿಡು. ನಾನು ಮುತ್ತೈದೆಯಾಗಿ ಸದ್ಗತಿಯನ್ನು ಪಡೆಯುವೆನು.'

ಎಲ್ಲ ಸಭಿಕರು ಆ ಮಾತನ್ನು ಒಪ್ಪಿದರು. ಮಯೂರಧ್ವಜನು ಮಾತಾಡದಿದ್ದನು. ಅದನ್ನು ಕಂಡ ಬ್ರಾಹ್ಮಣನು, 'ಎಲೈ ದೊರೆಯೆ, ನಿನ್ನ ರಾಣಿಯು ಹೇಳಿದ ಮಾತನ್ನು ಒಪ್ಪಬಹುದು. ಆದರೆ ಸಿಂಹವು ನನ್ನೊಡನೆ ರಾಜನದೇಹದ ಬಲಭಾಗವನ್ನು ಸಂತೋಷದಿಂದ ತಿನ್ನುವೆ ಎಂದು ಹೇಳಿದೆ. ಹಾಗಲ್ಲದೆ ವಾಮಾಂಗವೆಂದು ಹೇಳಿಲ್ಲ!' ಎಂದನು. ಆಗ ಮಯೂರಧ್ವಜನಮಗ ತಾಮ್ರಧ್ವಜನು ಕೇಳಿಕೊಂಡನು,

'ಎಲೈ ಬ್ರಾಹ್ಮಣನೇ, ನಿನ್ನನ್ನು ಬೇಡಿಕೊಳ್ಳುವೆ. ಕರುಣೆದೋರು. ನಾನು ತರುಣ. ಸುಪುಷ್ಟವಾಗಿರುವೆ. ನನ್ನ ದೇಹವು ಸಿಂಹಕ್ಕೆ ತೃಪ್ತಿಯಾಗುವುದು. ತಂದೆಯ ಮಾತು ನಡೆಸಿದರೆ ಶ್ರೀರಾಮ ಭೀಷ್ಮರಂತೆ ತಂದೆಯ ಋಣ ತೀರುತ್ತದೆ. ಸತ್ಕೀರ್ತಿ ಉಂಟಾಗುತ್ತದೆ. ತಂದೆಯೇ ಮಗನಾಗಿ ಹುಟ್ಟುವನು ಎಂಬುದು ಶಾಸ್ತ್ರೋಕ್ತಿ. ತಂದೆ ಮಕ್ಕಳಿಗೆ ವ್ಯತ್ಯಾಸವಿಲ್ಲ. ನನ್ನನ್ನೇ ತೆಗೆದುಕೊಂಡು ಹೋಗು.'

'ಎಲೈ ಕುಮಾರ, ನೀನು ಹೇಳಿದಮಾತು ಸುಳ್ಳಲ್ಲ. ಪಾಪಿಸಿಂಹವು ನನ್ನೊಡನೆ ರಾಜನ ಹೆಂಡತಿ ಅಥವಾ ಮಗನ ದೇಹವೆಂದು ಹೇಳಿಲ್ಲ. ಸಾಧ್ಯವಾದರೆ ಮಯೂರಧ್ವಜನ ಬಲಭಾಗದ ಅರ್ಧ ದೇಹವನ್ನು ತೆಗೆದುಕೊಂಡು ಬಾ, ನಿನ್ನ ಮಗನನ್ನು ಬಿಡುವೆ ಎಂದು ಹೇಳಿದೆ. ದಾನ ನೀಡಲು ಈ ರೀತಿ ಹೆದರುವುದಾದರೆ ನನಗೇನೂ ಕೊಡಬೇಡಿ, ನಾನು ಹೋಗುವೆ.'

**ಮಗನೊಡನೆ ಸೇರಿ ಗಂಡನ ತಲೆ ಸೀಳಿದ ಕುಮುದ್ವತಿ**

ಶಾಂತಚಿತ್ತದ ದಾನಶೀಲ ಮಯೂರಧ್ವಜನು,

'ಹೆಂಡತಿಯನ್ನು, ಮಗನನ್ನು ಕೊಡುವುದಿಲ್ಲ. ನನ್ನ ಭಾಷೆಗೆ ತಪ್ಪದಂತೆ ಶ್ರೀಕೃಷ್ಣ ಮೆಚ್ಚುವ ಹಾಗೆ ಅರ್ಧ ದೇಹವನ್ನು ನಿನಗೆ ಕೊಡುವೆನು. ಸೈರಿಸು' ಎಂದು ನುಡಿದು ಸಾಣೆಹಿಡಿದು ಹರಿತಗೊಳಿಸಿದ ಗರಗಸವನ್ನು ಹೆಂಡತಿಯ ಕೈಗೆ ಕೊಡಿಸಿ ಹೇಳಿದನು:

'ಎಲೈ ಕುಮುದ್ವತಿಯೇ, ಬಾಲಲೀಲೆಯಿಂದ ಮಗನು, ರತಿವಿಲಾಸದಲ್ಲಿ ಹೆಂಡತಿಯ ಉಗುರುಗಳಿಂದ ಗೀರಿದರೆ ನೋಯುವುದೇ? ನೀನೂ ನಿನ್ನ ಮಗನೂ ನನ್ನನ್ನು ಕೊಯ್ಯುವುದು ನನಗೆ ವಿನೋದ. ಶ್ರೀಕೃಷ್ಣನು ಗರುಡ ಹನುಮಂತರಿಗೆ ಸಮನಾಗಿ ಹಣ್ಣು ಹಂಚಿದಂತೆ, ನನ್ನ ತಲೆಯನ್ನು ಸಮನಾಗಿ ಹೋಳುಮಾಡಿ.'

ಕುಮುದ್ವತಿಯು ಮಗನೊಡನೆ ಗರಗಸದಿಂದ ಸೀಳುತ್ತಿರಲು, ಆ ಸಭೆಯು ನರಸಿಂಹನು ಹಿರಣ್ಯಕಶಿಪುವನ್ನು ಸೀಳಿದ್ದನ್ನು ನೆನಪು ಮಾಡಿಕೊಳ್ಳುತ್ತಿತ್ತು. ಆಕೆಯು ರಾಮಧ್ಯಾನದಲ್ಲಿ ತಲೆಯನ್ನು ಸಮನಾಗಿಸೀಳಿದಳು. ಸಭೆಯಲ್ಲಿದ್ದ ಜನ ಬಹುದುಃಖಿತರಾಗಿ ಎದ್ದು ನಿಂತು ಸಮುದ್ರ ಘೋಷವನ್ನು ಮೀರಿಸುವಂತೆ ಗೋಳಾಡಿದರು.

ಎಲೈ ಜನಮೇಜಯರಾಯನೇ ಕೇಳು. ಅರ್ಜುನ ಮುರಾರಿಗಳು ಬೆರಗಾದರು. ಆ ಮೂವರಲ್ಲಿ ಯಾವ ಕೊರತೆಯನ್ನೂ ಕಾಣದ ಶ್ರೀಕೃಷ್ಣನು ಮಯೂರ ಧ್ವಜನ ಎಡಗಣ್ಣಿನಲ್ಲಿ ಕಂಬನಿ ಒಸರುತ್ತಿರುವುದನ್ನು ಕಂಡು,

'ವ್ಯಸನಭರಿತನಾಗಿ ಅಳುತ್ತಕೊಡುವ ದಾನವನ್ನು ಬ್ರಾಹ್ಮಣರು ತೆಗೆದುಕೊಳ್ಳುವರೇ? ಅಯ್ಯೋ, ಪ್ರಪಂಚದಲ್ಲಿ ಬೇಡುವವನು ಭಂಡ. ಕಾಡಿನಲ್ಲಿ ಸಿಂಹವು ನನ್ನಮಗನನ್ನು ತಿಂದರೆತಿನ್ನಲಿ' ಎಂದು ಹೇಳುತ್ತ ಕೋಪಿಸಿಕೊಂಡು ಹೋದನು. ಅದನ್ನು ಕಂಡು ಭ್ರಾಂತಳಾದ ಕುಮುದ್ವತಿಯು,

'ಅಯ್ಯೋ, ನಿನ್ನ ಮಸ್ತಕವನ್ನು ವ್ಯರ್ಥವಾಗಿ ಕೊಯ್ಸಿದೆ. ನೀನು ಅಳುತ್ತ ದಾನ ಕೊಡುವೆ ಎಂದು ಆ ದ್ವಿಜೋತ್ತಮ ಒಲ್ಲದೆ ಹೊರಟು ಹೋದನು. ಅಕ್ಕರೆಯಿಂದ ಕೊಟ್ಟದಾನ ವ್ಯರ್ಥವಾಯಿತಲ್ಲ! ಏನು ಮಾಡುವುದು?'

'ಹೋಳುಗಳನ್ನು ಕೂಡಿಸಿಹಿಡಿಯಿರಿ. ಆ ಬ್ರಾಹ್ಮಣನನ್ನು ಕರೆಸು. ಕಾರಣ ತಿಳಿಸಿ ಸಮಾಧಾನ ಮಾಡುವೆ.'

ದಾನ ಸಫಲವಾಗುವುದಷ್ಟೇ ಮುಖ್ಯವಾದ ಕುಮುದ್ವತಿಯು ತಲೆಯ ಹೋಳುಗಳನ್ನು ಹಿಡಿದು, ಬ್ರಾಹ್ಮಣನನ್ನು ಕರೆತರಲು ಮಗನನ್ನು ಕಳುಹಿಸಿದಳು.

ತಾಮ್ರಧ್ವಜನು ವಿನಯದಿಂದ ಆ ಬ್ರಾಹ್ಮಣನನ್ನು ಒಡಂಬಡಿಸಿ ಮರಳಿ ಕರೆದುಕೊಂಡು ಬಂದನು. ಆಗ ದೊರೆಯು ನುಡಿದನು: 'ಎಲೈ ವಿಪ್ರನೇ, ನಾನು ಗರಗಸದ ಕೊಯ್ತಕ್ಕೆ ಹೆದರಲಿಲ್ಲ. ದೇಹದ ಬಲಭಾಗವು ಪರೋಪಕಾರಕ್ಕಾಯಿತು. ಎಡಭಾಗ ನಿರರ್ಥಕವಾಗಿ ಉಳಿಯಿತಲ್ಲ ಎಂದು ಎಡಗಣ್ಣು ಒಸರಿತು!'

ಮಹಾದಾನಿಯ ಸತ್ಯನುಡಿಗೆ ಮೆಚ್ಚಿದ ಶ್ರೀಕೃಷ್ಣ ದೇಹದ ಹೋಳುಗಳನ್ನು ಅತಿಕರುಣೆಯಿಂದಸವರಿ ಆಲಂಗಿಸಿಕೊಂಡನು.

'ಎಲೈ ರಾಜನೇ, ನಿನ್ನನ್ನು ಪರೀಕ್ಷಿಸಿ, ದೃಢ ಭಕ್ತಿಯನ್ನು ಕಂಡೆ, ಇನ್ನು ಮುಚ್ಚುಮರೆಯೇಕೆ? ನಾನು ಕೃಷ್ಣ, ಇವನು ಅರ್ಜುನ' ಎಂದು ಹೇಳಿ ಶಾಸ್ತ್ರೋಕ್ತವಾದ ತನ್ನ ನಿಜರೂಪವನ್ನು ತೋರಿಸಿದನು. ವರ ಸುಪ್ರಸನ್ನವದನದ, ಕಮಲ ನೇತ್ರದ, ಮಕರ ಕುಂಡಲದ, ಕತ್ತುರಿಯ ತಿಲಕದ, ಮಣಿ ಮಕುಟದ, ತುಳಸಿಯ ಕೊರಳ ವನಮಾಲೆಯ, ಕೌಸ್ತುಭ ಶ್ರೀವತ್ಸ ಉರದ, ಸರ್ವಾಭರಣ ಭೂಷಿತನಾದ ಶ್ರೀಹರಿಯು ಮಯೂರಧ್ವಜನಿಗೆ ಕಂಡನು. ಮನೋಹರಮೂರ್ತಿಯನ್ನು ಕಂಡು ರಾಜನು ರೋಮಾಂಚನಗೊಂಡನು.

ಜಯ ಜಯ ಜಗನ್ನಾಥ, ವರ ಸುಪರ್ಣವರೂಥ, ಜಯ ಜಯ ರಮಾಕಾಂತ ಎಂದು ಬಹುವಿಧವಾಗಿ ಧ್ಯಾನ ಮಾಡಿದನು. ಕಣ್ದಣಿಯುವ ಹಾಗೆ ಮಹಾವಿಷ್ಣುವನ್ನು ನೋಡಿ, ಸಾಷ್ಟಾಂಗ ನಮಸ್ಕಾರ ಮಾಡಿ, ಮುಂದೆ ನಿಂತು ಸುತ್ತಿಸಿದನು. ಕುಮುದ್ವತಿ, ತಾಮ್ರಧ್ವಜರು ಭಕ್ತಿಯಿಂದ ನಮಸ್ಕಾರ ಮಾಡಿದರು. ಮಹಾಸಭೆಯ ಜನ ಆನಂದದಿಂದ ಕೈಮುಗಿದು ಶ್ರೀಕೃಷ್ಣನನ್ನು ಸ್ತೋತ್ರ ಮಾಡಿದರು. ಹರ್ಷಚಿತ್ತನಾದ ಶ್ರೀಕೃಷ್ಣನು ಮಯೂರಧ್ವಜನನ್ನು ಸಮಾಧಾನಪಡಿಸುವ ದನಿಯಲ್ಲಿ ಹೇಳಿದನು:

'ಅಯ್ಯಾ, ನೀನು ನೀಡಿದದಾನಕ್ಕೆ ಮೆಚ್ಚಿದೆನು. ನಿನ್ನಮಗ ತಾಮ್ರಧ್ವಜನು ನಿನ್ನೆಯ ಯುದ್ಧದಲ್ಲಿ ಸೇನೆಯನ್ನು, ಅರ್ಜುನನನ್ನು, ನನ್ನನ್ನು ಮೂರ್ಛೆಗೊಳಿಸಿದುದಕ್ಕೆ ಸಂತೋಷವಾಗಿದೆ. ನಿನ್ನಕುದುರೆಯ ಜೊತೆಗೆ ಧರ್ಮಜನಅಶ್ವವೂ ಇದೆ. ಹೆಂಡತಿ ಮಗನೊಡನೆ ದೀಕ್ಷಿತನಾಗಿ ಯಜ್ಞವನ್ನು ಮಾಡು.'

'ಸ್ವಾಮಿ, ನಿನ್ನ ದರ್ಶನವಾದ ಮೇಲೆ, ಚರ್ಮದಕೋಡು ಧರಿಸಿ ದೀಕ್ಷೆಗೊಳ್ಳುವ

ಅವಿವೇಕಿ ಉಂಟೆ? ನಿನ್ನನ್ನು ಕಣ್ತುಂಬನೋಡಿ, ನಿನಗೆ ಒಪ್ಪಿಸಿಕೊಂಡ ಬಳಿಕ ಯಾಗ ಮಾಡಿದರೆ–ನಿನ್ನ ಉಚ್ಛ್ವಾಸದಿಂದ ರೂಪುತಳೆದ ಮಂತ್ರಗಳು ನನ್ನನ್ನು ನೋಡಿ ನಗುವುದಿಲ್ಲವೇ? ಅಗ್ನಿ ಹತ್ತಿರದಲ್ಲಿರುವಾಗ ಹಿಮಕ್ಕೆ ಬೇರೆ ಔಷಧಿಯನ್ನು ಹುಡುಕುವರೇ? ನರ ನಾರಾಯಣ ದರ್ಶನವಾಗಿ ಧನ್ಯನಾದೆ. ಧರ್ಮರಾಯನೇ ಯಾಗಗಳನ್ನು ಮಾಡಿ ಬಾಳಲಿ.

'ನನ್ನದೇಹವನ್ನು, ಸತಿಸುತರನ್ನು, ಕುದುರೆಗಳನ್ನು, ಯಜ್ಞ, ಅದರ ಉಪಕರಣಗಳನ್ನು, ನನ್ನ ಅರಮನೆಯ ಸರ್ವಸ್ವವನ್ನು ನಿನಗೊಪ್ಪಿಸಿರುವೆನು' ಎಂದು ಮಯೂರಧ್ವಜನು ಕೈ ಮುಗಿದನು.

ಶ್ರೀಕೃಷ್ಣನು ಆತನ ಭಕ್ತಿಯನ್ನು ಅರ್ಜುನನಿಗೆ ತೋರಿಸಿ, ರತ್ನಪುರದಲ್ಲಿ ಮೂರು ದಿನಗಳು ಸುಖದಿಂದಿದ್ದನು. ತನ್ನ ಸೇನೆ ಬರಲು ರತ್ನಪುರದ ಸಕಲವಸ್ತುಗಳನ್ನು ಹಸ್ತಿನಾಪುರಕ್ಕೆ ಕೊಂಡೊಯ್ಯಲು ತಿಳಿಸಿದನು.

ಎರಡು ಕುದುರೆಗಳನ್ನು ಮುಂದೆ ಬಿಟ್ಟು ಮಯೂರಧ್ವಜನೊಡನೆ ಶ್ರೀಕೃಷ್ಣನು ಮುಂದಕ್ಕೆ ಹೊರಟನು.

# ಅದ್ವಿತೀಯ ಸಾಹಸಿ ವೀರವರ್ಮ

ಜನಮೇಜಯರಾಯನೇ ಕೇಳು. ಯಜ್ಞಾಶ್ವಗಳನ್ನು ಅನುಸರಿಸಿದ ಅರ್ಜುನನ ಸೇನೆ ಸೌರಾಷ್ಟ್ರದೇಶಕ್ಕೆ ಬಂದಿತು. ಆ ರಾಜ್ಯವನ್ನು ಸಾರಸ್ವತ ನಗರದಲ್ಲಿ ವೀರವರ್ಮನೆಂಬ ದೊರೆ ಆಳುತ್ತಿದ್ದನು. ಅವನ ರಾಜ್ಯದಲ್ಲಿ ಧರ್ಮವು ನಾಲ್ಕು ಕಾಲುಗಳಿಂದ ನಡೆಯುತ್ತಿತ್ತು. ಆ ರಾಜ್ಯದ ಜನರು ಕನಸಿನಲ್ಲಿಯೂ ಪಾಪಕೃತ್ಯಗಳನ್ನು ಮಾಡುತ್ತಿರಲಿಲ್ಲ. ವ್ಯಾಧಿ ಪೀಡೆಗಳಿಗೆ ಒಳಗಾಗಿರಲಿಲ್ಲ. ದುಃಖ, ಶೋಕ, ಸಂತಾಪಗಳಿಂದ ಸಂಕಟಪಡುತ್ತಿರಲಿಲ್ಲ. ಯಮಧರ್ಮರಾಯನು ಆ ರಾಜನ ಮನೆಯಅಳಿಯನಾಗಿದ್ದನು.

ಯಜ್ಞಾಶ್ವಗಳು ಅರ್ಜುನನ ಸೇನೆಯೊಡನೆ ತನ್ನ ರಾಜ್ಯಕ್ಕೆ ಬಂದ ಸಂಗತಿಯನ್ನು ಕೇಳಿದ ವೀರವರ್ಮನು ಹುಸಿನಗೆಬಿರುತ್ತ ಕೋಪಗೊಂಡನು. 'ಕೃಷ್ಣಾರ್ಜುನರ ಪರಾಕ್ರಮವನ್ನು ನಾವು ತಿಳಿದುಕೊಳ್ಳುತ್ತೇವೆ. ಕುದುರೆಯನ್ನು ಕಟ್ಟಿಹಾಕಿ' ಎಂದು ಆಜ್ಞೆ ಮಾಡಿದನು. ಸುಲಭ, ಸಲೋಲ, ಕಮಲ, ನೀಲ, ಸರಳ ಎಂಬ ಅವನ ಐದುಜನ ಮಕ್ಕಳು ಚತುರಂಗಬಲದೊಡನೆ ಹೋಗಿ ಅರ್ಜುನನಸೇನೆಯನ್ನು ಸೋಲಿಸಿದರು. ಯಜ್ಞಾಶ್ವಗಳನ್ನು ಹಿಡಿದುತಂದು ತಂದೆಯಮುಂದೆ ನಿಲ್ಲಿಸಿದರು.

ಆ ಸುದ್ದಿ ಕೇಳಿದ ಬಭ್ರುವಾಹನನು ಕಡುಕೋಪದಿಂದ ಹಿಂಬಾಲಿಸಿ ಹೋದನು. ಶಂಖವನ್ನುಊದಿ ಧ್ವನಿಮಾಡಲು ಮೂರುಲೋಕಗಳು ಬೆದರಿದವು. ಎರಡೂಕಡೆಯ ಸೈನಿಕರಿಗೆ ಬಾಹುಯುದ್ಧ, ಮುಷ್ಟಿಯುದ್ಧ, ಕೇಶಾಕೇಶಿಯುದ್ಧ, ಮಲ್ಲಯುದ್ಧ ನಡೆಯಿತು. ಉಭಯ ಸೈನಿಕರೂ ಮಡಿದುಬಿದ್ದರು. ಸಾರಸ್ವತ ನಗರದಿಂದ ಸಹಸ್ರಸಹಸ್ರ ಸಂಖ್ಯೆಯ ಚತುರಂಗಸೈನ್ಯ ಬರುತ್ತಿರಲು, ವೀರವರ್ಮನ ಮಕ್ಕಳು ಬಭ್ರುವಾಹನನನ್ನು ಮೂದಲಿಸಿ ಯುದ್ಧಕ್ಕೆ ನಿಂತರು. ರೋಷದಿಂದ ಬಭ್ರುವಾಹನನು ಶರವರ್ಷವನ್ನು ಕರೆಯಲು ಅವರೆಲ್ಲರು ಎಲ್ಲಿಅಡಗಿದರೊ ತಿಳಿಯದಾಯಿತು! ಶತ್ರುಸೈನ್ಯವು ಮಡಿದುಬಿತ್ತು.

ವೀರವರ್ಮನೇ ಸೇನೆಯೊಡನೆ ಯುದ್ಧಕ್ಕೆ ಬಂದು ಅಳಿಯ ಯಮಧರ್ಮನಿಗೆ ತನ್ನಸೇನೆಯ ನಾಶವನ್ನು ತೋರಿಸಿದನು. ಜಗತ್ತಿನಲ್ಲಿಯ ಜೀವಿಗಳವಧೆಗೆ ಅಳುಕದ ಯಮ, ಮಾವನಿಗೆ ಜಯವಾಗಲೆಂದು ಅರ್ಜುನನ ಸೈನ್ಯವನ್ನು ಕೊಲ್ಲತೊಡಗಿದನು. ಅವನೆದುರು ಧೈರ್ಯವಾಗಿನಿಂತು ಕಾದುವ ಶೂರರೇಇಲ್ಲವಾದರು! ಅದನ್ನು ಕಂಡ ಫಲುಗುಣನು ಶ್ರೀಕೃಷ್ಣನನ್ನು ಕೇಳಿದನು,

'ಎಲೈ ದೇವ, ನಮ್ಮ ಸೇನೆಯನ್ನು ಸಂಹರಿಸುತ್ತಿರುವ ಈ ಭಯಂಕರ ಶೂರ ಯಾರು?'

'ಅಪ್ಪಾ ಅರ್ಜುನನೇ ಕೇಳು. ಈತನು ನಿನಗೆ ದೊಡ್ಡಪ್ಪನಾಗಬೇಕು. ಇವನೇ ಯಮ. ವೀರವರ್ಮನಿಗೆ ಅಳಿಯ. ಮಾವನ ಹಿತಕ್ಕಾಗಿ ನಮ್ಮ ಚತುರಂಗಸೇನೆಯನ್ನು ಕೊಲ್ಲುತ್ತಿರುವನು.'

'ಸ್ವಾಮಿಯೇ, ಭೂಲೋಕದಲ್ಲಿ ವೀರವರ್ಮನಿಗೆ ಯಮನು ಅಳಿಯನಾಗಿ ಅವನ ಮನೆಯಲ್ಲಿರಲು ಕಾರಣವೇನು? ವಿವರಿಸಿ ಹೇಳು.'

ಅರ್ಜುನನ ಕುತೂಹಲದ ಪ್ರಶ್ನೆಗೆ ನಗುನಗುತ್ತ ಶ್ರೀಕೃಷ್ಣನು ಆ ವೃತ್ತಾಂತವನ್ನು ಹೇಳಿದನು.

**ಯಮ ಮಾಲಿನಿಯರ ವಿವಾಹ**

ವೀರವರ್ಮರಾಜನಿಗೆ ಮಾಲಿನಿ ಎಂಬ ಮಗಳಿದ್ದು ಆಕೆ ಯೌವನಸ್ಥಳಾದಾಗ ಆತ ಯಾರೊಡನೆ ನಿನ್ನನ್ನು ಮದುವೆಮಾಡಿಕೊಡಲಿ ಎಂದು ಕೇಳಿದ. ಮಾಲಿನಿಯು ನನಗೆ ಭೂಲೋಕದಲ್ಲಿರುವ ಮನುಷ್ಯರನ್ನು ಮದುವೆಯಾಗಲು ಇಷ್ಟವಿಲ್ಲ. ಮನುಷ್ಯನಿಗೆ ಮರಣತಪ್ಪದು. ಆಗ ನಾನು ಅಗ್ನಿಪ್ರವೇಶಮಾಡಬೇಕು ಅಥವಾ ವಿಧವೆಯಾಗಿ ಉಳಿಯಬೇಕು. ವಿಧವೆಯಾಗಿ ಉಳಿದಾಗ ಮನ್ಮಥ ಬಾಧೆಗೊಳಗಾಗಿ ಅನ್ಯಪುರುಷರನ್ನು ಕೂಡಿದರೆ ನರಕ ಪ್ರಾಪ್ತಿಯಾಗುವುದು. ಆದ ಕಾರಣ ನಾನು ಯಮಧರ್ಮರಾಜನನ್ನೇ ಧ್ಯಾನಿಸುತ್ತಿರುವೆ. ಪುಣ್ಯಕಾರ್ಯಗಳಿಂದ ವೈವಸ್ವತನನ್ನು ಮೆಚ್ಚಿಸಿ ಮದುವೆ ಮಾಡಿಕೊಡು ಎಂದು ತನ್ನ ಅಭಿಲಾಷೆಯನ್ನು ವಿನಯದಿಂದ ಹೇಳಿದಳು.

ವೀರವರ್ಮನು ಯಮಸೂಕ್ತದಿಂದ ವೈವಸ್ವತನನ್ನು ಆರಾಧಿಸಿದನು. ಮಾಲಿನಿಯೂ ವ್ರತ, ದಾನ, ತಪಸ್ಸುಗಳಿಂದ ಕೃತಾಂತನನ್ನು ಪೂಜಿಸುತ್ತಿದ್ದಳು. ಈ ವಿಷಯವನ್ನು ಧರ್ಮಕಾರ್ಯನಿರತನಾದ ದೇವಋಷಿ ನಾರದ ತಿಳಿದನು. ಯಮಧರ್ಮನಬಳಿಗೆ ಹೋಗಿ ಮಾಲಿನಿಯ ಪ್ರಾರ್ಥನೆಯನ್ನು ವಿಚಾರಿಸದೆ ಇರುವುದು ನ್ಯಾಯವೇ ಎಂದು ಕೇಳಿದನು. ತನ್ನ ಗುಣ, ನಡತೆ, ಶೀಲ, ಸತ್ಯ, ಧರ್ಮಗಳಿಂದ ಸಾರಸ್ವತಪುರವನ್ನು ಪಾವನವಾಗಿಸುತ್ತಿರುವ ವೀರವರ್ಮನ ಮಗಳನ್ನು ಮನುಷ್ಯರೂಪದಿಂದ ವಿವಾಹವಾಗಿ ಸುಖವಾಗಿರು ಎಂದನು. ಯಮನು ಒಪ್ಪಿದನು.

ಅಲ್ಲಿಂದ ಸಾರಸ್ವತಪುರಕ್ಕೆ ಬಂದು ದೊರೆ ವೀರವರ್ಮನನ್ನು ಕಂಡು, ನಿನ್ನ ಪುಣ್ಯಫಲದಿಂದ ಯಮನು ಸಂತುಷ್ಟನಾಗಿದ್ದಾನೆ. ವೈಶಾಖಮಾಸದ ಶುಕ್ಲಪಕ್ಷದಲ್ಲಿ ಭೂಲೋಕಕ್ಕೆ ಬಂದು, ನಿರ್ಮಲಚರಿತಳಾದ ನಿನ್ನಮಗಳು ಮಾಲಿನಿಯನ್ನು ಜನರು ಮೆಚ್ಚುವಂತೆ ಮದುವೆಯಾಗುವನು. ಯಮನನ್ನು ಆದರಿಸು. ಅವನ ನಲ್ಮೆಗೆ ಪಾತ್ರನಾಗು ಎಂದನು.

**ಮೋಹನ ರೂಪ ಧರಿಸಿದ ಯಮನ ಪರಿವಾರ**

ಯಮನು ಮದುವೆಗೆ ಹೊರಟು ಬರುವಾಗ ತನ್ನ ಸಾಮಂತರನ್ನು, ಅಪರಿಮಿತ ಪರಿವಾರವನ್ನು ತನ್ನೊಡನೆ ವಿವಾಹಕ್ಕೆ ಬರಲು ಹೇಳಿದನು. ಕೋಪಗಂಟಿಕ್ಕಿದ ಮುಖದ, ಕೋರೆ ಹಲ್ಲುಗಳ, ಕಪ್ಪು ದೇಹದ ವಿಪರೀತ ಪರಾಕ್ರಮದ ಭಯಂಕರ ಶೂರರು ಮಂತ್ರಿ ಕ್ಷಯನೊಡನೆ ಹೊರಟುಬಂದರು. ಪಂಚಪಾತಕದ ದೊರೆಗಳು, ರಾಜಕ್ಷಯವೇ ಮೊದಲಾದ ವ್ಯಾಧಿನಾಯಕರು, ಬಹುಕ್ರೂರ ರೋಗದ ಅರಸಿಯರು. ವಾಂತಿಭೇದಿ ಅತಿಸಾರದ ಭಯಂಕರ ವದನೆಯರು ಗುಂಪಾಗಿ ಸೇರಿಬರುತ್ತಿರಲು ಮಂತ್ರಿ ಕ್ಷಯನು ಯಮನಲ್ಲಿ ಒಂದು ವಿಜ್ಞಾಪನೆ ಮಾಡಿಕೊಂಡನು. ಸ್ವಾಮಿಯೆ ನಮಗೆ ವೇದಾವಳಿಯ ಘೋಷಗಳು ಕೇಳಿಸುತ್ತವೆ, ಹೋಮಾಗ್ನಿ ಕಾಣುತ್ತದೆ. ಪುಣ್ಯಜನರ ಮೇಲೆ ಬೀಸಿದ ಗಾಳಿ ಸ್ಪರ್ಶಿಸುತ್ತದೆ. ವೀರವರ್ಮನ ಧಾರ್ಮಿಕ ಆಚರಣೆಯಲ್ಲಿ ವಿಪ್ರರು, ಭಕ್ತಜನ, ಪ್ರಜೆಗಳು ಬಹಳ ಶುಚಿಯಿಂದಿರುತ್ತಾರೆ. ನಾವು ಅಲ್ಲಿಗೆ ಹೇಗೆ ಬರುವುದು?

ಆಗ ಯಮಧರ್ಮನು ವಿವಾಹಕ್ಕೆ ಬರುವ ಎಲ್ಲರೂ ತಮ್ಮ ಭಯಂಕರ ಆಕಾರಗಳನ್ನು ತೊರೆದು ಮನೋಹರ ರೂಪವನ್ನು ಹೊಂದಿ ನಮ್ಮೊಡನೆ ಹೊರಟು ಬರಲಿ. ಸಾರಸ್ವತ

ನಗರದಲ್ಲಿ ಪಾಪಕರ್ಮಗಳಿಲ್ಲ. ನೀವು ಕಣ್ಣಿಗೆ ಸೊಗಸುವಂತೆ ಸೌಮ್ಯಸುಂದರವಾಗಿ, ಉತ್ತಮಆಭರಣಗಳಿಂದ ಅಲಂಕೃತರಾಗಿ ಬನ್ನಿ ಎಂದನು.

ವೀರವರ್ಮ ಯಮಧರ್ಮನನ್ನು ಅವನ ಪರಿವಾರವನ್ನು ಇದಿರ್ಗೊಂಡು ಸತ್ಕರಿಸಿದನು. ನಾರದರೇ ಮೊದಲಾದ ಮಹರ್ಷಿಗಳಿಂದ ಕೂಡಿದ ಬ್ರಾಹ್ಮಣರ ಸಮ್ಮುಖದಲ್ಲಿ ಯಮಧರ್ಮನಿಗೆ ಪಂಕಜವದನೆಯಾದ ಮಾಲಿನಿಯನ್ನು ಶಾಸ್ತ್ರೋಕ್ತರೀತಿಯಲ್ಲಿ ಮದುವೆ ಮಾಡಿಕೊಟ್ಟನು. ಮೂರುಲೋಕಕ್ಕೂ ಅಚ್ಚರಿಯಾಗುವಂತಹ ವಿವಾಹ ಉತ್ಸವವನ್ನು ವೈವಸ್ವತನು ಮೆಚ್ಚಿಕೊಂಡನು. ತನ್ನ ಮಾವ ವೀರವರ್ಮನಿಗೆ, ನಿನ್ನ ಕೋರಿಕೆಯನ್ನು ಹೇಳಿದರೆ ಅದನ್ನು ಸಲ್ಲಿಸುವೆ. ನಿನಗೆ ಇನ್ನು ಸ್ವಲ್ಪಕಾಲದಲ್ಲಿಯೇ ಮರಣ ಉಂಟಾಗುವುದು, ಎಚ್ಚರಿಕೆಯಿಂದಿರುವುದು ಎಂದು ಹೇಳಿದನು. ಅದಕ್ಕೆ ವೀರವರ್ಮನು ನನ್ನ ಮಗಳನ್ನು ನಿನಗೆ ನಿಷ್ಕಪಟವಾಗಿ ಕೊಟ್ಟಿರುವೆ. ಕನ್ಯಾಶುಲ್ಕ ಅತ್ಯಂತ ಪಾಪಕರವಾದುದು, ನನಗೇನೂ ಬೇಡ ಎಂದು ನಯವಾಗಿ ನುಡಿದನು.

ನಾನು ನೀಡುತ್ತಿರುವ ವರ ಪ್ರತಿಫಲರೂಪದ್ದು ಅಲ್ಲ. ಲೇಸಾದ ಮನಸ್ಸಿನಿಂದ ಕೊಟ್ಟಾತನನ್ನು, ತೆಗೆದುಕೊಂಡವನು ಆಶೀರ್ವದಿಸದಿರುವನೇ? ನನ್ನ ಮಾತನ್ನು ತಿರಸ್ಕರಿಸಬೇಡ ಎಂದು ಯಮಧರ್ಮನು ಒತ್ತಾಯಿಸಿದನು.

ಅಲ್ಪಕಾಲದಲ್ಲಿಯೇ ತನಗೆ ಮೃತ್ಯು ಆವರಿಸುವುದೆಂಬುದನ್ನು ತಿಳಿದ ವೀರವರ್ಮನು ಒಂದು ಉಪಾಯವನ್ನು ಯೋಚಿಸಿದನು. ನಗುನಗುತ್ತ ಯಮನಿಗೆ, ವರನೀಡುವಹಾಗಿದ್ದರೆ ಮೋಕ್ಷದಾಯಕನಾದ ಶ್ರೀಕೃಷ್ಣನು ಇಲ್ಲಿಗೆ ಬರುವವರೆಗೂ ನನಗೆ ಮರಣಬಾರದಿರಲಿ. ಅಸುರಾರಿಯನ್ನು ಕಾಣುವವರೆಗೂ ನೀನು ನಮ್ಮ ಪುರದಲ್ಲಿಯೇಇದ್ದು ನನ್ನನ್ನು ಕಾದುಕೊಂಡಿರುವಂತಹ ವರ ನೀಡು ಎಂದು ಕೇಳಿಕೊಂಡನು. ಯಮನು ಹಾಗೆಯೇ ಆಗಲಿ ಎಂದು ಅಕ್ಕರೆಯಿಂದ ವರವನ್ನು ಕೊಟ್ಟನು.

ಯಮಧರ್ಮನು ಅಂದಿನಿಂದ ವಿನೋದವಾಗಿ ಮಾಲಿನಿಯೊಡನೆ ರಮಿಸುತ್ತ ಈ ಪಟ್ಟಣದಲ್ಲಿರುವನು.

* * *

'ಎಲೈ ಅರ್ಜುನನೇ, ರವಿತನಯನು ಈ ಪುರದಲ್ಲಿರುವ ವೃತ್ತಾಂತವನ್ನು ಕೇಳಿದೆಯಲ್ಲ; ಯಮನು ನಿನ್ನಸೇನೆಯನ್ನು ಸಂಹರಿಸುತ್ತಿರಲು, ವೀರವರ್ಮ ನನ್ನನ್ನು ಕಾಣಲು ಲವವಲಿಕೆಯಿಂದ ಬರುತ್ತಿರುವನು. ನೀನು ಕೋದಂಡವನ್ನು ಹಿಡಿ' ಎಂದು ಹೇಳಿದ ಶ್ರೀಕೃಷ್ಣನು ಧನಂಜಯನ ರಥವನ್ನುಏರಿ ಸನ್ನದ್ಧನಾದನು. ಪಾಂಡವರ ಸೇನೆ ವೀರಾವೇಶದಿಂದ ಮುಂದೆನುಗ್ಗಿತು. ಮಯೂರಧ್ವಜಾದಿಗಳು 'ಯಮನಾದರೆ ನರಕವಾಸಿಗಳನ್ನು ಶಿಕ್ಷಿಸಬೇಕು. ಶ್ರೀಕೃಷ್ಣನ ಸೇವೆಯಲ್ಲಿರುವ ನಮ್ಮನ್ನು ಕೊಲ್ಲುವ ಅಧಿಕಾರವೆಲ್ಲಿಯದು' ಎಂದು ಹೇಳುತ್ತ ಬಾಣಗಳನ್ನು ಪ್ರಯೋಗಿಸಿದರು. ಅನಿರುದ್ಧ, ಸಾತ್ಯಕಿ, ಪ್ರದ್ಯುಮ್ನ, ಕೃತವರ್ಮ, ವೃಷಕೇತು,ಬಭ್ರುವಾಹನ, ಮಯೂರಧ್ವಜ ಮುಂತಾದ ವೀರರನ್ನೆಲ್ಲ ಸೋಲಿಸಿ ವೀರವರ್ಮನು ಕೃಷ್ಣಾರ್ಜುನರ ಎದುರಿಗೆ ನಿಂತು,

'ಎಲೈ ಶ್ರೀಹರಿಯೇ, ಈ ವೀರರಾರೂ ನನಗೆ ಸರಿಸಾಟಿಯುಲ್ಲ. ನೀನು, ಅರ್ಜುನ, ಧ್ವಜಾಗ್ರದಲ್ಲಿರುವ ಹನುಮಂತರೊಡನೆ ಚೆನ್ನಾಗಿ ಕಾದಿ ನನ್ನತೋಳಿನ ತೀಟೆ

ತೀರಿಸಿಕೊಳ್ಳಬೇಕಾಗಿದೆ. ನೀವು ನಿಲ್ಲಿ. ನಿಮ್ಮ ಪರಾಕ್ರಮವನ್ನು ನೋಡುವೆನು' ಎಂದು ಹೇಳಿ ಕೃಷ್ಣನಿಗೆ ಆರು, ಅರ್ಜುನನಿಗೆ ಏಳು, ಹನುಮಂತನಿಗೆ ಎಂಟು ಬಾಣಗಳನ್ನು; ಉಳಿದವರಿಗೆ ಐದ್ಶೆದು ಬಾಣಗಳನ್ನು ಹೊಡೆದು ನೋಯಿಸಿದನು. ಆಗ ಆವೇಶದಿಂದ ಅಜುನನು,

'ಎಲೈ ಕೃಷ್ಣ, ಈತನೇ ವೀರವರ್ಮನೆಂಬ ದೊರೆಯೇ? ಪರಾಕ್ರಮಿಯೇ? ಯಮಧರ್ಮನಿಗೆ ಅತಿಬಲನಾದ ಮಾವನೇ? ಈತ ಕುದುರೆಯನ್ನು ಬಿಡದೆ ತೋಳು ಬಲವನ್ನು ತೋರಿಸುವೆ ಎನ್ನುವನಲ್ಲವೇ?ಆಗಲಿ ನೋಡುತ್ತೇನೆ' ಎಂದು ಬಾಣಗಳಿಂದ ಅವನನ್ನು ಹೊಡೆದನು.

'ಎಲೈ ಅರ್ಜುನ, ನಮ್ಮೊಡನೆ ಏಕೆ ಕಟಕಿಯಾಡುವೆ? ನೀನು ಮೂರುಲೋಕದ ವೀರನಾಗಿರುವೆಯೆಂಬ ಅಗ್ಗಳಿಕೆ ಶ್ರೀಕೃಷ್ಣನ ಸಹಾಯದಿಂದ ಬಂದದ್ದು. ಅದಕ್ಕೇಕೆ ಗರ್ವಪಡುವೆ?' ಎಂದು ಹೇಳುತ್ತ ವೀರವರ್ಮನು ಹೂಡಿದ ಬಾಣಗಳು ದಿಗಂತವನ್ನು ವ್ಯಾಪಿಸಿ ಶತ್ರುಸೇನೆಯನ್ನು ಮುತ್ತಿತು. ಕೃಷ್ಣ, ಅರ್ಜುನ, ಹನುಮಂತರನ್ನೂ, ರಥದ ಕುದುರೆಗಳನ್ನೂ ಕಂಗೆಡಿಸಿತು. ಆ ಬಾಣಗಳನ್ನು ತುಂಡರಿಸುತ್ತ ಅಜುನನು ನುಡಿದನು:

'ಈ ಯುದ್ಧದಿಂದೇನು ಪ್ರಯೋಜನ? ಸುಮ್ಮನಿದ್ದು ನಮ್ಮ ಕುದುರೆಗಳನ್ನು ಬಿಟ್ಟುಬಿಡು. ನನ್ನ ತೀಕ್ಷ್ಣಬಾಣಕ್ಕೆ ಗುರಿಯಾಗಬೇಡ.'

'ನೀನು ಮೊದಲೇ ವಿನಯದಿಂದ ಕೇಳಿಕೊಂಡಿದ್ದರೆ ಕುದುರೆಗಳನ್ನು ಬಿಟ್ಟುಬಿಡುತ್ತಿದ್ದೆ. ಹೆದರಿ ಹಿಮ್ಮೆಟ್ಟುವವನು ಕ್ಷತ್ರಿಯನೇ? ನಿನ್ನ ಶೌರ್ಯವನ್ನು ತೋರಿಸು' ಎಂದು ವೀರವರ್ಮನು ಅರವತ್ತು ಬಾಣಗಳನ್ನು ಹೂಡಿದನು.

ಜನಮೇಜಯರಾಯನೇ ಕೇಳು. ಆ ಬಾಣಗಳಿಂದ ಅರ್ಜುನನು ಕೊರಗಿದ, ಹನುಮಂತ ಹಲ್ಲುಕಿರಿದು ನರಳಿದ; ಕೃಷ್ಣ ಕಡಿವಾಣದ ಹುರಿಗಳನ್ನು ಸಡಿಲಿಸಿದ, ಕುದುರೆಗಳು ದಿಕ್ಕೆಟ್ಟುಓಡಿದವು, ಅವನು ಅರ್ಜುನನಸೇನೆಯನ್ನು ದೂರಕ್ಕೆ ಓಡಿಸಿದನು. ಆ ಆಶ್ಚರ್ಯವನ್ನು ಏನೆಂದು ಹೇಳಲಿ!

**ಕೃಷ್ಣಾರ್ಜುನರ ರಥವನ್ನೆತ್ತಿಕೊಂಡು ಆಕಾಶಕ್ಕೆ ನೆಗೆದ ವೀರವರ್ಮ**

ವೀರವರ್ಮನರಥ ಮಿಂಚಿನಂತೆ ಶತ್ರುಸೇನೆಯಲ್ಲಿ ತಿರುಗಿತು. ಅವನ ರಥದಚಕ್ರಗಳ ಉರುಳುವಿಕೆಯಶಬ್ದ, ಮಿಂಚಿಗೆ ಹೊಮ್ಮಿಬಂದ ಗುಡುಗಿನಂತಿತ್ತು. ಬಿರುಮಳೆಯಂತೆ ಬಾಣಗಳು ಸುರಿದುವು. ಬಭ್ರುವಾಹನ ಮಯೂರಧ್ವಜಾದಿ ವೀರರು ರಣರಂಗವನ್ನುಬಿಟ್ಟು ಓಡಿದರು. ತನ್ನ ಸೋಲಿಗೆ ರೋಷಗೊಂಡ ಅರ್ಜುನ ಹುಬ್ಬುಗಂಟಿಕ್ಕಿ ಭಯಂಕರನಾಗಿರಲು, ಕೃಷ್ಣನು ಶಾಂತಚಿತ್ತನಾಗಿ,

'ಎಲೈ ಅರ್ಜುನ, ಕೋಪಿಸಿಕೊಳ್ಳಬೇಡ, ನಿನಗೂ ನನಗೂ ಇವನು ಮಣಿಯುವವನಲ್ಲ. ನಿನ್ನ ಶೌರ್ಯ, ಯುಕ್ತಿಗಳು ಇವನಲ್ಲಿ ನಡೆಯಲಾರವು. ಜಯದ್ರಥನನ್ನು ಕತ್ತರಿಸಿದ ಪಾಶುಪತಾಸ್ತ್ರ ಇವನ ಹತ್ತಿರಕ್ಕೂ ಹೋಗಲಾರದು! ಕರ್ಣನ ರಥಚಕ್ರಗಳು ನೆಲದಲ್ಲಿ ಹೂತುಕೊಂಡಹಾಗೆ ಆಗಲು ಸಾಧ್ಯವಿಲ್ಲ! ಶಿಶುಪಾಲನನ್ನು ವಧಿಸಿದ ನನ್ನಚಕ್ರವೂ ಇವನನ್ನು ಮುಟ್ಟಲಾರದು!' ಎಂದು ವ್ಯಥೆಪಡುತ್ತ, ಯುದ್ಧತಂತ್ರವನ್ನು ಆಲೋಚಿಸಿ ಧ್ವಜದತುದಿಯಲ್ಲಿರುವ ಹನುಮಂತನನ್ನು ಕರೆದು ಹೇಳಿದನು:

'ಅಯ್ಯಾ, ನೀನು ಈತನ ರಥವನ್ನು ಬಾಲದತುದಿಗೆ ಸುತ್ತಿಕೊಂಡು ಅಕಾಶಕ್ಕೆ ಹಾರಿ, ಸಮುದ್ರಕ್ಕೆ ಎಸೆದುಬಿಡು.'

'ಸ್ವಾಮಿ, ಈತ ರಾವಣನಂತೆ, ಜಂಬುಮಾಲಿಯಂತೆ, ಸೀತಾಮಾತೆಯ ಕಾವಲಿಗಿದ್ದ ರಾಕ್ಷಸರಂತೆ ನೀಚನಲ್ಲವಲ್ಲಾ? ಇವನ ರಥವನ್ನು ಹೇಗೆ ಎಸೆಯಲಿ?'

'ನೀನು ಶಂಕಿಸಬೇಡ. ಇದು ನನ್ನಾಜ್ಞೆ, ಇದು ಧರ್ಮಕ್ಕೆ ಸಹಾಯಕವಾಗುವ ಕೆಲಸ.'

ಶ್ರೀಕೃಷ್ಣನ ಅಪ್ಪಣೆಯಂತೆ ಆಂಜನೇಯನು ಸಜ್ಜಾಗಿ, ವೀರವರ್ಮನ ರಥವನ್ನು ಸುತ್ತಿಕೊಂಡು ಸಮುದ್ರಕ್ಕೆ ಹಾರುವಷ್ಟರಲ್ಲಿ – ವೀರವರ್ಮನು ತನ್ನರಥವನ್ನು ಬಿಟ್ಟು, ಅತಿಪರಾಕ್ರಮದಿಂದ ಅರ್ಜುನನ ರಥವನ್ನು ಎತ್ತಿಕೊಂಡು ಆಕಾಶಕ್ಕೆ ನೆಗೆದು,

'ಎಲೈ ವಾನರೇಂದ್ರನೇ, ನಿನ್ನಕೈಯಲ್ಲಿ ಬರಿದಾದತೇರು ಇದೆ. ನನ್ನ ಕೈಯಲ್ಲಿ ಕೃಷ್ಣಕಿರೀಟಿಗಳಿರುವ ರಥವಿದೆ ನೋಡು' ಎಂದು ಹೀಯಾಳಿಸುತ್ತ, 'ನೀನೆಲ್ಲಿಗೆ ರಥವನ್ನು ಎಸೆಯುವಿಯೊ ಅಲ್ಲಿಗೆ ಅರ್ಜುನನ ರಥವನ್ನೆಸೆಯುವೆ. ಹಾಗಲ್ಲದಿದ್ದರೆ, ವಿರಹದಿಂದ ಪರಿತಪಿಸುತ್ತಿರುವ ಮಹಾಲಕ್ಷ್ಮಿಯೊಂದಿಗೆ ಶ್ರೀಹರಿಯು ಸೇರುವಂತೆ ಕ್ಷೀರ ಸಾಗರಕ್ಕೆ ಎಸೆಯುವೆ! ಸಮುದ್ರವನ್ನು ಹಾರಿದ ಪ್ರತಾಪಕ್ಕೆ ಅಹಂಕಾರಪಡಬೇಡ. ಸೂರ್ಯನುಹೊಳೆಯುವಾಗ ಚಂದ್ರನೆಲ್ಲಿ ಪ್ರಕಾಶಿಸುವನು? ಮೂಜಗದಲ್ಲಿ ನನ್ನೆದುರು ನಿಲ್ಲುವ ಶೂರರಿರುವರೇ?'

'ಅಯ್ಯಾ, ನಾನು ತಮ್ಮನ್ನು ತಾವು ಹೊಗಳಿಕೊಳ್ಳುವ ಈಗಿನವರಂತಲ್ಲ! ನಾನು ವೃದ್ಧ' ಎಂಬ ಆಂಜನೇಯನ ಮಾತಿಗೆ, ಆ ಮೂವರನ್ನೂ ಉದ್ದೇಶಿಸಿ ವೀರವರ್ಮನು,

'ನೀವು ತ್ರಿಲೋಕಶೂರರು, ನಾನು ಒಬ್ಬಂಟಿ. ನೀವು ಒಬ್ಬೊಬ್ಬರಾಗಿ ಕಾದಿದರೆ, ನನ್ನ ಪರಾಕ್ರಮವನ್ನು ನೋಡಬಹುದು' ಎಂದು ಹೇಳುತ್ತ ಮುಂಗೈನಿಂದ ಹೊಡೆದ ಏಟಿಗೆ ಅಂಜನೇಯನು ಹಿಮ್ಮೆಟ್ಟಿದನು. ಕೃಷ್ಣನು ಆತನ ವಕ್ಷಸ್ಥಳಕ್ಕೆ ಒದ್ದನು. ಹರಿಯ ಪದ ಘಾತಿಗೆ ಮೂರ್ಛಿತನಾಗಿ ಭೂಮಿಗೆಬಿದ್ದ ವೀರವರ್ಮನು ಚೇತರಿಸಿಕೊಂಡೆದ್ದು,

'ನನಗೆ ಶ್ರೀಕೃಷ್ಣನ ದರ್ಶನವಾಗದ ಹೊರತು ಮರಣವಿಲ್ಲವೆಂದು ಯಮನ ವರವಿದೆ. ಶ್ರೀಕೃಷ್ಣನ ಪಾದಗಳು ಸ್ಪರ್ಶಿಸಿದುದರಿಂದ ನನಗಿನ್ನೆಲ್ಲಿಯ ಮರಣ!' ಎಂದು ಉತ್ಸಾಹದಿಂದ ನುಡಿದು ಮತ್ತೆ ಅವರೆದುರು ಯುದ್ಧಕ್ಕೆನಿಂತನು. ಆತನನ್ನು ಕರುಣಾ ದೃಷ್ಟಿಯಿಂದ ನೋಡುತ್ತ ಶ್ರೀಕೃಷ್ಣನು ಅರ್ಜುನನಿಗೆ ಹೇಳಿದನು:

'ಎಲೈ ಪಾರ್ಥ ನಾನು ನೀನು ಕೂಡಿ ಸಾವಿರವರ್ಷ ಕಾದಾಡಿದರೂ ಇವನು ಸೋಲುವುದಿಲ್ಲ! ಇವನನ್ನು ಯುದ್ಧಮಾಡದೆ ಆನಂದಪಡಿಸುತ್ತೇನೆ!'

'ಎಲೈ ದೇವ, ನೀನು ಯಾರನ್ನು ಮೆಚ್ಚುವೆಯೊ ಅವನೇ ವಿಜಯಶಾಲಿ ಯಾಗುವುದು! ಇನ್ನು ಯುದ್ಧವೇತಕ್ಕೆ?'

ಅಜುನನ ನುಡಿಕೇಳಿ, ಅವನನ್ನು ಅಭಿವಂದಿಸಿ, ಹೊಗಳಿ ಬೆರಳಾಡಿಸುತ್ತ ವೀರವರ್ಮನು,

'ಎಲೈ ಧನಂಜಯನೇ, ಬಾಹುಬಲದಿಂದ ಪ್ರಪಂಚವನ್ನು ಗೆಲ್ಲುವೆ ಎಂಬ ಅಹಂಕಾರವನ್ನು ಬಿಡು. ಶ್ರೀಕೃಷ್ಣನಮಾತಿಗೆ ನೀನುಒಪ್ಪಿದ್ದು ನನಗೆ ಸಂತೋಷವನ್ನುಂಟುಮಾಡಿದೆ. ಯುದ್ಧಮಾಡುವ ಛಲ ನನ್ನಲ್ಲಿಇನ್ನಿಲ್ಲ' ಎಂದು ಕೈಯಲ್ಲಿದ್ದ ಬಿಲ್ಲನ್ನು ಕೆಳಗಿರಿಸಿದನು. ಸ್ನೇಹಭಾವದಲ್ಲಿ ನಲಿವಿನಿಂದ ಶ್ರೀಕೃಷ್ಣನಿಗೆ ನಮಸ್ಕರಿಸಿದನು. ಶ್ರೀಕೃಷ್ಣನು ಬಿಗಿದಪ್ಪಿಕೊಂಡನು. ಅರ್ಜುನನು ಆದರಿಸಿದನು. ಪಾಂಡವ ಸೇನೆಯ ಮಯೂರಧ್ವಜ ಮುಂತಾದ ವೀರರು

ನಮ್ರ ಭಾವದಲ್ಲಿ ವಂದಿಸಿದರು.ಯಮಧರ್ಮರಾಯನು ಯುದ್ಧಭೂಮಿಗೆ ಬಂದು ತನ್ನ ಮಾವ ವೀರವರ್ಮನನ್ನು ಶ್ರೀಕೃಷ್ಣನಿಗೆ ಒಪ್ಪಿಸಿದನು. ಅರ್ಜುನಾದಿಗಳು ವಂದಿಸಲು ಅವರನ್ನು ಆಶೀರ್ವದಿಸಿ ತನ್ನ ಪಟ್ಟಣಕ್ಕೆ ಹೋದನು.

ವೀರವರ್ಮನು ತನ್ನ ತನುಮನ ದೇಶಕೋಶಗಳನ್ನು ಶ್ರೀಕೃಷ್ಣನಿಗೆ ಬಳುವಳಿಯಾಗಿ ನೀಡಿದನು. ಎರಡುಕುದುರೆಗಳನ್ನು ಅವನ ಕೈಗಿತ್ತನು. ಭಕ್ತಿಯಿಂದ ಆದರಿಸಿದನು. ಎಲ್ಲರನ್ನೂ ಸತ್ಕರಿಸಿ, ತನ್ನ ರಾಜ್ಯದಲ್ಲಿ ಆರುದಿನಗಳವರೆಗೆ ಇರಿಸಿಕೊಂಡಿದ್ದನು. ಅನಂತರ ಅರ್ಜುನನೊಡನೆ ಯಜ್ಞಾಶ್ವಗಳ ರಕ್ಷಣೆಗೆ ಹೊರಟನು.

# ಚಂದ್ರಹಾಸ

ಜನಮೇಜಯರಾಯನೇ ಕೇಳು, ಯಜ್ಞಾಶ್ವಗಳು ಹೇಮಂತ ಶಿಶಿರ ಋತುಗಳಲ್ಲಿ ನಾನಾದೇಶಗಳನ್ನೂ, ಅರಣ್ಯಗಳನ್ನೂ, ಚಿಕ್ಕದೊಡ್ಡ ನದಿಗಳನ್ನೂ ದಾಟುತ್ತ ಮುಂದುವರಿದುವು. ಮಾಗಿಯಲ್ಲಿ ಹಿಮಪ್ರವಾಹವಾಗಿ ಹರಿಯುತ್ತ, ಸೂರ್ಯನು ಚಂದ್ರನಂತೆ ತಂಪಾಗಿದ್ದನು. ಮೋಹದಿಂದಕೂಡುತ್ತಿದ್ದ ದಂಪತಿಗಳ ಮುನಿಸು ಮಾಯವಾಗಿತ್ತು. ಕುದುರೆಗಳು ಕಾಣದಂತೆ ಮಾಯವಾಗಿದ್ದವು. ಬೆಂಗಾವಲಿಗಿದ್ದ ಮಹಾ ವೀರರು ಎಷ್ಟುಹುಡುಕಿದರೂ ಕುದುರೆಗಳುಸಿಕ್ಕಲಿಲ್ಲ. ಅರ್ಜುನನಬಳಿಗೆ ಬಂದು ಕುದುರೆಗಳು ಎಲ್ಲಿಯೋಹೊರಟುಹೋಗಿವೆ. ಮುಂದೇನುಮಾಡಬೇಕು ಎಂದರು.

ಅರ್ಜುನನು ಶ್ರೀಕೃಷ್ಣನಮುಖ ನೋಡುವಷ್ಟರಲ್ಲಿ ಆಕಾಶದಲ್ಲಿ ಎರಡನೆಯ ಸೂರ್ಯತೇಜಸ್ಸೆಂಬಂತೆ ಒಂದುಪ್ರಕಾಶ ಕಂಗೊಳಿಸಿತು. ಕೆಂಜೆಡೆ, ಸುಲಿಪಲ್ಲು, ನಾರುಮಡಿ ಕೃಷ್ಣಾಜಿನಗಳಿಂದಕೂಡಿ, ತುಳಸಿಮಾಲೆಧರಿಸಿ, ವೀಣೆಯನ್ನು ಬಾರಿಸಿಕೊಂಡು ಕಮಲನಾಭವಿಷ್ಣುವಿನ ಧ್ಯಾನದಲ್ಲಿ ಬ್ರಹ್ಮತೇಜೋಮಯನಾಗಿ ನಾರದಮುನೀಶ್ವರನು ಗೋಚರಿಸಿದನು. ಆತನನ್ನು ಶ್ರೀಕೃಷ್ಣನೇ ಮೊದಲಾದ ರಾಜರು ಭಕ್ತಿಯಿಂದ ಪೂಜಿಸಿದರು. ಸಮಸ್ತಲೋಕಸ್ಥಿತಿಯನ್ನು ಬಲ್ಲ ಆತನನ್ನು ಅರ್ಜುನನು ವಿನಯಪೂರ್ವಕವಾಗಿ ಕೇಳಿಕೊಂಡನು.

'ಎಲೈ ಋಷಿವರ್ಯನೇ, ನನ್ನ ಕುದುರೆಗಳು ಎಲ್ಲಿಹೋದುವು? ಇಲ್ಲಿ ವೀರರಾದರಾಜರು ಇಲ್ಲ ಅಲ್ಲವೇ? ತಮಗೆ ತಿಳಿದಿರುವುದನ್ನು ಹೇಳಿ'.

'ಅಯ್ಯಾ, ನಿನ್ನ ಮನೋಹರವಾದ ಕುದುರೆಗಳು ಕುಂತಳಪುರಕ್ಕೆ ಹೋಗಿವೆ. ಅಲ್ಲಿಯ ದೊರೆಚಂದ್ರಹಾಸನು ನಿನ್ನಕುದುರೆಗಳನ್ನು ಕಟ್ಟಿಹಾಕಿದ್ದಾನೆ'.

'ಗುರುಗಳೇ, ಚಂದ್ರಹಾಸ ಅಷ್ಟು ಸಾಹಸಿಯೆ?'

'ಅಪ್ಪಾ, ನೀನು ಇದುವರೆಗೆಗೆದ್ದ ದೊರೆಗಳು ಚಂದ್ರಹಾಸನ ಪರಾಕ್ರಮದ ಹದಿನಾರರಲ್ಲಿ ಒಂದು ಭಾಗಕ್ಕೂ ಸಮವಲ್ಲ! ಅವನು ಮಹಾಶೂರ, ಅವನ ಚರಿತ್ರೆ ಅತಿವಿಚಿತ್ರ'.

ಆ ಸಾಹಸಿಯ ಕಥೆಕೇಳಲು ಕುತೂಹಲಗೊಂಡ ಅರ್ಜುನನು ಕಣ್ಣರಳಿಸಿ,

'ಅಂತಹ ಮಹಾತ್ಮನ ಕಥೆಯನ್ನು ವಿಸ್ತರಿಸಿ ಹೇಳಿ' ಎಂದು ಪ್ರಾರ್ಥಿಸಿದನು. ನಾರದನು ಚಂದ್ರಹಾಸನ ಕಥೆಯನ್ನು ಹೇಳಿದನು.

* * *

ಅರ್ಜುನನೇ, ಹೇಳುವೆನು ಕೇಳು, ಕೇರಳರಾಜ್ಯದಲ್ಲಿ ಮೇಧಾವಿ ಎಂಬ ರಾಜನಿದ್ದನು. ಆತ ಗುಣಸಂಪನ್ನನೂ, ಬಲಯುತನೂ ಆಗಿದ್ದನು. ಆ ದೊರೆಗೆ ಅವನರಾಣಿಯಲ್ಲಿ ಸುಲಕ್ಷಣದ ಸುಕುಮಾರನು ಹುಟ್ಟಿದನು. ಮಗುವಿನ ಎಡಗಾಲಿನಲ್ಲಿ ಆರುಬೆರಳಿದ್ದು ಅದು ಮೂಲಾನಕ್ಷತ್ರದ ಅರಿಷ್ಟಾಂಶದಲ್ಲಿ ಹುಟ್ಟಿತ್ತು. ಪುತ್ರೋತ್ಸವ ನಡೆದ ಕೆಲವುದಿನಗಳಲ್ಲಿ ಆ ರಾಜ್ಯದ ಮೇಲೆ ವೈರಿಗಳ ದಾಳಿ ನಡೆಯಿತು. ಶತ್ರು ಸೈನ್ಯದೊಡನೆ ಹೋರಾಡಿ ರಾಜ ಮೇಧಾವಿ ಸತ್ತುಹೋದನು. ಪತಿವ್ರತೆಯಾದ ಆತನ ಹೆಂಡತಿ ಸಹಗಮನವಾದಳು. ಶತ್ರುಗಳು ಆ ರಾಜ್ಯವನ್ನು ಆಳತೊಡಗಿದರು.

ಓರ್ವ ನಿಷ್ಠಾವಂತ ದಾದಿಯು ಆ ಮಗುವನ್ನು ತೆಗೆದುಕೊಂಡು ಊರೂರು ಸುತ್ತುತ್ತ ಕುಂತಳಪುರಕ್ಕೆ ಹೋದಳು. ಭಿಕ್ಷೆಬೇಡಿ ಮಗುವನ್ನು ಪೊರೆದಳು. ಹಾಲಿಲ್ಲದೆ. ತೊಟ್ಟಿಲಿಲ್ಲದೆ, ಚಿನ್ನದ ತೊಡುಗೆ ಇಲ್ಲದೆ, ಮುದ್ದಿಸಿನಲಿವ ತಾಯಿತಂದೆ ಇಲ್ಲದೆ, ಇರಲು ಮನೆಯಿಲ್ಲದೆ ಮಗು ಬೆಳೆಯುವಂತಾದ ಅದರ ವಿಧಿಯನ್ನು ನೆನೆದು ಆಕೆ ತುಂಬಾ ದುಃಖಿಸಿದಳು. ಮೊಳೆವಹಲ್ಲು, ಒಸರುವಜೊಲ್ಲು, ದಟ್ಟಡಿ, ತೊದಲನುಡಿ, ಹೊಳೆವ ಕಣ್ಣು, ಕನ್ನಡಿಯಂತಿರುವ ಕೆನ್ನೆ, ಹಣೆಯಲ್ಲಿ ಶೋಭಿಸುವ ಮುಂಗುರುಳು, ಹೊಳೆಹೊಳೆವ ಸುಂದರ ನಗೆಮೊಗ, ಮೃದುತೋಳು, ಸುಳಿನಾಭಿ, ದುಂಡು ತೊಡೆಯ ಸುಂದರ ಶಿಶು ಧೂಳಿನಲ್ಲಿ ಆಡುವುದನ್ನು ನೋಡಿ ನಲಿಯುವ; ಒಲಿದು ಆಡಿಸುವ ತಂದೆ ತಾಯಿ, ಪ್ರೀತಿ ಪಾತ್ರರು ಇಲ್ಲವಲ್ಲ ಎಂದು ಆಕೆ ತುಂಬಾ ಮರುಗಿದಳು. ಅದನ್ನು ಮುದ್ದುಮಾಡಿ ಅದರ ಮುಗ್ಧನಗೆಯಲ್ಲಿ ತನ್ನ ಬಾಳಿನ ಸುಖ ಕಂಡಳು. ಮಗು ನಡೆ ನುಡಿ ಕಲಿಯುತ್ತಿದ್ದಂತೆ ಅವಳು ರೋಗ ಪೀಡಿತಳಾಗಿ ಸತ್ತುಹೋದಳು.

ಅನಂತರ ಆ ಮಗು ಆ ಪುರದಜನರ ಕರುಣೆಗೆ ಪಾತ್ರವಾಗಿ, ಪರಪುಟ್ಟನಾಗಿ ಬೆಳೆಯಿತು. ಪರದೇಶಿಯಾಗಿನಿಂತ ಆ ಮಗುವನ್ನು ಕಂಡ ಪುರದವಮಾತೆಯರು ಮುದ್ದಿನಿಂದ ಮನೆಗೆ ಕರೆದುಕೊಂಡು ಹೋಗಿ ಮುದ್ದುಮಾಡುತ್ತಿದ್ದರು. ತಿಂಡಿ ತಿನಿಸುಗಳನ್ನು ನೀಡಿ ಅವನ ಮಧುರನುಡಿ ಕೇಳಿ ಸಂತೋಷಪಡುತ್ತಿದ್ದರು. ಅವನ ರೂಪು ಕಂಡು ತಬ್ಬಿ ಮನೆಗೆ ಕೊಂಡೋಯ್ದ ವೇಶ್ಯೆಯರು ಅವನ ಮೈಗೆ ಸುಗಂಧವನ್ನು ತೀಡಿ, ತಿಲಕವಿಟ್ಟು, ಕಂಪಿಡಿದ ಹೂ ಮುಡಿಸಿ ನಲಿಯುತ್ತಿದ್ದರು.

ಅವನು ತನ್ನ ಓರಗೆಯ ಮಕ್ಕಳೊಡನೆ ಒಂದಾಗಿ ಆಡಿ ಪಾಡಿ ನೆಲದ ಲೀಲೆಯ ಭಾಗವಾಗಿ ಹೋದನು. ಆಟ ಆಡುವಾಗ ಪುಣ್ಯವಶದಿಂದ ಅವನಿಗೆ ಒಂದು ಸಾಲಿಗ್ರಾಮ ಸಿಕ್ಕಿತು. ಪುಟ್ಟದಾಗಿ, ಗುಂಡಾಗಿ ಸುಂದರವಾಗಿರುವ ಅದನ್ನು ಅವನು ಗೋಲಿಯೆಂದು ತಿಳಿದು ಆಟ ಆಡುತ್ತಿದ್ದ. ಅದನ್ನು ಇಡಲು ಮನೆಯಿಲ್ಲದ್ದರಿಂದ ಬಾಯಿಯಲ್ಲಿಯೇ ಮುಚ್ಚಿಟ್ಟುಕೊಂಡಿರುತ್ತಿದ್ದ.

ಆಡಾಡುತ್ತ ಐದು ವರ್ಷದ ಬಾಲಕನಾಗಿ ಹೋದ. ಒಮ್ಮೆ ಕುಂತಳ ರಾಜ್ಯದ ಮಂತ್ರಿ ದುಷ್ಟಬುದ್ದಿಯು ಬ್ರಾಹ್ಮಣರಿಗೆ ಭೋಜನವನ್ನೇರ್ಪಡಿಸಿದನು. ಸತ್ಕಾರ ಹೊಂದಿ ಆಶೀರ್ವಾದ ಮಾಡುತ್ತ ಕುಳಿತಿದ್ದ ವಿಪ್ರರು, ಹುಡುಗರ ಜೊತೆ ಆಡುತ್ತ ಬಂದ ಆ ಬಾಲಕನ ಸುಂದರರೂಪ ಕಂಡರು. ಅವನ ಅಂಗಗಳಲ್ಲಿ ರಾಜಲಕ್ಷಣಗಳಿರುವುದನ್ನು ಕಂಡು ಆಶ್ಚರ್ಯಪಟ್ಟರು. ತುಂಬು ಪ್ರೀತಿಯಿಂದ ದುಷ್ಟಬುದ್ದಿಯನ್ನು ಕೇಳಿದರು,

'ಇವನು ಯಾವ ರಾಜನಮಗ? ಎಲ್ಲಿಂದ ಬಂದಿದ್ದಾನೆ?'

'ಇವನು ಎಲ್ಲಿಂದಬಂದ, ಯಾರಮಗ ಎಂದು ಗೊತ್ತಿಲ್ಲ. ಇವನಂತೆ ಅನಾಥಮಕ್ಕಳು ಈ ರಾಜ್ಯದಲ್ಲಿ ಸಾಕಷ್ಟಿರುವರು. ರಾಜ ಕಾರ್ಯದಲ್ಲಿರುವ ನಮಗೇಕೆ ಇದರ ಚಿಂತೆ?'

'ರಾಜಲಕ್ಷಣವಿರುವ ಈ ಬಾಲಕ ನಮ್ಮ ಕುಂತಳರಾಜ್ಯಕ್ಕೆ ಎಂದಿದ್ದರೂ ರಾಜನಾಗುತ್ತಾನೆ.'

ಆಳವಾದ ಮಡುವು ಕ್ರೂರಮೊಸಳೆಗಳನ್ನು ಒಳಗಿರಿಸಿಕೊಂಡು ಮೇಲೆ ನಿರ್ಮಲವಾಗಿ ಹೊಳೆಯುವಂತೆ–ದುಷ್ಟಬುದ್ಧಿ ಹೊರಗೆ ಅತಿ ವಿನಯವಂತನಾಗಿದ್ದ. ಬ್ರಾಹ್ಮಣರಮಾತಿಗೆ ಸಮ್ಮತಿಸಿದಹಾಗೆ ನಟಿಸಿದ.

ಈ ಕುಂತಳ ರಾಜನಿಗೆ ಮಕ್ಕಳಿಲ್ಲ. ಈ ಬಾಲಕ ರಾಜನಾಗುವನೆಂಬ ವಿಪ್ರರ ಮಾತು ಸುಳ್ಳಾಗುವುದಿಲ್ಲ. ಹಾಗಾದಾಗ ತನ್ನ ಮಕ್ಕಳಿಗೆ ದೊರಕಬೇಕಾದ ಸಂಪದ್ಭರಿತ ರಾಜ್ಯ ಕೈ ತಪ್ಪಿ ಹೋಗುವುದು ಎಂದು ದುಷ್ಟಬುದ್ಧಿ ವ್ಯಾಕುಲಗೊಂಡ. ಒಂದು ಕೆಟ್ಟ ಉಪಾಯವನ್ನು ಯೋಚಿಸಿದ. ಗುಟ್ಟಾಗಿ ಕಟುಕರನ್ನು ಕರೆದು ಆಜ್ಞೆ ಮಾಡಿದ:

'ಅರಣ್ಯ ಮಧ್ಯದಲ್ಲಿ ಈ ಮಗುವನ್ನು ಕೊಂದು, ಏನಾದರೂ ಗುರುತು ತಂದುಕೊಡಿ'

ಹೆಗಲಲ್ಲಿ ಕುಳ್ಳಿರಿಸಿಕೊಂಡು ಸಾಗುತ್ತಿದ್ದ ಕಟುಕರಲ್ಲಿ ಬಾಲಕನು–ಪಾಪಿಗಳ ಹೃದಯದಲ್ಲಿರುವ ಪರಮಾತ್ಮನಂತೆ, ಯಮದೂತರು ಎಳೆತಂದ ಅಜಾಮಿಳನಂತೆ, ಕಾಗೆಗಳ ಗುಂಪಿನಲ್ಲಿ ಸಿಕ್ಕಿಕೊಂಡಿರುವ ಕೋಗಿಲೆಯಂತೆ, ಅಂಧಕಾರದಲ್ಲಿರುವ ಚಂದ್ರನಂತಿದ್ದನು. ಅವನು ಬಹಳ ಹೆದರಿಕೊಂಡು; ಬಾಯಲ್ಲಿರುವ ಸಾಲಿಗ್ರಾಮದ ಮಹಿಮೆಯಿಂದ ಮುರಹರ, ಕಮಲಾಕ್ಷ, ಗರುಡಗಮನ ಕಾಪಾಡು ಎಂದು ಕೂಗಿಕೊಂಡ. ಕಟುಕರಹೃದಯ ಕರಗಿತು. ಬಾಲಕನನ್ನು ಅರಣ್ಯ ಮಧ್ಯದಲ್ಲಿರಿಸಿ ನಿಟ್ಟುಸಿರಿಟ್ಟರು. ದುಷ್ಟಬುದ್ಧಿಯನ್ನು ನಿಂದಿಸಿದರು. ನಿರ್ದೋಷಿ ಮುಗ್ಧ ಮಗುವನ್ನು ಕೊಲ್ಲಲು ಅಳುಕಿದರು. ಕರುಣೆಯಿಂದ ಅವರ ಮನಸ್ಸು ಕರಗಿತು. ನೋಡುತ್ತಾ ನೋಡುತ್ತಾ ಆ ಬಾಲಕನ ಎಡಗಾಲಿನಲ್ಲಿದ್ದ ಆರನೇಬೆರಳನ್ನು ಕತ್ತರಿಸಿ ಗುರುತಾಗಿ ತೆಗೆದುಕೊಂಡರು. ದುಷ್ಟಬುದ್ಧಿಗೆ ತೋರಿಸಿದರು. ಅವನಿಂದ ಸತ್ಕಾರಗೊಂಡರು.

**ಕರುಬರಿದ್ದೂರಿಗಿಂತ ಕಾಡೊಳಿತು**

ಕಾಡಿನಲ್ಲಿ ಮಗು ಹರಿಧ್ಯಾನ ಮಾಡುತ್ತ ಅಳುತ್ತಿರಲು ಕಾಡಿನ ಪಶುಪಕ್ಷಿಗಳು ಮರುಗಿ ಹತ್ತಿರ ಬಂದುವು. ಹೊಟ್ಟೆಕಿಚ್ಚಿನ ಮನುಷ್ಯರಿರುವ ಊರಿಗಿಂತ ಕಾಡು ಒಳ್ಳೆಯದು ಎನಿಸುವಂತೆ ನವಿಲುಗಳು ಬಂದು ಗರಿಗೆದರಿ ಕೊಡೆಹಿಡಿದವು. ಹಂಸಗಳು ಗಾಳಿಬೀಸಿದವು. ಸಾರಸಗಳು ನೀರಿನಲ್ಲಿ ಮುಳುಗುಹಾಕಿ ರೆಕ್ಕೆಗಳನ್ನು ನೆನೆಸಿಕೊಂಡು ಬಂದು ನೀರನ್ನುಸಿಂಪಡಿಸಿದುವು. ಗಿಳಿಗಳು ಮೆಲ್ನುಡಿಯಿಂದ ಸಂತೈಸಿದುವು. ಬೀಸಿದಗಾಳಿಗೆ ಭೋರೆಂದು ಶಬ್ದ ಮಾಡುವ ಮರಗಿಡಗಳೊಡನೆ ವನದೇವತೆಯು ಗೋಳಾಡಿದಳು.

ದಿನಪತಿ ಸೂರ್ಯನ ಉಪಟಳ ತಾಳಲಾರದೆ ನೆಲೆಗೆಟ್ಟು ಹೋದ ಕತ್ತಲೆಯು ತಪಸಿದ್ಧಿಯಿಂದ ವಿವಿಧ ರೂಪ ತಾಳಿ, ವೈರಿ ಹಗಲನ್ನು ಓಡಿಸಲು ಬರುತ್ತಿರುವುದೋ ಎಂಬಂತೆ – ಕಪ್ಪಾದ ಮೈಯ್ಯ ಬೇಟೆಗಾರರ ಗುಂಪು ನುಗ್ಗಿಬಂದಿತು. ಅಬ್ಬರಿಸಿ ಕೂಗು ಹಾಕುತ್ತ ಪ್ರಾಣಿಗಳನ್ನು ಕೊಲ್ಲುವ ಯಮದೂತರಂತೆ ಅವರು ಬರುತ್ತಿದ್ದರು. ತಮ್ಮೊಡನೆ ನಾಯಿಗಳನ್ನು ಹಗ್ಗದಲ್ಲಿ ಕಟ್ಟಿಕೊಂಡು ಬಂದು; ಅರಣ್ಯದ ಪೊದರನ್ನು ಹುಡುಕುತ್ತ, ಪ್ರಾಣಿಗಳನ್ನು ಗುರಿ ತಪ್ಪದ ಬಾಣಗಳಿಂದ ಹೊಡೆದು ಕೆಡವುತ್ತಿದ್ದರು. ಅವರ ಜೊತೆಗೆ ಬಂದ ಸಿಂಹದಂತಿರುವ ಸಣ್ಣನಡುವಿನ, ಆನೆಯಕುಂಭದಂತಿರುವ ಮೊಲೆಗಳ, ಚಮರೀಮೃಗದ ಬಾಲದಂತಿರುವ ಜಡೆಯ ಬೇಡತಿಯರು–ಬೇಟೆಯಾಡಲು ಬಿಲ್ಲು ಬಾಣಗಳೇಕೆ? ನಮ್ಮಲ್ಲೇ ಹುಬ್ಬೆಂಬಬಿಲ್ಲು, ಮಿಂಚಿನಂತೆ ಹೊಳೆಯುವ ಕುಡಿನೋಟವೆಂಬ ಬಾಣ ಇದೆ ಎಂದು ಸರಸವಾಡುತ್ತಿದ್ದರು.

ಹಂದಿಕೆದರಿದ ನೆಲ, ಆನೆಕಲುಕಿದ ಕೊಳ, ಹುಲಿ ತಿಂದುಬಿಟ್ಟ ಹುಲ್ಲೆಯ ತಲೆ, ಸಿಂಹಸಿಗಿದ ಆನೆಯ ನೆತ್ತಿಯಿಂದುದುರಿದ ಮುತ್ತು, ಕಾಡುಕೋಣ ಮೈಯುಜ್ಜಿಕೊಂಡ

ಮರದ ತಿಗುಡು ಎಂದು ಬೇಡರು ಮೃಗಗಳನ್ನು ಹುಡುಕುತ್ತ ಓಡಾಡಿದರು. ಹೆಜ್ಜೆ ಗುರುತು, ನಡಿ, ತಡೆ, ಎಸಿ, ಹೊಡಿ, ಹಿಡಿ, ಮರಹತ್ತು, ನಾಯಿ ಬಿಡು, ಧೈರ್ಯಗೆಡಬೇಡ ಎಂದು ಅಡಿಗಡಿಗೆ ಹೊಸತು ಕಂಡಂತೆ ಅಬ್ಬರಿಸುವ ಅವರ ಮಾತುಗಳು ಕಾಡಿನ ಭಯಂಕರತೆಯನ್ನು ಹೆಚ್ಚಿಸಿದುವು. ಸಿಡಿ ಗುಂಡು, ಬೀಸು ಬಲೆ, ಬೀಸು ದೊಣ್ಣೆ, ಬಡಿಗೋಲು, ಕವಣೆ ಕಲ್ಲುಗಳಿಂದ ಜಡಿದು, ಆರ್ಭಟಿಸಿ ಮೃಗ ಪಕ್ಷಿಗಳನ್ನು ಬೇಟೆಯಾಡಿದರು.

ಪೊದರಿನಿಂದ ಹೊರಬಂದ ಹುಲಿಗೆ ಹೆದರಿ, ಅದರ ಎಡ ಬಲ ನಿಂತ ಇಬ್ಬರು ಸರಿಸಮನಾಗಿ ಬಾಣಬಿಡಲು–ಅದು ಹುಲಿಯನ್ನು ಕೊಂದು ಮುನ್ನುಗ್ಗಿ ಅವರಿಬ್ಬರಿಗೂತಗಲಿ ಸತ್ತರು. ಲೋಕದಲ್ಲಿ ಒಂದೇ ವಸ್ತುವಿಗೆ ಇಬ್ಬರು ಆಸೆಪಟ್ಟರೆ ದುಃಖ ಉಂಟಾಗದೆ ಸುಖವಾಗುತ್ತದೆಯೇ?

ಬೇಡರ ಗುಂಪು ಹುಲಿ, ಆನೆ, ಕೊಕ್ಕರೆ, ನವಿಲು ಮೊದಲಾದ ಮೃಗ ಪಕ್ಷಿಗಳನ್ನು ಬೇಟೆಯಾಡುತ್ತಿರಲು; ಒಂದು ಹುಲ್ಲೆ ಅವರ ದೊರೆ ಕುಳಿಂದನಿಗೆ ಸಿಗದೆ ಓಡಿತು. ಕುಳಿಂದ ದುಷ್ಟಬುದ್ಧಿಯ ಅಪ್ಪಣೆಯಂತೆ ಕಾಡು ಪ್ರದೇಶವನ್ನೊಳಗೊಂಡ ರಾಜ್ಯಕ್ಕೆ ರಾಜನಾಗಿ ಚಂದನಾವತಿ ಎಂಬ ಪಟ್ಟಣದಲ್ಲಿದ್ದನು. ಅವನು ಕುದುರೆ ಏರಿ ಅದರ ಬೆನ್ನಟ್ಟಿ ಹೋದನು.

**ಕುಳಿಂದನ ಮಗನಾದ ಚಂದ್ರಹಾಸ**

ಹರಿಣವನ್ನು ಬೆನ್ನತ್ತಿದ ಕುಳಿಂದಕನು ಹರಿಧ್ಯಾನದಲ್ಲಿರುವ ಮಗುವನ್ನು ಕಂಡು ಕುದುರೆಯನ್ನು ನಿಲ್ಲಿಸಿದನು. ಮೃಗವನ್ನು ಕೊಲ್ಲಲು ಬಂದವನು ಮಗುವನ್ನು ಕಂಡು ತುಂಬಾ ಸಂತೋಷಗೊಂಡನು! ಕುದುರೆಯಿಂದಿಳಿದು ಮಗುವನ್ನು ಬಾಚಿ ತಬ್ಬಿ ಕೊಂಡನು! ಕಣ್ಣೀರು ಒರೆಸಿ ಸಮಾಧಾನ ಮಾಡಿ, ಚರ್ಮದ ಚೀಲದಲ್ಲಿದ್ದ ನೀರಿನಿಂದ ಎಡಗಾಲಿನ ರಕ್ತ ತೊಳೆದನು. ತಂದೆ ತಾಯಿಯನ್ನೂ, ಒಡಹುಟ್ಟಿದವರನ್ನೂ ನೆನೆಯದೆ ಶ್ರೀಕೃಷ್ಣನನ್ನು ಧ್ಯಾನಿಸುತ್ತಿರುವುದರಿಂದ ಇದಕ್ಕೆ ಅಚ್ಯುತನೇ ಒಡೆಯ ಎಂದು ತಿಳಿದನು. ಇವನೇ ನನ್ನಮಗ ದತ್ತುಪುತ್ರ ಎಂದು ಹರ್ಷಚಿತ್ತನಾದನು. ಚಂದ್ರನಂತೆ ಹೊಳೆಯುತ್ತಿರುವ ಆ ಮಗುವನ್ನು ಕರೆದುಕೊಂಡು ಪರಿಜನರೊಡನೆ ಚಂದನಾವತಿಗೆ ಹೊರಟನು.

ಆಳುಗಳು ಮುಂದಾಗಿಹೋಗಿ ನಗರವನ್ನು ಅಲಂಕರಿಸಿದ್ದರು. ಅರಮನೆ ಪ್ರವೇಶಿಸುತ್ತಿದ್ದಂತೆ ಆತನ ರಾಣಿ ಮೇಧಾವಿನಿಯು ಮಗುವನ್ನೆತ್ತಿಕೊಂಡು ಮುದ್ದಾಡಿದಳು. ತನ್ನ ಬಂಜೆತನ ಹೋಯಿತು. ತಾನು ಪುತ್ರವತಿಯಾದೆ ಎಂದು ಹಿರಿಹಿರಿ ಹಿಗ್ಗಿದಳು. ಕುಳಿಂದನು ಬ್ರಾಹ್ಮಣರನ್ನು ಕರೆಸಿ ಮಗುವಿಗೆ ನಾಮಕರಣ ಮಾಡಿಸಿದನು. ಅವರು ಮಗುವಿನ ಉತ್ತರೋತ್ತರ ಅಭಿವೃದ್ಧಿಯನ್ನು ತಿಳಿದು, ಚಂದ್ರನನ್ನು ಹಾಸ್ಯ ಮಾಡಿ ನಗುವಂತಹ ಪ್ರಕಾಶಮಾನವನ್ನು ಹೊಂದಿದಂತಹ ಅದರ ಮುಖ ಕಮಲವನ್ನು ನೋಡಿ ಚಂದ್ರಹಾಸ ಎಂದು ಹೆಸರಿಟ್ಟರು. ಕತ್ತಲೆಯ ಮನೆಗೆ ಮಣಿದೀಪವಾದಂತೆ ಚಂದ್ರಹಾಸನು ಕುಳಿಂದನಿಗೆ ಉತ್ತಮ ಮಗನಾದನು.

'ಎಲೈ ನಾರದ ಮುನಿಯೇ, ವಿಷ್ಣುಭಕ್ತ ಧ್ರುವನು ನಭದಲ್ಲಿ, ತಾತ ಭೀಷ್ಮನು ಸ್ವರ್ಗದಲ್ಲಿ, ವಿಭೀಷಣನು ಲಂಕೆಯಲ್ಲಿ, ಬಲಿ ಚಕ್ರವರ್ತಿ ಪಾತಾಳದಲ್ಲಿದ್ದು ಅವರನ್ನು ಯಾರು ತಾನೇ ನೋಡಲು ಸಾಧ್ಯ? ಚಂದ್ರಹಾಸನಿಂದ ಈ ಪ್ರಪಂಚ ಪಾವನವಾಗುತ್ತಿದೆ. ಆತನನ್ನು ದರ್ಶನ ಮಾಡಬೇಕೆಂದು ಮನಸ್ಸು ಉತ್ಸಾಹಗೊಳ್ಳುತ್ತಿದೆ. ಆತನ ಕಥೆಯನ್ನು ವಿವರಿಸಿ ಹೇಳು.'

ಎಲೈ ಅರ್ಜುನನೇ ಕೇಳು. ಚಂದ್ರಹಾಸನು ಕುಳಿಂದನ ಮನೆಯಲ್ಲಿ ನಗುನಗುತ್ತ ಬೆಳೆಯುತ್ತಿದ್ದಂತೆ, ಉತ್ತಮ ಮಳೆಬೆಳೆಯಾಗಿ ಚಂದನಾವತಿಯ ಸಿರಿ ಹೆಚ್ಚಿತು. ವಿಮಲ ಗುಣಶೀಲರಾಗಿ ಪ್ರಜೆಗಳು ಸಾತ್ವಿಕರಾದರು. ಕುಳಿಂದನು ಅವನಿಗೆ ಎಂಟು ವರ್ಷವಾಗುತ್ತಿದ್ದಂತೆ ಉಪನಯನಮಾಡಿ ಸಂತಸಗೊಂಡನು. ಗುರುಗಳ ಮೂಲಕ ಶಾಸ್ತ್ರ ಸಿದ್ಧಾಂತಗಳನ್ನೂ, ರಾಜನಿಗೆ ಅವಶ್ಯಕವಾದ ಧನುರ್ವಿದ್ಯೆಯನ್ನೂ, ಆನೆ, ಕುದುರೆ ಸವಾರಿಗಳನ್ನೂ ಕಲಿಸಿದನು.

ಚಂದ್ರಹಾಸನು ಸದಾ ಹರಿಧ್ಯಾನದಲ್ಲಿದ್ದು, ಪೂಜೆ ಏಕಾದಶಿ ಉಪವಾಸ ವ್ರತಗಳಲ್ಲಿ ನಿರತನಾಗಿದ್ದನು. ಅವನು ಭಕ್ತಿಯೆಂಬ ಚಾಪಕ್ಕೆ, ಸತ್ವಗುಣವನ್ನು ಹೆದೆಯಾಗಿ ಕಟ್ಟಿ, ವಿವೇಕವೆಂಬ ಸುಜ್ಞಾನವನ್ನು ಬಾಣವಾಗಿ ಹೂಡಿ ಶ್ರೀಹರಿಗೆ ಲಕ್ಷ್ಯವಾಗಿಟ್ಟು ಹೊಡೆದು ಭಕ್ತಿಸಾಧನೆಗೈದನು. ಪರಮ ಭಾಗವತನಾಗಿ ಬೆಳಗಿದನು.

ಹದಿನಾರನೆಯ ವರ್ಷದಲ್ಲಿ ಪ್ರಬಲ ಬಲನಾಗಿ ಯುದ್ಧಭಟರೊಡಗೂಡಿ, ತನ್ನ ತಂದೆ ಕುಳಿಂದನನ್ನು ಪ್ರತಿಭಟಿಸುತ್ತಿದ್ದ ಸಾಮಂತರನ್ನು ಘಾತಿಸಿದನು. ಎಂಟು ದಿಕ್ಕುಗಳಲ್ಲಿಯೂ ತಮ್ಮ ರಾಜ್ಯವನ್ನು ವಿಸ್ತರಿಸಿ ಶರಣಾಗತ ದೊರೆಗಳ ಅಮೂಲ್ಯ ವಸ್ತುಗಳನ್ನು ಚಂದನಾವತಿಗೆ ಸಾಗಿಸಿ ದಿಗ್ವಿಜಯ ಮಾಡಿದನು. ಕುಳಿಂದನು ಪಟ್ಟಣವನ್ನು ಸಿಂಗರಿಸಿ, ಮಂಗಳವಾದ್ಯಗಳೊಡನೆ, ಅಂಗನಾಮಣಿಯರಿಂದ ಆರತಿಬೆಳಗಿಸಿ ಇದಿರ್ಗೊಂಡನು.

ಚಂದ್ರಹಾಸನು ಪುರದ ವೀಧಿಯಲ್ಲಿ ಬರುತ್ತಿರಲು–ವಿಶಾಲಾಕ್ಷಿಯರಾದ ಸ್ತ್ರೀಯರು ಅವನ ಸೌಂದರ್ಯವನ್ನು ನೋಡುವ ಕಡೆಗಣ್ಣಿನ ಕುಡಿನೋಟದ ಕಾಂತಿಯ ಅಲೆಯೊಡನೆ–ಹೂಗಳನ್ನು ಚೆಲ್ಲಿದರು. ಅವನು ತಂದೆ ತಾಯಿಗಳೇ ತನಗೆ ಸಾಕ್ಷಾತ್ ಲಕ್ಷ್ಮೀನಾರಾಯಣರೆಂದು ಭಾವಿಸಿ ನಮಸ್ಕರಿಸಲು ಕುಳಿಂದ ಮೇಧಾವಿನಿಯರು ಬರಸೆಳೆದು ಅಪ್ಪಿಕೊಂಡರು.

**ರಾಜ ಚಂದ್ರಹಾಸ**

ಹರ್ಷಿತನಾದ ಕುಳಿಂದನು ಶುಭ ಮುಹೂರ್ತದಲ್ಲಿ ಮಗ ಚಂದ್ರಹಾಸನಿಗೆ ರಾಜ್ಯವನ್ನಿತ್ತು ಪಟ್ಟ ಕಟ್ಟಿದನು. ಚಂದನಾವತಿಯ ಸೌಭಾಗ್ಯ ಅಭಿವರ್ಧಿಸಿತು. ದಶಮಿಯಲ್ಲಿ ವಿಷ್ಣು ಪೂಜೆ ಮಾಡಿ, ಏಕಾದಶಿಯಲ್ಲಿ ಉಪವಾಸ ವ್ರತದಿಂದ ಜಾಗರಣೆ ಮಾಡಿ, ಮರುದಿನ ದ್ವಾದಶಿಯಲ್ಲಿ ಮಾಧವನ ಪೂಜೆ ಮಾಡಿ, ಅನಂತರ ಊಟ ಮಾಡುವ ವಿಷ್ಣು ಭಕ್ತಿಯು–ಚಂದ್ರಹಾಸನ ಪ್ರೀತಿಯ ಆಜ್ಞೆಯಿಂದ ರಾಜ್ಯದ ಜನಗಳಲ್ಲಿ ಒಂದಾಗಿ ಹೋಯಿತು. ಚಂದ್ರಹಾಸನು ತನ್ನ ದೃಢ ಭಕ್ತಿಯಿಂದ ಪ್ರಹ್ಲಾದನೂ, ನಿಶ್ಚಲ ಧ್ಯಾನದಿಂದ ಧೃವನೂ, ಸತ್ವದಿಂದ ಬಲಿಯೂ, ಶಾಂತಿಗುಣದಿಂದ ವಿಭೀಷಣನೂ ಭಕ್ತಿಯೆಂಬ ಬಿರುದಿನಲ್ಲಿ ರುಕ್ಮಾಂಗದನೂ, ಕೀರ್ತಿಯಿಂದ ಪುಂಡರೀಕನೂ ಆಗಿದ್ದನು.

ಅರ್ಜುನನೇ ಕೇಳು. ಚಂದ್ರಹಾಸನು ಸೌಂದರ್ಯದಲ್ಲಿ ಮನ್ಮಥನನ್ನೂ, ನಾರಿಯರನ್ನೂ; ಅಮಿತ ಪ್ರತಾಪದಲ್ಲಿ ಸೂರ್ಯನನ್ನೂ; ಕೀರ್ತಿಯಿಂದ ಚಂದ್ರನನ್ನೂ, ನಕ್ಷತ್ರಗಳನ್ನೂ; ಶ್ರೀಹರಿಯ ಭಕ್ತಿಯಲ್ಲಿ ಗರುಡನನ್ನೂ, ಸನಕಾದಿ ಮುನಿಗಳನ್ನೂ ಮೀರಿಸುತ್ತಿದ್ದನು ಎಂದಾಗ ಉಳಿದ ಕುತ್ಸಿತ ಮಾನವರು ಅವನಿಗೆ ಸರಿಸಮಾನರೇ?

ಹೀಗೆ ರಾಜ್ಯದಲ್ಲಿ ಸುಖ, ಶಾಂತಿ, ನೆಮ್ಮದಿ ನೆಲೆಸಿರಲು ಕುಳಿಂದನು ಚಂದ್ರಹಾಸನನ್ನು ಕರೆದು, ಹೇಳಿದನು:

'ಎಲೈ ಮಗನೇ, ಪ್ರಸಿದ್ಧ ರಾಜಧಾನಿ ಕುಂತಳವು ಇಲ್ಲಿಗೆ ಆರುಗಾವುದ ದೂರದಲ್ಲಿದೆ. ನಮ್ಮ ರಾಜ್ಯ ಆ ನಗರವನ್ನಾಳುವ ದೊರೆಗೆ ಸೇರಿದ್ದು. ಆ ರಾಜನ ಮುಖ್ಯಮಂತ್ರಿ ದುಷ್ಟಬುದ್ಧಿಯೆಂಬುವನು ನಮಗೆ ಒಡೆಯ. ನಮ್ಮ ರಾಜ್ಯದಲ್ಲಿ ಹುಟ್ಟುವಳಿಯಾದ ಆದಾಯದಲ್ಲಿ ನಿಗದಿಯಾದ ಪೊಗದಿಯನ್ನು ಆ ರಾಜನಿಗೆ ಕೊಡಬೇಕು.

'ರಾಜನ ಪೊಗದಿ, ಮಂತ್ರಿಗೆ ಸಲ್ಲಿಸಬೇಕಾದ ಹತ್ತುಸಾವಿರ ವರಹಗಳನ್ನು; ರಾಣಿಗೆ, ರಾಜ ಪುರೋಹಿತ ಗಾಲವರಿಗೆ ಆದರಿಸಿ ಕೊಡುವ ಹಣವನ್ನು ಒಟ್ಟುಗೂಡಿಸಿ ಕಳುಹಿಸು. ಮೈ ಮರೆತು ಅಪಾಯಕ್ಕೆ ಎಡೆಗೊಡಬೇಡ.'

ತಂದೆಯ ಮಾತಿನಂತೆ ಚಂದ್ರಹಾಸನು ಅವುಗಳೆಲ್ಲವನ್ನೂ ನೂರುಬಂಡಿ, ನೂರು ಒಂಟೆ, ನೂರುಆನೆಗಳ ಮೇಲೆ ಏರಿಸಿ, ತನಗೆ ನಂಬಿಕೆಯುಳ್ಳವರನ್ನು ಬೆಂಗಾವಲಾಗಿ ನೇಮಿಸಿ ಕಳುಹಿಸಿದನು. ಆ ದೂತರು ಕುಂತಳ ನಗರಕ್ಕೆ ಬಂದು, ಹತ್ತಿರದ ಸರೋವರದಲ್ಲಿ ಸ್ನಾನಮಾಡಿ ಶ್ರೀಹರಿಯನ್ನು ಪೂಜಿಸಿದರು. ಶುಚಿರ್ಭೂತರಾಗಿ ಸಂಧ್ಯಾಕಾಲದಲ್ಲಿ ಪಟ್ಟಣವನ್ನು ಪ್ರವೇಶಿಸಿದರು. ಹಣೆಯಲ್ಲಿ ನಾಮವನ್ನು ಧರಿಸಿ ಶುಭ್ರವಸನವನ್ನುಟ್ಟು, ತುಳಸಿಮಾಲೆಗಳನ್ನು ಕೊರಳಲ್ಲಿಧರಿಸಿ ಸಾತ್ವಿಕಭಾವದಲ್ಲಿರುವ ಚಂದ್ರಹಾಸನ ಸೇವಕರು ಮಂತ್ರಿ ದುಷ್ಟಬುದ್ಧಿಯ ಮುಂದೆ ನಿಂತರು. ಅವರನ್ನು ಕಂಡು ಅನುಮಾನಕ್ಕೊಳಗಾದ ಮಂತ್ರಿ ಕೇಳಿದನು,

'ಅಯ್ಯೋ, ಸಂಜೆಯಲ್ಲಿ ಸ್ನಾನವೇ? ಕುಳಿಂದ ಬದುಕಿರುವನೇ?'

'ಸ್ವಾಮೀ, ಪಾಪರಾಶಿಯನ್ನು ನಾಶಮಾಡುವ ಏಕಾದಶೀವ್ರತಾಚರಣೆಗಾಗಿ ಸ್ನಾನ ಮಾಡಿದೆವು. ರಾಜ ಕುಳಿಂದನು ಕ್ಷೇಮದಿಂದಿರುವನು. ಅವನ ಮಗ ಚಂದ್ರಹಾಸ ಈಗ ರಾಜ್ಯವಾಳುತ್ತಿರುವನು. ಅವನ ಅಪ್ಪಣೆಯಂತೆ ಶುಕ್ಲಪಕ್ಷ ಕೃಷ್ಣಪಕ್ಷಗಳ ದಶಮಿಗಳಲ್ಲಿ ಪೂಜಾದಿ ಉತ್ಸವಗಳು ನಡೆಯುತ್ತಿವೆ. ಅವನು ಶಾಂತಚಿತ್ತನಾಗಿದ್ದು, ಹರಿಭಕ್ತಿ ನಿರತನಾಗಿ ಧರ್ಮದಿಂದ ಪ್ರಜೆಗಳನ್ನು ಪಾಲಿಸುತ್ತಿದ್ದಾನೆ.'

'ಇದೆಂತಹ ಆಶ್ಚರ್ಯ! ಕುಳಿಂದನಿಗೆ ಮಗ ಹುಟ್ಟಿದನೇ? ಅವನ ಹೆಂಡತಿ ಬಂಜೆಯಲ್ಲವೆ?'

'ಸ್ವಾಮಿಯೇ, ನಮ್ಮ ಮಾತು ಸುಳ್ಳಲ್ಲ. ಕುಳಿಂದನು ಬೇಟೆಯಾಡುವಾಗ ಕಾಡಿನ ಮಧ್ಯದಲ್ಲಿ ಅನಾಥ ಮಗು ಸಿಕ್ಕಲು, ಅದನ್ನು ಮಗನಂತೆ ಪ್ರೀತಿಯಿಂದ ಸಾಕಿದನು. ಚಂದ್ರಹಾಸನೆಂದು ಹೆಸರಿಟ್ಟನು!'

ಆಳುಗಳ ಮಾತನ್ನು ಕೇಳಿ ದುಷ್ಟಬುದ್ಧಿ ವಿಸ್ಮಿತನಾದನು. ಕಾಡಿನಲ್ಲಿ ಮಗುವನ್ನು ಕೊಂದುಬನ್ನಿ ಎಂದು ಆಜ್ಞೆ ಮಾಡಿದರೆ ಕಟುಕರು ಪ್ರಾಣಉಳಿಸಿದ್ದಾರೆ ಎಂದು ಮನಸ್ಸಿನಲ್ಲಿ ದ್ವೇಷದಿಂದ ಕುದಿದು ಹೋದನು. ಹೊರಗೆ ಕರುಣಾಳುವಂತೆ ದೂತರನ್ನು ಮರ್ಯಾದೆಯಿಂದ ಆದರಿಸಿದನು. ಚಂದ್ರಹಾಸನು ಕಳುಹಿಸಿದ ಅಮೂಲ್ಯ ವಸ್ತುಗಳನ್ನು ತನ್ನಮನೆಗೆ ತರಿಸಿಕೊಂಡನು.

ಚಂದ್ರಹಾಸನ ಕಡೆಯವರು ಉಪವಾಸವಿರಬಾರದೆಂದು ಷಡ್ರಸೋಪೇತವಾದ ಅಡಿಗೆಮಾಡಿಸಿ ಉಣಹೇಳಿದರೆ ಅವರು ಬೇಡವೆಂದರು. ಕೋಪಗೊಂಡ ದುಷ್ಟಬುದ್ಧಿಯು, ಕುಳಿಂದ ಮೊದಲಿನಂತಿಲ್ಲ. ಅವನಿಗಿಂತ ಅವನ ದೂತರು ಹೆಚ್ಚು ಗರ್ವಿತರಾಗಿದ್ದಾರೆ.

ಅವರನ್ನು ಸೆರೆಯಲ್ಲಿಡಿಸುವೆ ಎಂದನು. ದೂತರು ಅತಿವಿನಯದಿಂದ ಏಕಾದಶೀವ್ರತದ ಕಾರಣ ಊಟ ಮಾಡಲಿಲ್ಲ ಹೊರತು ಅಹಂಕಾರದಿಂದಲ್ಲ ಎಂದು ಹೇಳಿ ಮಂತ್ರಿಯನ್ನು ಸಮಾಧಾನಪಡಿಸಿದರು. ಮಾರನೇ ದ್ವಾದಶಿಯ ದಿನ ಸುಖ ಭೋಜನ ಮಾಡಿ, ದುಷ್ಟಬುದ್ಧಿಯಿಂದ ಸನ್ಮಾನಿತರಾಗಿ ಹಿಂದಿರುಗಿದರು.

**ಎತ್ತ ಬಲ್ಲರ್ ಸುಜನರ್ ಕಪಟಿಗಳ ಚಿತ್ತದೊಳ್ ಪುದುಗಿರ್ದ ಕುಹಕಮಂ**

ದುಷ್ಟಬುದ್ಧಿಯು ತಾನು ಊಹಿಸಿದ ಕೆಟ್ಟಆಲೋಚನೆಗೆ ಭಂಗವಾಗದಂತೆ ಕುಂತಳರಾಜನ ಅಪ್ಪಣೆ ಪಡೆದು, ರಾಜಕಾರ್ಯವನ್ನು ತನ್ನ ಮಗ ಮದನನಿಗೆ ವಹಿಸಿ ಹೊರಡಲನುವಾದನು. ಆಗ ಮನೋಹರವಾಗಿ ಬೆಳೆದು ನಯವಾದ ಸೌಂದರ್ಯದಲ್ಲಿ ಕಂಪೊಗೆಯುತ್ತ, ಕಡೆಗಣ್ಣ ನೋಟದ ಹೊಳಹನ್ನು ಉಕ್ಕಿಸುತ್ತ, ಕೆನ್ನೆಗಳಕಾಂತಿ ಮಿನುಗುತ್ತಿರಲು; ಮನ್ಮಥನ ಲೀಲೆಯ ವಿಹಾರ ಸ್ಥಳದಂತಹ ಪ್ರಾಯದ, ನಸು ಲಜ್ಜೆಯ, ನಗೆಮೊಗದ ಮಗಳು ವಿಷಯೆ– ಅಪ್ಪ ದುಷ್ಟಬುದ್ಧಿಯ ಬಳಿಗೆ ಬಂದಳು.

ಯೌವನೆಯಾದ ಮಗಳನ್ನು ಕಂಡು ದುಷ್ಟಬುದ್ಧಿಯು ಇನ್ನು ಇವಳಿಗೆ ವರನನ್ನು ಹುಡುಕಬೇಕೆಂದು ಮನಸ್ಸಿನಲ್ಲಿ ಚಿಂತಿಸಿದನು. ಮಗಳನ್ನು ವಾತ್ಸಲ್ಯದಿಂದ ತಬ್ಬಿಕೊಂಡು, ನಾಳೆ ನಿನ್ನ ಅಂತಃಪುರಕ್ಕೆ ಬರುವೆ ಹೋಗು ಎಂದನು. ವಿಷಯೆ ತಾನು ಉದ್ಯಾನದಲ್ಲಿ ನೀರುಹಾಕಿ ಬೆಳೆಸಿದ ಮಾವಿನಸಸಿ ಕಾಯಿಬಿಟ್ಟಿದ್ದು ವಸಂತೋತ್ಸವ ಮಾಡಿಸಲು ತಡವೇಕೆ ಮಾಡುತ್ತಿರುವೆ? ರಾಜ ಕಾರ್ಯದ ತೊಂದರೆ ಏನು? ಎಂದು ನಸುಲಜ್ಜೆಯಿಂದ ಕೇಳಲು; ಮದನನಿಗೆ ವಿಷಯೆಯ ಇಷ್ಟಾರ್ಥವನ್ನು ಪೂರೈಸಲು ಹೇಳಿದನು. ಆಪ್ತಜನರೊಡನೆ ಚಂದನಾವತಿಗೆ ಹೊರಟನು.

ಎಲೈ ರಿಪುಮಥನನಾದ ಅರ್ಜುನನೇ ಕೇಳು. ದುಷ್ಟಬುದ್ಧಿ ಪ್ರಯಾಣಿಸುತ್ತ ಕಾಡೆಲ್ಲ ನಾಡಾಗಿರುವುದನ್ನು ಕಂಡು ಮತ್ಸರಗೊಂಡನು. ಕುಳಿಂದನು ದುಷ್ಟಬುದ್ಧಿಯನ್ನು ವೈಭವ, ಸಂಭ್ರಮಗಳಿಂದ ಸತ್ಕರಿಸಿ ಕಪ್ಪ ಕಾಣಿಕೆಗಳನ್ನು ನೀಡಿದನು. ಮಗ ಚಂದ್ರಹಾಸನನ್ನು ತೋರಿಸಿ ಹೇಳಿದನು:

'ಸ್ವಾಮಿಯೇ, ನನ್ನ ಪೂರ್ವಜನ್ಮದ ತಪದ ಫಲದಿಂದ ಕಾಡಿನಲ್ಲಿ ತಾನಾಗಿಯೇ ಈ ಮಗ ನನಗೆ ಸಿಕ್ಕಿದನು. ಇವನನನ್ನು ಕೃಪೆಯಿಟ್ಟು ಕಾಪಾಡಿ.'

ನೃಪಲಕ್ಷಣದ ಚಂದ್ರಹಾಸನನ್ನು ಕಂಡು ಆಶ್ಚರ್ಯಚಕಿತನಾದ ದುಷ್ಟಬುದ್ಧಿಯು ಕಟುಕರು ತನಗೆ ಮೋಸ ಮಾಡಿದ್ದನ್ನು ನೆನೆದು ಮಮ್ಮಲ ಮರುಗಿದನು. ಹೊರಗೆ ಕಪಟನಗೆ ಬೀರಿ ಹೊಗಳುತ್ತ ವಿನಯದಿಂದ ನುಡಿದನು:

'ಎಲೈ ಕುಳಿಂದನೇ, ನಿನ್ನ ಮಗನನ್ನು ನೋಡಿ ಸಂತೋಷವಾಗಿದೆ.'

ಅವನು ಹೇಳಿದಮಾತು ಸರ್ಪದ ನಯದಂತೆಯೂ, ಹಳ್ಳ ಮುಚ್ಚಿ ಬೆಳೆದ ಹುಲ್ಲಿನಂತೆಯೂ, ಮೊಸಳೆಗಳ ಮಡುವಿನಲ್ಲಿರುವ ತಾವರೆಯಂತೆಯೂ, ಕತ್ತಿಯಅಂಚಿಗೆ ಲೇಪಿಸಿದ ಮಧುವಿನಂತೆಯೂ ಇತ್ತು. ಕಪಟಿಗಳ ಮನಸ್ಸಿನಲ್ಲಿ ಹುದುಗಿಕೊಂಡಿರುವ ಕುಹಕವನ್ನು ಸಜ್ಜನರು ತಿಳಿಯಲು ಹೇಗೆ ಸಾಧ್ಯ?

ದುಷ್ಟ ಬುದ್ಧಿಯು ಮನಸ್ಸಿನಲ್ಲಿ ಬ್ರಾಹ್ಮಣರು ತನಗೆ ಹೇಳಿದ್ದ ಸಂಗತಿಯನ್ನು ನೆನೆದನು. ತನ್ನ ಮಕ್ಕಳಿಗೆ ದೊರೆತನ ಸಿಗದಂತೆ ಕಂಟಕನಾಗಿ ವೈರಿ ಇವನೊಬ್ಬನಿರುವನಲ್ಲಾ ಎಂದು ತುಂಬಾ ಚಿಂತಿಸಿದನು. ಹುಣ್ಣಿಮೆ ಚಂದ್ರನ ಪ್ರಕಾಶ ಕುಗ್ಗಿಸಿ ತಾನೇ ಮೆರೆಯುವೆನು ಎಂದು

ಕತ್ತಲೆ ಪ್ರಯತ್ನಿಸಿದಂತೆ, ಚಂದ್ರಹಾಸನನ್ನು ಕೊಲ್ಲಿಸಿ ತಾನು ಬಾಳಬೇಕೆಂದು ದುಷ್ಟಬುದ್ಧಿ ಒಂದು ರಹಸ್ಯ ಪತ್ರ ಬರೆದನು. ಮುದ್ರೆಯೊತ್ತಿ ಭದ್ರ ಮಾಡಿದನು. ಚಂದ್ರಹಾಸನಿಗೆ ವೀಳೆಯನೀಡಿ ಮನ್ನಿಸಿ ತನ್ನ ಬಳಿ ಕುಳ್ಳರಿಸಿಕೊಂಡು ಹೇಳಿದನು:

'ಎಲೈ ಚಂದ್ರಹಾಸನೇ, ಇದು ರಹಸ್ಯವಾದ ರಾಜಕಾರ್ಯ. ನೀನೊಬ್ಬನೇ ಕುದುರೆಯನ್ನೇರಿ, ನಾಲ್ಕುಜನ ಸೇವಕರ ಜೊತೆಗೂಡಿ ರಾಜಧಾನಿ ಕುಂತಳಕ್ಕೆ ಹೋಗು. ನನ್ನ ಮಗ ಮದನನಿಗೆ ಯಾರೂ ಅರಿಯದಂತೆ ಈ ಪತ್ರವನ್ನು ಕೊಡು. ಈ ಕೆಲಸ ನಮ್ಮಿಬ್ಬರಲ್ಲಿಯೇ ಗೌಪ್ಯವಾಗಿರಲಿ.'

ರಹಸ್ಯ ಪತ್ರವನ್ನು ನೀಡಿದನು. ಆಪ್ತ ಗೌಪ್ಯ ಕಾರ್ಯಕ್ಕೆ ತನ್ನನ್ನು ನೇಮಿಸಿದುದಕ್ಕೆ ಸಂತೋಷಗೊಂಡ ಚಂದ್ರಹಾಸನು ಅವನಿಗೆ ನಮಸ್ಕರಿಸಿ ಬೀಳ್ಕೊಂಡನು. ತಾಯಿ ತಂದೆಗಳ ಬಳಿಗೆ ಬಂದು ಪಾದಕ್ಕೆರಗಿ ಆಶೀರ್ವಾದ ಪಡೆದನು. ತಾಯಿ ಮೇಧಾವಿನಿಯು ಹಣೆಗೆ ತಿಲಕವಿಟ್ಟು, ಸೇಸೆದಳಿದು, ಆರತಿಎತ್ತಿ ವೀಳೆಯಕೊಟ್ಟು ಹರಸಿದಳು:

'ಮಗನೇ, ನಿನಗೆ ಮಾರ್ಗದಲ್ಲಿ ಮಂಗಳವಾಗಲಿ. ನಿನ್ನನ್ನು ಶ್ರೀಹರಿ ಕಾಪಾಡಲಿ. ನೀನು ಅನುಕೂಲೆಯಾದ ಹೆಂಡತಿಯನ್ನು ಪಡೆದು ದೊರೆತನವನ್ನು ಸಂಪಾದಿಸು.'

ಚಂದ್ರಹಾಸನು ಮನೆಯಿಂದ ಹೊರಟುಬರುವಾಗ ಹರಿಶಿಣ ಕುಂಕುಮದಿಂದ ಶೋಭಿತರಾದ ನೂತನ ವಧುವರರನ್ನೂ, ಸದಾಕಾರದ ಇಬ್ಬರು ಬ್ರಾಹ್ಮಣರನ್ನೂ, ಕರುವಿನೊಡನಿರುವ ಹಸುವನ್ನೂ, ತನಗಾಗಿ ಫಲಪುಷ್ಪ ತಂದ ತೋಟಗಾರರನ್ನೂ ಕಂಡನು. ಶುಭ ಶಕುನಗಳೊಡನೆ ಪ್ರಯಾಣಿಸಿ ಕುಂತಳಪುರದ ಹೊರವಲಯದ ರಾಜ್ಯೋದ್ಯಾನಕ್ಕೆ ಬಂದನು.

ಆ ವನವು ಕೋಗಿಲೆಗಳ ಇಂಪಾದ ದನಿಯಿಂದ, ನರ್ತಿಸುವ ನವಿಲುಗಳಿಂದ, ಎಳೆಯ ಮಾವಿನ ಮರಗಳಿಂದ, ತಾವರೆ ನೈದಿಲೆಗಳ ಕೊಳಗಳಿಂದ ಕಂಗೊಳಿಸುತ್ತಿತ್ತು. ಅಲ್ಲಿ ಕುದುರೆಯನ್ನು ಕಟ್ಟಿ, ಸರೋವರದಲ್ಲಿ ಸ್ನಾನಮಾಡಿ, ಹರಿಯನ್ನು ಧ್ಯಾನಿಸಿ ತಾನು ತಂದಿದ್ದ ಬುತ್ತಿಯನ್ನುಂಡನು. ಒಂದು ಮಾವಿನಮರದ ನೆರಳಿನಲ್ಲಿ ವಿಶ್ರಮಿಸಿದಾಗ ತಣ್ಣೆಲರ ಸೋಂಕಿಗೆ ನಿದ್ದೆಹೋದನು.

ಎಲೈ ಅರ್ಜುನನೇ ಕೇಳು. ಆಗ ಆ ಉದ್ಯಾನವನಕ್ಕೆ ಜಲಕ್ರೀಡೆಗಾಗಿ ಕುಂತಳ ರಾಜನ ಮಗಳು ಚಂಪಕಮಾಲಿನಿ ಮತ್ತು ದುಷ್ಟಬುದ್ಧಿಯ ಮಗಳು ವಿಷಯೆ ಸಖಿಯ ರೊಡಗೂಡಿ ಬಂದರು. ಅವರು ಅರಗಿಳಿಯ ಮಾತುಗಳನ್ನಾಡುತ್ತ, ಕೃಷ್ಣ ಸರ್ಪದ ಜಡೆ, ಮದ್ದಾನೆಯ ನಡೆ, ತಾವರೆ ಕಣ್ಣು, ಸುವರ್ಣ ಕಲಶದಂತಹ ಸ್ತನಗಳು, ಚಂದ್ರನಂತಿರುವ ಮುಖವನ್ನು ಹೊಂದಿ, ಕನಕಾಭರಣಗಳನ್ನು ಧರಿಸಿ–ಮನ್ಮಥನ ಮಂತ್ರಾತಿದೇವತೆಗಳಂತೆ ಹೊಳೆಯುತ್ತಿದ್ದರು.

ಅವರು ಪ್ರಾಯದಉಬ್ಬಿನಲ್ಲಿ ಶೃಂಗಾರಚೇಷ್ಟೆಗಳಿಂದ, ತಮ್ಮ ಅವಯವಗಳ ಬೆಡಗಿನಿಂದ ಗಿಡಬಳ್ಳಿಗಳನ್ನು ಚಿಗುರಿಸಿ ಹೂಬಿಡುವಂತೆ ಮಾಡಿದರು! ಬಗೆಬಗೆಯ ಹೂಗಳನ್ನು ಕೊಯ್ದು ಆಯಾಸಗೊಂಡು ಮನ್ಮಥನ ಮದ್ದಾನೆಗಳಂತೆ ಗುಂಪು ಗುಂಪಾಗಿ ತಿಳಿನೀರಕೊಳಕ್ಕೆ ಇಳಿದರು. ಜೀರ್ಕೊಳವಿಗಳಲ್ಲಿ ನೀರು ತುಂಬಿಕೊಂಡು ವಸಂತೋತ್ಸವದ ಓಕುಳಿಯಂತೆ ಸರಸ ಸಲ್ಲಾಪದಲ್ಲಿ ಜಲಕೇಳಿಯಾಡಿದರು.

ಮೇಲಕ್ಕೆ ಹಾರಿ ತಲೆಕೆಳಗಾಗಿ ಬಿದ್ದರೂ–ಲಲನೆಯರ ಚಂಚಲ ಕಣ್ಣಿಗೆ

ಸರಿಸಾಟಿಯಾಗಲಾರೆವು–ಎಂದು ಮೀನುಗಳು ಆಳವಾದ ನೀರಿನಲ್ಲಿ ಅಡಗಿಕೊಂಡವು! ತರುಣಿಯರ ಮಂದನಡೆಗೆ ನಾಚಿ, ರಾಜಹಂಸಗಳು ಆಕಾಶಕ್ಕೆ ಹಾರಿದವು! ಸುಂದರಾಂಗಿಯರ ಕಣ್ಣಕಾಂತಿಗೆ, ನಡೆಯಬೆಡಗಿಗೆ ಸೋಲದವರಾರು ಎಂಬಂತಿತ್ತು ಅವರ ಜಲಕ್ರೀಡೆ.

ತಮ್ಮ ಮುಖಚಂದ್ರನ ಬೆಳದಿಂಗಳಿಗೆ–ಸರೋವರದ ಚಂದ್ರಕಾಂತ ಶಿಲೆಗಳು ದ್ರವಿಸಿ ನೀರು ತುಂಬಿಕೊಂಡು ತಮ್ಮ ಶರೀರವನ್ನು ತಂಪಾಗಿಸಲು ಸುದತಿಯರು ಹೊರಬಂದರು. ತನ್ನ ಪರಾಕ್ರಮದಿಂದ ಮೂರು ಲೋಕಗಳನ್ನು ಜಯಿಸಿದ ಮನ್ಮಥನು ತನ್ನ ಆಯುಧಗಳನ್ನು ಚೆನ್ನಾಗಿ ತೊಳೆದು ನಿಲ್ಲಿಸಿ, ಅವನ್ನು ಒರೆಯಲ್ಲಿಟ್ಟಂತೆ ಆ ಲಲನೆಯರ ಕೂದಲುಗಳು ಮುಡಿಯಿಂದ ಅಡಿಯವರೆಗೆ ಇಳಿಬಿದ್ದು ಪ್ರಕಾಶಿಸುತ್ತಿದ್ದವು!

ಕೋಮಲಾಂಗಿಯರು ತಮಗೊಪ್ಪುವ ಬಣ್ಣಬಣ್ಣದ ಸೀರೆಗಳನ್ನುಟ್ಟು, ಆಭರಣಗಳನ್ನು ತೊಟ್ಟು, ತಿಲಕವನ್ನಿಟ್ಟುಕೊಂಡು, ಹೂಮಾಲೆ ಮುಡಿದು ನಲಿಯುತ್ತಿದ್ದರು. ಚಂಪಕಮಾಲಿನಿ ಸಖಿಯರೊಡನೆ ವಿನೋದ ಲೀಲೆಯಲ್ಲಿರುವಾಗ ಹೂವು ಕೊಯ್ಯಬೇಕೆಂದು ವಿಷಯೆಯು ಒಬ್ಬಳೇ ಬೇರೆಡೆಗೆ ಹೋದಳು.

**ವರ್ಣ ಪಲ್ಲಟ**

ಮಾವಿನ ಮರದ ನೆರಳಿನಲ್ಲಿ ತೋಳನ್ನು ತಲೆದಿಂಬಾಗಿಟ್ಟುಕೊಂಡು ಸುಖದ ನಿದ್ರೆಯಲ್ಲಿದ್ದ ಚಂದ್ರಹಾಸನನ್ನು ಕಂಡಳು. ಮೂರುಲೋಕಗಳು ತನ್ನ ವಶವಾದ ಬಳಿಕ ಧಾವತಿಗೊಳ್ಳುವುದೇಕೆಂದು ಮನ್ಮಥನು ಮೈಮರೆದು ಮಲಗಿರುವನೋ ಎಂಬಂತೆ ನಿದ್ರಿಸುತ್ತಿರುವ ಚಂದ್ರಹಾಸನನ್ನು ಕಂಡು ವಿಸ್ಮಯಗೊಂಡಳು! ಇವನು ಮನುಷ್ಯನಲ್ಲ! ದೇವ, ಗಂಧರ್ವ, ಯಕ್ಷರಲ್ಲಿ ಯಾರೋ ಒಬ್ಬನು ಇವನಾಗಿರಬೇಕು! ಎಂದು ಅವನ ಸೌಂದರ್ಯವನ್ನು ತದೇಕ ಚಿತ್ತದಿಂದ ನೋಡಿದಳು. ರೂಪು ಲಾವಣ್ಯಕ್ಕೆ ಬೆರಗಾದಳು.

ನೂಪುರದ ಸದ್ದಾಗದಂತೆ ಹತ್ತಿರಹೋಗಿ ಮತ್ತೆ ಹಿಂದಕ್ಕೆ ಬಂದು; ಹೆಜ್ಜೆಯ ಮೇಲೆ ಹೆಜ್ಜೆಯಿಟ್ಟು ಮುಂದಕ್ಕೆ ಹೋಗಿ, ಧೈರ್ಯಸಾಲದೆ ಹಿಂದೆನಿಂತಳು. ಅವನನ್ನು ಮಾತಾಡಿಸಿ ಸಂತೋಷಪಡಬೇಕೆಂದು ಮನಸ್ಸಾಗಿ; ಹೆದರಿಕೊಂಡು, ಮತ್ತೆ ಮತ್ತೆ ನೋಡಿದಳು. ಕೊನೆಗೆ ಕಂಚುಕದ ತುದಿ ಸೆರಗಿನಲ್ಲಿ ಕಟ್ಟಿಕೊಂಡಿದ್ದ ಪತ್ರಿಕೆಯನ್ನು ನೋಡಿದಳು. ಎಚ್ಚರಿಕೆಯಿಂದ ಅದನ್ನು ತೆಗೆದುಕೊಂಡಳು. ಮುದ್ರೆಯನ್ನು ಬಿಚ್ಚಿ ಒಕ್ಕಣೆಯಲ್ಲಿ ತನ್ನ ತಂದೆಯ ಬರಹವನ್ನು ಕಂಡು ಲವಲವಿಕೆಯಿಂದ ಓದಿದಳು.

'ಶ್ರೀಮತ್ ಸಚಿವ ಶಿರೋಮಣಿ ದುಷ್ಟಬುದ್ಧಿ ಸುಪ್ರೇಮದಿಂದ ತನ್ನ ಮಗ ಮದನನಿಗೆ ಹರಸಿ ನೇಮಿಸಿದ ಕಾರ್ಯವೇನೆಂದರೆ,

ಈ ಚಂದ್ರಹಾಸನು ನಮಗೆ ಮಹಾಹಿತನು. ಅಲ್ಲದೆ ನಮ್ಮ ರಾಜ್ಯಕ್ಕೆ ದೊರೆಯಾಗುವನು. ಇವನು ಸಾಮಾನ್ಯನಲ್ಲ. ನಮ್ಮ ಸರ್ವಥಾ ಮಿತ್ರನಾಗುವನೆಂದು ನಿನ್ನ ಬಳಿಗೆ ಕಳುಹಿಸಿರುವೆನು. ಇದನ್ನು ಚೆನ್ನಾಗಿ ತಿಳಿದುಕೊ.

ಇವನ ಕುಲ, ಶೀಲ, ವಿದ್ಯೆ, ವಯಸ್ಸು, ಶೌರ್ಯಾದಿಗಳನ್ನು ನೋಡಿ ಕಾಲಹರಣ ಮಾಡದೆ ವಿಷವ ಮೋಹಿಸುವಂತೆ ಕೊಡುವುದು. ಅದರಿಂದ ನಮಗೆ ಉತ್ತರೋತ್ತರ ಅಭಿವೃದ್ಧಿಯಾಗುವುದು,

ದುಷ್ಟಬುದ್ಧಿಯು ಗೂಢವಾಗಿ ಚಂದ್ರಹಾಸನ ಬಗ್ಗೆ ದುರಭಿಪ್ರಾಯ ಸೂಚಿಸುವದಕ್ಕೆ–

ಮಹಾ ಅಹಿತ, ಮಹಾಶತ್ರು; ಸರ್ವಥಾಮಿತ್ರ, ಸರ್ವತಾ ಅಮಿತ್ರ, ವಿಷವ ಮೋಹಿಸುವಂತೆ ಕೊಡು, ಉಪಾಯಾಂತರದಿಂದ ವಿಷ ರುಚಿಸುವ ಹಾಗೆ ಕೊಡು–ಎಂಬರ್ಥದ ಪತ್ರವನ್ನು ಬರೆದಿದ್ದನು.

ಪತ್ರದಲ್ಲಿರುವ ಒಕ್ಕಣೆಗೆ ವಿಷಯೆಯು ಮತ್ತೊಂದು ಅಭಿಪ್ರಾಯವನ್ನು ಯೋಚಿಸಿದಳು. ವಿಧಿಯ ವಿಲಾಸವನ್ನು ಯಾರೂ ತಾನೇ ಮೀರಲು ಸಾಧ್ಯ!

ಈತನು ತಮಗೆ ಮಹಾಹಿತ, ಇವನಲ್ಲಿ ಕುಲ ಇತ್ಯಾದಿ ಹುಡುಕ ಬೇಡ. ಈತನು ಸರ್ವಥಾ ಮಿತ್ರನಾಗುವವನು. ಈತನಿಗೆ ವಿಷಯೆ ಮೋಹಿಸುವಂತೆ ಕೊಡು ಎಂದು ತಂದೆಯು ಅಣ್ಣ ಮದನನಿಗೆ ಬರೆದು ಕಳುಹಿಸಿದ ಪತ್ರ ಇದು. ಕೈ ತಪ್ಪಿನಿಂದ ವಿಷಯೆ ಬದಲಾಗಿ ವಿಷ ಎಂದು ಬರೆದಿರುವರು. ವರ್ಣಪಲ್ಲಟವಾಗಿದೆ ಎಂದು ಅವಳು ಭಾವಿಸಿದಳು. ತಪ್ಪು ತಿದ್ದದೆ ಹೋದರೆ ಕೆಲಸ ಕೆಡುವುದೆಂದು ಯೋಚಿಸಿದಳು. ಬಳಿಯಿರುವ ಮಾವಿನಮರದ ಅಂಟನ್ನು ತೆಗೆದುಕೊಂಡು ಕಿರುಬೆರಳ ತುದಿಯಿಂದ 'ವ' ಕಾರವನ್ನು 'ಯೆ'ಕಾರ ಮಾಡಿದಳು. ಮೊದಲಿನಂತೆ ಮುದ್ರೆಯನ್ನು ಅಳವಡಿಸಿ ಪತ್ರವನ್ನು ಕಂಚುಕದ ಸೆರಗಿಗೆ ಕಟ್ಟಿ ಮೆಲ್ಲನೆ ಹೊರಟಳು.

ಅವಳು ಮುಂದೆ ಸಾಗುತ್ತಿದ್ದರೂ ನೋಟ ಹಿಂದಿರುಗಲಿಲ್ಲ! ಮೈ ನಡೆದರೂ ಕಾಲುಗಳು ಹಿಂಜರಿದವು! ಮನ್ಮಥನಅಂಬು ಅವಳ ಮೈತುಂಬಿ ಮನಸ್ಸು ಅವನಲ್ಲೇ ನಟ್ಟು ಹೋಗಿತ್ತು! ಕೋಮಲದೇಹ ಕಂಗೆಟ್ಟು ಬಾಡಿತು! ಸಂಭ್ರಮ ಸಂಕಟಗಳಿಗೆ ಒಳಗಾದ ಮನಸ್ಸಿನಲ್ಲಿ ಸಖಿಯರಜೊತೆ ಸೇರಿಕೊಂಡಳು.

ವಿಷಯೆಯ ಮೂಖಭಾವ ಕಂಡ ಸಖಿಯರು – ಎಲೈ ಚಂಚಲಾಕ್ಷಿಯೇ, ಎಲ್ಲಿಗೆ ಹೋಗಿದ್ದೆ? ಏಕೆ ತಡವಾಗಿ ಬಂದೆ? ಮನಸ್ಸಿನಲ್ಲಿರುವುದೇನು? ಹರ್ಷಭಾವದೊಡನೆ ಬೆದರುತ್ತಿರುವುದೇಕೆ? ಗಾಳಿಯು ಸುವಾಸನೆಯುನ್ನು ಮುಚ್ಚಿಟ್ಟೀತೆ? ಶರೀರವು ಮನೋಭಾವವನ್ನು ಮರೆಮಾಚಲು ಸಾಧ್ಯವೇ? ಮನಸ್ಸು ಬಿಚ್ಚಿ ಮಾತಾಡಿದರೆ ಆಡು, ಬಿಟ್ಟರೆ ಬಿಡು–ಎಂದು ಹಾಸ್ಯವಾಡಿದರು.

ಚಂಪಕಮಾಲಿನಿಯೊಡಗೂಡಿ ಎಲ್ಲರೂ ಪುರಕ್ಕೆ ಬರುವಾಗ ದಾರಿಯುಲ್ಲಿ ಮಂಗಳವಾದ್ಯ ಸಮೇತ ಶೋಭನ ಹಾಡುಗಳೊಡನೆ ವಿವಾಹ ಮಹೋತ್ಸವದ ಸಂಭ್ರಮಗಳು ಎದುರುಗೊಂಡವು. ಚಂಪಕಮಾಲಿನಿ ಅರಮನೆ ಸೇರಲು, ವಿಷಯೆಯು ಶುಭಶಕುನದ ಪ್ರಕಾರ ತನಗೆ ಮದುವೆಯಾಗುವುದೆಂದು ಅಂತಃಪುರವನ್ನು ಸೇರಿದಳು. ವಿರಹತಾಪದಿಂದ ನಿದ್ರೆ ತೊರೆದು, ಊಟ ಮಾಡದೆ, ಮಾತಾಡದೆ, ಸಖಿಯರು ಶೈತ್ಯೋಪಚಾರ ಮಾಡಲು–ಸುಣ್ಣಕ್ಕೆ ನೀರು ಹೊಯ್ದಂತೆ ಕಾಮಪೀಡಿತಳಾಗಿ ಕುದಿಯ ತೊಡಗಿದಳು.

ಏಳು ಅಂತಸ್ತಿನ ಮೇಲುಪ್ಪರಿಗೆಯ ಚಂದ್ರ ಶಾಲೆಗೆ ಬಂದು ಗಲ್ಲಕ್ಕೆ ಕೈ ಆನಿಸಿ ಕುಳಿತಳು. ಅವಳ ವಿರಹ ವ್ಯಥೆ ಕಂಡ ಸಖಿಯರು ಅವಳ ಮನೋರಥ ಈಡೇರಿದರೆ ಪ್ರತಿವರ್ಷ ಗೌರಿಪೂಜೆ ಮಾಡುವುದಾಗಿ ಪಾರ್ವತಿಯನ್ನು ಪ್ರಾರ್ಥಿಸಿಕೊಂಡರು. ವಿಷಯೆಯೂ ಆ ದೇವಿಯಲ್ಲಿ ತನ್ನ ಮನೋರಥ ನೆರವೇರಿಸಲು ಬೇಡಿಕೊಂಡಳು. ಚಂದ್ರಶಾಲೆಯಲ್ಲಿ ನಿಂತು ಚಂದ್ರಹಾಸನು ಬರುವ ಮಾರ್ಗವನ್ನು ನಿರೀಕ್ಷಿಸುತ್ತಿದ್ದಳು.

* * *

**ಮದುವಣಿಗನಾದ ಚಂದ್ರಹಾಸ**

ಅರ್ಜುನನೇ ಕೇಳು. ಇತ್ತ ನಿದ್ದೆಯಿಂದ ಎಚ್ಚೆತ್ತ ಚಂದ್ರಹಾಸನು ಮುಖತೊಳೆದು ಕುದುರೆಗೆ ತಡಿಬಿಗಿದು, ಅನುಚರರೊಡನೆ ಕುಂತಳನಗರಕ್ಕೆ ಹೋಗುವಾಗ ಶುಭ ಶಕುನಗಳನ್ನು ಕಂಡನು.

ಕುಂತಳಪುರದ ದೊರೆ ಪುರೋಹಿತ ಗಾಲವನ ಉಪದೇಶವನ್ನು ಅನುಸರಿಸಿ ಸಚ್ಚಿದಾನಂದ ಸ್ವರೂಪಿ ಭಗವಂತನ ಧ್ಯಾನದಲ್ಲಿ ಚಿತ್ತವನ್ನು ನೆಲೆಗೊಳಿಸಿದ್ದನು. ಮಂತ್ರಿ ದುಷ್ಟಬುದ್ಧಿಗೆ ರಾಜ್ಯಭಾರವನ್ನೊಪ್ಪಿಸಿದ್ದನು. ಅಂದು ಮಂತ್ರಿಯಮಗ ಮದನನು ಒಡ್ಡೋಲಗದಲ್ಲಿದ್ದನು. ಅವನ ಆಸ್ಥಾನದಲ್ಲಿ ರಾಜರು, ಬ್ರಾಹ್ಮಣರು, ಗಣಕರು, ಪುರೋಹಿತರು, ಕವಿಗಳು, ಪಂಡಿತರು, ಗಮಕಿಗಳಿದ್ದರು. ಶ್ರೀಕೃಷ್ಣ ಚರಿತೆಯನ್ನು ಸೊಗಸಾಗಿ ಹಾಡುವ ಗಾಯಕರಿದ್ದರು. ಅದು ಇಂದ್ರನ ಆಸ್ಥಾನದಂತೆ ಮನೋಹರವಾಗಿತ್ತು.

ಚಂದ್ರಹಾಸನು ಅರಮನೆ ಪ್ರವೇಶಿಸುವಾಗ ದ್ವಾರಪಾಲಕನಿಗೆ ತಾನು ಬಂದಿರುವ ವಿಷಯ ತಿಳಿಸಿದನು. ಆತ ಆ ವಾರ್ತೆಯನ್ನು ಅಂತರಾಂತರವಾಗಿ ಎಚ್ಚರಿಸಿದ ಬಳಿಕ ಏಳನೆಯ ಬಾಗಿಲಿನಲ್ಲಿದ್ದ ವಿವೇಕನೆಂಬ ದ್ವಾರಪಾಲಕನು ತಾನು ಹಿಡಿದು ನಿಂತಿರುವ ಶ್ರದ್ಧಾಯಷ್ಟಿ ಎಂಬ ಬಿರುದು ಕೋಲಿನೊಡನೆ ಆಸ್ಥಾನಕ್ಕೆ ಬಂದನು. ಪರಾಕು ಹೇಳಿದನು. ಅನಂತರ ಶ್ರೀಕೃಷ್ಣನಭಕ್ತ ಚಂದ್ರಹಾಸನು ಬಂದಿರುವನೆಂದು ತಿಳಿಸಿದನು. ಮದನನು ಸಿಂಹಾಸನದಿಂದಿಳಿದು ಹೋಗಿ ಚಂದ್ರಹಾಸನನ್ನು ಇದಿರುಗೊಂಡನು. ಅಕ್ಕರೆಯಿಂದ ಆಲಂಗಿಸಿ ಕೊಂಡನು. ಸಭೆಗೆ ಕರೆತಂದು ಸಿಂಹಾಸನದಲ್ಲಿ ಕುಳ್ಳಿರಿಸಿದನು. ಕುಳಿಂದ ಮತ್ತು ಮೇಧಾವಿನಿಯರ ಕುಶಲ ಸಮಾಚಾರ ಕೇಳಿ, ರಾಜ್ಯದ ಏಳಿಗೆ ಕುರಿತು ವಿಚಾರಿಸಿದನು. ನಿನ್ನ ದರ್ಶನದಿಂದ ನಾನು ಕೃತಾರ್ಥನಾಗಿರುವೆನು. ನೀನು ಬಂದ ಕಾರ್ಯವೇನೆಂದು ಕೇಳಿದನು. ಚಂದ್ರಹಾಸನು ದುಷ್ಟಬುದ್ಧಿ ರಹಸ್ಯವಾಗಿ ನೀಡಿದ ಪತ್ರದ ವಿಷಯ ಹೇಳಿ, ದುಷ್ಟಬುದ್ಧಿಯ ಗುರುತಿನ ಮುದ್ರೆಯಿರುವ ಪತ್ರ ನೀಡಿದನು.

ಸಭಾಸದರನ್ನು ಅಲ್ಲಿಯೇ ಬಿಟ್ಟು ಮದನನು ತಮ್ಮನಾದ ಅಮಲನೊಡನೆ ಏಕಾಂತ ಭವನಕ್ಕೆ ಹೋದನು. ಅಲ್ಲಿ ಮುದ್ರೆಯೊಡೆದು ಪತ್ರವನ್ನು ಓದಿದನು. ತಿದ್ದಿ ಬರೆದ ಅಕ್ಷರದ ಗುರುತು ಹಿಡಿಯಲಾಗದೆ, ಸಂತೋಷ ಸಮುದ್ರದಲ್ಲಿ ಮುಳುಗಿ ಹೋದನು. ತಂದೆಯು ಕಳುಹಿಸಿಕೊಟ್ಟಿರುವ ಆಶೀರ್ವಾದ ಪತ್ರ ಉತ್ತಮವಾಗಿದೆ. ನನಗೆ ಈತ ಮಹಾಹಿತನಾಗಿ ರಾಜ್ಯಕ್ಕೆ ದೊರೆಯಾಗುವನು. ಸದಾಮಿತ್ರನಾಗಿರುವನು. ಇವನ ಕುಲ, ಆಚಾರ, ವಿಚಾರಿಸುತ್ತ ತಡಮಾಡದೆ ತಂಗಿ ವಿಷಯೆಯನ್ನು ಕೊಟ್ಟು ಮದುವೆ ಮಾಡಬೇಕು ಎಂದು ತೀರ್ಮಾನಿಸಿದನು.

ರಾಜಸಭೆಗೆ ಬಂದು ಜೋಯಿಸರನ್ನು ಕರೆಸಿ ವಧೂವರರ ರಾಶಿಕೂಟಗಳನ್ನು ನೋಡಿಸಿ, ಲಗ್ನದಮುಹೂರ್ತ ನಿಶ್ಚಯಿಸಿದನು. ಪಟ್ಟಣವನ್ನು ಅಲಂಕರಿಸಲು ಆಜ್ಞೆ ಮಾಡಿದನು. ಮದುವೆಗೆ ಬೇಕಾದ ಎಲ್ಲಾ ಅವಶ್ಯ ವಸ್ತುಗಳನ್ನು ತರಿಸಿ, ಕುಂತಲನಗರದ ಮಧ್ಯದಲ್ಲಿ ಮನೋಹರವಾದ ರತ್ನಖಚಿತ ವಿವಾಹ ಮಂಟಪವನ್ನು ಕಟ್ಟಿಸಿದನು. ಶುಭ ಮುಹೂರ್ತದಲ್ಲಿ ಬ್ರಾಹ್ಮಣರಿಂದ ವಿವಾಹದ ಶಾಸ್ತ್ರೋಕ್ತ ಕಾರ್ಯಗಳನ್ನು ಮಾಡಿಸಿದನು. ಮುತ್ತೈದೆಯರು ಚಂದ್ರಹಾಸನಿಗೆ ಮಂಗಳ ಮಜ್ಜನ ಮಾಡಿಸಿ ಅಲಂಕರಿಸಿದರು. ದೇವಪುರದ ಲಕ್ಷ್ಮೀರಮಣನ ಕೃಪೆಯಿಂದ ವಿಷವು ಅಮೃತವಾಗುವುದು

ಆಶ್ಚರ್ಯವೇ ಎಂಬಂತೆ, ಕುಳಿಂದಪುತ್ರ ಚಂದ್ರಹಾಸನು ಬಾಸಿಂಗವನ್ನು ಕಟ್ಟಿಕೊಂಡು ಮದುವಣಿಗನಾದನು!.

* * *

ಇಂದ್ರನ ಮಗನಾದ ಅರ್ಜುನನೇ ಕೇಳು. ತಂಪಾದ ಪಚ್ಚಕರ್ಪೂರದ ಪುಡಿಯನ್ನು ಮೈಗೆ ಲೇಪಿಸಿದರೆ, ಚಂದನವನ್ನು ಚೆನ್ನಾಗಿತೇದು ಗಂಧವನ್ನು ಮೊಲೆಗಳಿಗೆ ದಟ್ಟವಾಗಿ ಸವರಿದರೆ, ಸುವಾಸನೆಯಿಂದೊಡಗೂಡಿದ ತಣ್ಣನೆಯ ಪನ್ನೀರನ್ನು ಕಣ್ಣೆವೆಗಳಿಗೆ ಹಚ್ಚಿದರೆ ಅವುಗಳಿಂದ ವಿಷಯೆಯ ವಿರಹದುರಿ ಹೆಚ್ಚುತ್ತಿತ್ತೇ ಹೊರತು ಸ್ವಲ್ಪವೂ ತಣ್ಣಗಾಗುತ್ತಿರಲಿಲ್ಲ. ಮನ್ಮಥನಉರಿಯಲ್ಲಿ ಹೊರಳಾಡುತ್ತಿದ್ದ ಅವಳಿಗೆ ಓರ್ವ ಆಪ್ತಸಖಿ ಬಂದು ಶುಭಸೂಚಕ ವಾರ್ತೆಯನ್ನು ಹೇಳಿದಳು.

'ಎಲೈ ವಿಷಯೆಯೇ, ನಿನ್ನ ಅಂತರಂಗದಬಯಕೆ ಕೈಗೂಡಿದೆ. ಇನ್ನು ಚಿಂತೆಯನ್ನು ಬಿಡು. ಚಂದ್ರಹಾಸನು ಮನ್ಮಥ ಸಮನಾಗಿರುವನು.'

'ಹೌದು. ಆತ ನನ್ನಕಾಮ. ಹೇಳು ಸಖಿ.'

'ನೀನು ಪೂರ್ವಜನ್ಮದಲ್ಲಿ ಎಷ್ಟು ಪುಣ್ಯ ಮಾಡಿದ್ದೆಯೋ, ಏನೋ! ನಿಮ್ಮ ತಂದೆ ಕಳುಹಿಸಿರುವ ಪತ್ರವನ್ನು ಓದಿದ ನಿಮ್ಮಣ್ಣ ಮದನನು, ನಿನ್ನನ್ನು ಚಂದ್ರಹಾಸನಿಗೆ ಕೊಟ್ಟು ಮದುವೆ ಮಾಡುವನು.'

ಆ ನುಡಿ ಕೇಳುತ್ತಿದ್ದಂತೆ ಕಟ್ಟಿದ ಹಗ್ಗ ಬಿಚ್ಚಿದ ಜಿಂಕೆಯಹಾಗೆ ವಿಷಯೆ ಉಲ್ಲಸಿತಳಾಗಿ ನಲಿದಾಡಿದಳು. ನಾಚಿ ನೆಲಕೆರೆಯುತ್ತ ನಿಂತಳು. ಅಷ್ಟರಲ್ಲಿ ಅವಳ ತಾಯಿ ಕಳುಹಿಸಿದ ದಾದಿಯರು ಬಂದು ಮಂಗಳಸ್ನಾನ ಮಾಡಿಸಲು ಮಜ್ಜನ ಶಾಲೆಗೆ ಕರೆದೊಯ್ದರು. ಹೊನ್ನಿನ ಕಲಶದಂತಿರುವ ಕುಚದ್ವಯಗಳ, ಚಿಗುರಿನಂತೆ ಮಿರುಗುವ ಚೆಂದುಟಿಯ, ಹೊಳೆವ ಕೋಮಲಾಂಗದ ವಿಷಯೆಗೆ ಮುತ್ತೈದೆಯರು ಬಂಗಾರದ ಕೊಡಗಳಿಂದ ಮಂಗಳಸ್ನಾನ ಮಾಡಿಸಿದರು.

ಕೈ ಸೋಕಿದರೆ ಕಂದಿಹೋಗುವ ಬಾಲೆಗೆ ಕುಂಕುಮ ಹಚ್ಚಿದ್ದು ಹೇಗೆ? ಕಣ್ಣಿಗೆ ಕಾಣದಂತಿರುವ ನಡುವಿಗೆ ದಿವ್ಯ ಸೀರೆ ಉಡಿಸಿದ್ದು ಹೇಗೆ? ಸ್ತನ ಭಾರಕ್ಕೆ ಬಾಗಿ ನಡೆವ ಬಾಲೆಗೆ ಮುತ್ತಿನಹಾರ ಹಾಕಿದ್ದು ಹೇಗೆ? ಎಂದು ಆಶ್ಚರ್ಯಗೊಂಡು ನೋಡುವಂತೆ ಆಕೆಯನ್ನು ಅಲಂಕರಿಸಿದರು.

ಚಂದನಸುವಾಸನೆಯ ಮೈಯ ಲಲನೆಗೆ ಗಂಧ ಲೇಪನವೇಕೆ? ಕನ್ಯಾ ಕುಲ ತಿಲಕಳಾದವಳ ಹಣೆಗೆ ತಿಲಕವೇಕೆ? ಕೋಮಲಳಾದವಳಿಗೆ ಕುಸುಮ ಮಾಲೆಯೇಕೆ? ಯೌವನ ಲಾವಣ್ಯದಲ್ಲಿ ಥಳ ಥಳಿಸುತ್ತಿರುವವಳಿಗೆ ಆಭರಣಗಳೇಕೆ? ಅಲಂಕರಿಸಿದ ಸೈರಂಧ್ರಿಯರು ಜಾಣೆಯರಲ್ಲ ಎಂಬಂತೆ ವಿಷಯೆಯ ಸಹಜ ದೇಹಕಾಂತಿ ಹೊಮ್ಮಿ ಪ್ರಕಾಶಿಸುತ್ತಿತ್ತು.

ಶೋಭಾಯಮಾನಳಾದ ಸದ್ಗುಣವತಿ ಭಾಗ್ಯಲಕ್ಷ್ಮಿಯನ್ನು ಗೃಹಸ್ಥನ ಮನೆಗೆ ಕರೆತಂದು ಅವನ ಅಭಿವೃದ್ಧಿಯನ್ನು ಮಾಡುವಂತೆ, ವಿಷಯೆಯನ್ನು ಅಲಂಕರಿಸಿದ ಮುತ್ತೈದೆಯರು ಚಿನ್ನದ ಪಲ್ಲಕ್ಕಿಯಲ್ಲಿ ಕುಳ್ಳಿರಿಸಿಕೊಂಡು ವೈಭವದಿಂದ ವಿವಾಹ ಮಂಟಪಕ್ಕೆ ಕರೆದುಕೊಂಡು ಬಂದರು.

ಕೈ ದೀವಟಿಗೆ ಸಾಲುಗಳು, ಮಂಗಳಗೀತೆ ಹಾಡುವ ಸುಮಂಗಲಿಯರು, ಕಳಸ ಕನ್ನಡಿ ಹಿಡಿದ ಬಾಲೆಯರು, ಮಂಗಳ ವಾದ್ಯಗಳು, ಹಣ್ಣು ಹೂಗಳ ಒಸಗೆಯೊಡನೆ ಚಂದ್ರಹಾಸನು ಬಂದನು. ಆರತಿ ಬೆಳಗಿ ಸ್ವಾಗತಿಸಲು ಪಲ್ಲಕ್ಕಿಯಿಂದಿಳಿದು ವಿವಾಹ ಮಂಟಪಕ್ಕೆ ಹೆಜ್ಜೆ ಹಾಕಿದನು.

ಮಂತ್ರಿ ದುಷ್ಟಬುದ್ದಿಯ ಪತ್ನಿ ತಾರಕಾಕ್ಷಿ ಚಂದ್ರಹಾಸನ ಪಾದಗಳನ್ನು ತೊಳೆದಳು. ಮದನನು ಅಕ್ಕರೆಯಿಂದ ಸತ್ಕರಿಸಿ ಮಧುಪರ್ಕವನ್ನು ಕೊಟ್ಟನು. ವಧುವನ್ನು ಪರಿಗ್ರಹಿಸುವಾಗ ಚಂದ್ರಹಾಸನು ನನ್ನದು ವಾಮನ ಗೋತ್ರ, ತಂದೆ ಅರವಿಂದನಾಭ, ತಾತ ಹರಿ, ಮುತ್ತಾತ ಮುರಹರ; ಕುಳಿಂದ ಮತ್ತು ಆತನಸತಿ ನನ್ನ ಗುರುಗಳು ಎಂದು ಹೇಳಿದನು. ಆ ಉತ್ತಮ ನುಡಿಗಳಿಂದ ಸಂತೋಷಗೊಂಡ ಮದನನು ಸುಮುಹೂರ್ತದಲ್ಲಿ ತೆರೆಯನ್ನು ತೆಗೆಸಿದನು. ಮೆಟ್ಟಕ್ಕಿ, ಸುತ್ತು ನೂಲುಗಳ ಶಾಸ್ತ್ರವನ್ನು ನಡೆಸಿದನು. ಬ್ರಾಹ್ಮಣರ ಆಶೀರ್ವಾದದೊಡನೆ ಮಹಾವಿಷ್ಣುವಿನ ಸನ್ನಿಧಿಯಲ್ಲಿ ಚಂದ್ರಹಾಸನಿಗೆ ವಿಷಯೆಯನ್ನು ಧಾರೆಯೆರೆದು ಕೊಟ್ಟನು.

ಸಪ್ತಪದಿ, ಶಾಸ್ತ್ರೋಕ್ತ ಹೋಮಗಳಾದವು. ಬ್ರಾಹ್ಮಣರು ಸ್ವಸ್ತಿಪೂರ್ವಕವಾದ ಆಶೀರ್ವಾದ ಮಾಡಿದರು. ಮುತ್ತೈದೆಯರು ಮಂಗಳ ತಿಲಕವಿಟ್ಟು ಫಲ ತಾಂಬೂಲ ನೀಡಿ ಬಂಗಾರದ ತಟ್ಟೆಯಲ್ಲಿ ಆರತಿಬೆಳಗಿದರು. ಆ ದಂಪತಿಗಳು ಮನ್ಮಥ ರತಿಯರಂತೆ ಕಂಗೊಳಿಸುತ್ತಿದ್ದರು.

ಮದನನು ಚಂದ್ರಹಾಸನಿಗೆ ಬಳುವಳಿಯಾಗಿ ಗೋ, ಮಹಿಷಿ, ಕರಿ, ತುರಗ, ರಥ, ಶಯ್ಯಾಸನಗಳನ್ನು, ಅಮೂಲ್ಯ ವಸ್ತ್ರಾಭರಣಗಳನ್ನು ಕೊಟ್ಟನು. ಕುಲ ಪುರೋಹಿತ ಗಾಲವನಿಗೂ, ಎಲ್ಲ ಬಂಧುಬಾಂಧವರಿಗೂ, ಬ್ರಾಹ್ಮಣಸಮೂಹಕ್ಕೂ, ಸಮಸ್ತ ಜನಗಳಿಗೂ ಅವರವರ ಯೋಗ್ಯತಾನುಸಾರ ಸತ್ಕರಿಸಿದನು. ಯಥೇಚ್ಛವಾಗಿ ದಾನ ಮಾಡಿದನು.

ಭೂಲೋಕದಲ್ಲಿ ಈ ವಿಧವಾದ ಮದುವೆ ಹೊಸತೆಂಬಂತೆ ಮೂರು ದಿನಗಳ ಕಾಲ ವೈಭವದಿಂದ ವಿವಾಹ ಉತ್ಸವ ನಡೆಯಿತು.

**ನಂಜಿಡಿದ ಮನದ ಅಮಾತ್ಯ**

ಅತ್ತ ಚಂದನಾವತಿಯಲ್ಲಿ ದುಷ್ಟಬುದ್ಧಿಯು ಕುಳಿಂದನನ್ನು ತುಂಬಾ ನಿಂದಿಸಿದನು, ಪೀಡಿಸಿದನು.

'ಎಲವೋ ಕುಳಿಂದ, ಆಳಲು ದೊರೆತನ ಕೊಟ್ಟರೆ, ನನ್ನನೇ ಮರೆತು ಗರ್ವಿಷ್ಟನಾದೆ. ಒಬ್ಬ ಮಗನನ್ನು ಸಂಪಾದಿಸಿಕೊಂಡೆ. ಅವನ ಮಕ್ಕಳಾಟಿಕೆಗೆ ತಕ್ಕಂತೆ ದೇವಾಲಯ, ಕೆರೆ ಕುಂಟೆ, ಉಪವನ, ಕೋಟೆಗಳಿಗೆ ಭಂಡಾರದ ಹಣವನ್ನು ಹಾಳು ಮಾಡಿದೆ' ಎಂದು ಆರೋಪ ಹೊರಿಸಿ ಅವನಿಂದ ರಾಜ್ಯದ ಆಡಳಿತ ತಪ್ಪಿಸಿದನು. ಕಾಲುಗಳಿಗೆ ಸರಪಳಿ ತೊಡಿಸಿ ಸೆರೆಮನೆಯಲ್ಲಿಟ್ಟನು. ಅವಸರವಾಗಿ ಹೊರಟು; ಪಾಲಕಿ ಹೊರುವ ಬೋಯಿಗಳನ್ನು ಗದರಿಸುತ್ತ, ಕುಂತಳಪುರಕ್ಕೆ ಹಿಂದಿರುಗಿದನು. ಅವನ ಮನಸ್ಸೆಲ್ಲ ಮಂದಮತಿಯಾದ ಮಗ ಮದನನು ವಿಷಹಾಕಿ ಚಂದ್ರಹಾಸನನ್ನು ಕೊಲ್ಲುವನೋ, ಸುಮ್ಮನಿರುವನೋ ಎಂದು ಯೋಚಿಸುತ್ತಿತ್ತು. ದುಷ್ಟ ಆಲೋಚನೆ ಅವನನ್ನು ಅಸ್ಥಿರ ನಡೆನುಡಿಯವನನ್ನಾಗಿಸಿತು. ಮಾರ್ಗದಲ್ಲಿ ಒಂದುಸರ್ಪ ಎದುರಾಗಿ ಬಂದು, ಮನುಷ್ಯರಂತೆ ಮಾತಾಡುತ್ತ,

'ಅಯ್ಯಾ ಅಮಾತ್ಯನೇ, ನಿನ್ನ ಮನೆಯಲ್ಲಿ ಇದುವರೆಗೆ ದ್ರವ್ಯಗಳನ್ನು ಕಾದುಕೊಂಡಿದ್ದೆ,

ಅದು ನಿನ್ನ ಮಗನ ದೆಸೆಯಿಂದ ತಪ್ಪಿ ಹೋಯಿತು' ಎಂದು ಹೇಳಿ ಹೊರಟು ಹೋಯಿತು. ಕುಂತಳ ನಗರಕ್ಕೆ ಹತ್ತಿರ ಬರುತ್ತಿದ್ದಂತೆ ಉತ್ಸವದ ವಾದ್ಯಘೋಷ ಅವನಕಿವಿ ತುಂಬಿತು. ಕಾರಣ ಕೇಳಲು ಜನರು,

'ನಿನ್ನ ಮಗ ಮದನನು ಚಂದ್ರಹಾಸನಿಗೂ ವಿಷಯೆಗೂ ಮದುವೆ ಮಾಡಿದನು. ಅದೇ ಉತ್ಸವ.'

ಎನ್ನಲು, ಅವನ ಕಿವಿಯಲ್ಲಿ ಮೊನಚಾದ ಬಾಣವನ್ನು ತೀವ್ರವಾಗಿ ಚುಚ್ಚಿದಂತಾಯಿತು. ಕೋಪದಿಂದ ಕಣ್ಣುಗಳು ಕಿಡಿಕಾರಿದವು. ಅಯ್ಯೋ, ನನ್ನ ಅಪ್ಪಣೆಯನ್ನು ಮಗ ಮೀರಿದನಲ್ಲಾ ಎಂದು ಹಲ್ಲುಕಡಿದನು.

ಅಪ್ಪನನ್ನು ಎದುರ್ಗೊಳ್ಳಲು ಬಂದು ನಮಸ್ಕರಿಸಿದ ಮಗನನ್ನು ಸಿಟ್ಟಿನಿಂದ ನೋಡಿದನು. ಮದುವೆಯ ವೈಭವವನ್ನು ವರ್ಣಿಸುವ ಭಟ್ಟರನ್ನು, ಹರಸಿದ ಬ್ರಾಹ್ಮಣರನ್ನು, ಎದುರು ಬಂದು ಆರತಿಎತ್ತುತ್ತ ವಿಷಯೆಗೆ ಚಂದ್ರಹಾಸ ತಕ್ಕ ವರ ಎಂದು ಹೇಳಿದ ಮುತ್ತೈದೆಯರನ್ನು, ಆಪ್ತರನ್ನು ಬೈದನು.

ಶೋಭಾಯಮಾನವಾದ ಮುತ್ತಿನ ಬಾಸಿಂಗದಿಂದ ಹೊಳೆಯುತ್ತ, ಅರಿಶಿನ ಕುಂಕುಮ ಲೇಪನದಿಂದ ಹೊಸ ಅಂಗಪ್ರಕಾಶವನ್ನು ಹೊಂದಿದ ನವದಂಪತಿಗಳು ನಮಸ್ಕರಿಸಿದರು.

ಅವರನ್ನು ಗಿಳಿಮರಿಗಳನ್ನು ನೋಡುವ ಬೆಕ್ಕಿನಂತೆ ನೋಡಿದನು. ನಂಜಿಡಿದ ಮನಸ್ಸಿನ ಅಮಾತ್ಯನು ಮಗನನ್ನು ದಿಟ್ಟಿಸಿ,

'ಎಲವೋ ಮದನನೇ, ನೀನು ಮೂಢ. ನಿನ್ನ ಬಳಿಗೆ ನಾನು ರಹಸ್ಯವಾಗಿ ರಾಜ ಕಾರ್ಯದ ಪತ್ರ ಬರೆದು ಕಳುಹಿಸಿದೆ. ನೀನು ಗೌಪ್ಯತೆ ಕಾಪಾಡದೆ ಹಾಳು ಮಾಡಿದೆ. ನನ್ನ ಎದೆಗೆ ಶೂಲದಿಂದ ತಿವಿದೆ. ಆರ್ಜಿಸಿದ್ದನ್ನು ವೃದ್ಧಿಪಡಿಸಿ ಸಿಂಹಾಸನಾಧೀಶನಾಗದೆ, ಮದುವೆಮಾಡಿ ಜನಕ್ಕೆ ದಾನಮಾಡಿದೆ. ನಿನಗೆ ವನವಾಸವೇಗತಿ ಹೋಗು' ಎಂದು ಬೈದನು. ತಂದೆಯ ಮಾತುಕೇಳಿ ಬೆರಗಾದ ಮದನನು,

'ಜೀಯ, ಕೋಪಗೊಳ್ಳುವುದೇಕೆ? ತಮ್ಮ ನಿರೂಪವನ್ನು ಪಾಲಿಸಿರುವೆ. ನಿಮ್ಮ ಪತ್ರದ ಅಭಿಪ್ರಾಯ ತಿಳಿದು ವಿಷಯೆಗೆ ಮದುವೆ ಮಾಡಿದರೆ, ನನಗೆ ವನವಾಸ ಪ್ರಾಪ್ತಿಯೇ?'

'ಎಲೈ ಮದನ, ನಿನ್ನ ಕೃತಕಮಾತು ಸಾಕು. ನಿಲ್ಲದೆ ಹೊರಟುಹೋಗು' ಎಂದು ಹೇಳಿ, ತಾನು ಬರೆದು ಕಳುಹಿಸಿದ ಪತ್ರವನ್ನು ತರಿಸಿ ನೋಡಿದನು. ಅದರಲ್ಲಿ ತನ್ನ ಅಭಿಪ್ರಾಯಕ್ಕೆ ಭಿನ್ನವಾಗಿರುವ ಭಾವಾರ್ಥ ತಿಳಿದುಕೊಂಡನು. ವಿಷವನ್ನು ಮೋಹಿಸುವಂತೆ ಕೊಡುವುದು ಎಂಬುದಾಗಿ ತಾನು ಬರೆದಿರಲು; ವಿಷಯೆ ಮೋಹಿಸುವಂತೆ ಎಂದು ಬೇರಾಗಿರುವುದನ್ನು ಕಂಡನು! ಇದು ತಾನು ತಿಳಿಯದೇ ಹೋದ ತಪ್ಪೋ? ಬರೆದವನ ಮರೆವೋ?ಚಂದ್ರಹಾಸನ ಕೃತ್ರಿಮವೋ? ತಿಳಿಯದಾಗಿದೆ!

ಮದನನು ಮಾಡಿದ ಕಾರ್ಯದಲ್ಲಿ ತಪ್ಪಿಲ್ಲ. ಮೊದಲು ಋಷಿಗಳು ನನಗೆ ಹೇಳಿದ ಮಾತು ಸುಳ್ಳಾಗದು. ಇದು ವಿಧಿಕೃತವೋ! ಎಂದು ದುಷ್ಟಬುದ್ಧಿ ಮತ್ತೊಂದು ಕೆಡಕು ಯೋಚನೆಗೊಳಗಾದನು.

**ಅರಿದರಿದು ಪರಹಿಂಸೆಯಮ್ಮಾಡಿ ಮಾನವಂ ಬಾಳ್ದಪನೆ?**

ಈಗ ಏನಾದರೂ ಒಂದು ಉಪಾಯದಿಂದ ಚಂದ್ರಹಾಸನನ್ನು ಕೊಲ್ಲದಿದ್ದರೆ ತನ್ನ

ವಂಶಕ್ಕೆ ದೊರೆತನ ಸಿಗುವುದಿಲ್ಲ. ತನ್ನ ಕುಲಘಾತಕನಾದ ಚಂದ್ರಹಾಸ ಸತ್ತು ತನ್ನ ಮಗಳು ವಿಧವೆಯಾಗಿ ಇರಲಿ ಎಂದುಕೊಂಡ ದುಷ್ಟಬುದ್ಧಿ ಕ್ರೂರ ಮನಸ್ಥಿತಿಗೆ ಬಂದನು. ಹೊರಗೆ ಮಧುರೋಕ್ತಿಗಳಿಂದ ಮದುಮಕ್ಕಳನ್ನು ಮಾತಾಡಿಸಿ, ವಿವಿಧ ಉತ್ಸವಗಳನ್ನು ನಡೆಸಿದನು. ಅಳಿಯನೊಬ್ಬನನ್ನೇ ಕರೆದು ಅಪ್ಪಣೆ ಕೊಟ್ಟನು:

'ವೀರ ಚಂದ್ರಹಾಸನೇ, ನಮ್ಮ ಕುಟುಂಬಕ್ಕೆ ನೀನು ಇದುವರೆಗೆ ದೂರವಿದ್ದೆ. ಈಗ ಅಳಿಯನಾಗಿರುವೆ. ಮದುವೆಯಾದ ನಾಲ್ಕನೇದಿನ ಊರ ಹೊರಗಿನ ಕಾಳಿಯ ದೇವಸ್ಥಾನಕ್ಕೆ ಸೂರ್ಯಾಸ್ತ ಸಮಯದಲ್ಲಿ ಒಬ್ಬನೇ ಹೋಗಬೇಕು. ಅಲ್ಲಿ ಗೌರಿ ಪೂಜೆ ಮಾಡಿ ಬರಬೇಕು ಎಂಬುದು ನಮ್ಮ ಕುಲಾಚಾರ. ಇಂದು ಈ ಕೆಲಸ ಮಾಡು.'

ಮಾವನ ಮಾತಿಗೆ ಒಪ್ಪಿದ ಚಂದ್ರಹಾಸ ಗಂಧ, ಹೂ, ಮಂತ್ರಾಕ್ಷತೆಗಳನ್ನು ತರಿಸಿಕೊಂಡು ಕಾಳಿ ದೇವಾಲಯಕ್ಕೆ ಹೋದನು.

ದುಷ್ಟಬುದ್ಧಿಯು ಅತಿಗೂಢದಿಂದ ಕಟುಕರನ್ನು ಬರಮಾಡಿಕೊಂಡನು. 'ಹಿಂದೆ ಮಾಡಿದಂತೆ ಮೋಸ ಮಾಡಿ ಪ್ರಾಣ ಉಳಿಸಬಾರದು, ನೇಸರು ಮುಳುಗುವ ಸಮಯಕ್ಕೆ ನಗರ ಹೊರವಲಯದ ಕಾಳಿಕಾಂಬೆಯ ದೇವಾಲಯಕ್ಕೆ ಪೂಜೆಗೆ ಬರುವವನನ್ನು ಅಡಗಿ ಕೊಂಡಿದ್ದು ಕಡಿದು ಹಾಕಿ' ಎಂದು ಆಜ್ಞೆ ಮಾಡಿದನು.

* * *

ಎಲೈ ಅರ್ಜುನನೇ ಕೇಳು, ಆ ಸಮಯದಲ್ಲಿ ಕುಂತಳರಾಜನು ತನ್ನ ಶರೀರದ ನೆರಳು ತಲೆಯಿಲ್ಲದೆ ಇರುವುದನ್ನು ಕಂಡು, ಅದನ್ನು ಪುರೋಹಿತ ಗಾಲವನಿಗೆ ಹೇಳಿದನು. ಅವನು ಆ ಶಕುನ ಮರಣಸೂಚಕ ಎಂದನು.

ರಾಜನು ರೋಗಕ್ಕೆ ಒಳಗಾಗಿ ಪ್ರಾಣ ಬಿಡಬಾರದೆಂದು, ಸರ್ಪ ಪೊರೆ ಬಿಟ್ಟಂತೆ ಸಕಲ ಸಂಪತ್ತನ್ನು ತ್ಯಜಿಸಿ ಆತ್ಮಧ್ಯಾನದ ಫಲ ಪಡೆಯಬೇಕೆಂದು, ವನವಾಸಕ್ಕೆ ಹೋಗಲು ನಿಶ್ಚಯಿಸಿದನು.

'ಗಾಲವ ಮುನಿಗಳೇ, ನನಗೆ ಸುತರಿಲ್ಲ. ರಾಜ್ಯವನ್ನು, ಚಂಪಕಮಾಲಿನಿಯನ್ನು ಯಾರಿಗೆ ಕೊಡಲಿ?'

'ರಾಜ ಲಕ್ಷಣಗಳಿರುವ ಚಂದ್ರಹಾಸನಿಗೆ ರಾಜ್ಯ ಸಮೇತ ಚಂಪಕಮಾಲಿನಿಯನ್ನು ಕೊಡಿ.'

ದುಷ್ಟಬುದ್ಧಿಯ ಊಳಿಗವನ್ನು ನಿರ್ವಹಿಸುತ್ತ ಆಗ ಬಾಗಿಲಲ್ಲಿದ್ದ ಮದನನನ್ನು ರಾಜನು ಕರೆದನು. ಕೈಹಿಡಿದು ಮೆಲ್ಲಗೆ ಕಿವಿಯಲ್ಲಿ ಹೇಳಿದನು:

'ನಮಗೆ ಹಿರಿದಾದ ಕೆಲಸವೊಂದಿದೆ. ನೀನು ಈಗಲೇ ಚಂದ್ರಹಾಸನನ್ನು ಕರೆದು ಕೊಂಡು ಬಾ.'

ಕುಂತಲೇಶ್ವರನ ಆಜ್ಞೆಯಂತೆ ಮದನನು ಸೂರ್ಯಾಸ್ತ ಸಮಯದಲ್ಲಿ ಕುದುರೆಯೇರಿ ಬರಲು–ಚಂದ್ರಹಾಸ ಪೂಜಾಸಾಮಗ್ರಿಯೊಡನೆ ಎದುರು ಬರುವುದನ್ನು ಕಂಡನು. ಅವನ ದೈವಭಕ್ತಿಯ ಅರಿವಿದ್ದ ಮದನನು ಉತ್ಸಾಹದಿಂದ ಕೇಳಿದನು:

'ಇದೇನು? ಎಲ್ಲಿಗೆ?'

'ನಿಮ್ಮ ಮನೆತನದ ವಾಡಿಕೆಯಂತೆ ಕಾಳಿಕಾದೇವಿಯ ಪೂಜೆಗೆ ಹೊರಟಿರುವೆ.'

ತಕ್ಷಣ ಕುದುರೆಯಿಂದಿಳಿದ ಮದನನು,

'ಅಯ್ಯೋ ಮರುಳೇ, ಕಾಳಿಯಪೂಜೆಗೆ ನಾನುಹೋಗುವೆ.'

'ಬೇಡ. ಇದು ನಿಮ್ಮ ತಂದೆಯ ಆಜ್ಞೆ.'

'ಇಲ್ಲಿ ರಾಜಾಜ್ಞೆಯಿದೆ! ದೊಡ್ಡ ರಾಜಕಾರ್ಯಕ್ಕೆ ಕುಂತಳೇಶ್ವರ ನಿನ್ನನ್ನು ಕರೆದುಕೊಂಡು ಬಾ ಎಂದಿರುವನು.'

'ಅಷ್ಟು ಅವಸರವೇ?'

'ಹೌದು!'

ಎಂದು ಹೇಳುತ್ತ ಮದನನು ಅರ್ಚನಾದ್ರವ್ಯವನ್ನು ಚಂದ್ರಹಾಸನಿಂದ ಪಡೆದು, ಕುದುರೆಯನ್ನು ಅವನಿಗೆ ಕೊಟ್ಟನು. ತಾನು ಏಕಾಕಿಯಾಗಿ ಕಾಳಿಕಾಲಯಕ್ಕೆ ಹೋದನು.

**ಕೃತ್ರಿಮ ಅರಿಯದ ಮದನ**

ಎತ್ತರವಾಗಿ ಬೆಳೆದ ಮರಗಳ ಕಾಡಿನಲ್ಲಿರುವ ಕಾಳಿ ದೇವಾಲಯಕ್ಕೆ ಹೋಗುವಾಗ ಅವನ ಕೈಯಲ್ಲಿದ್ದ ಬಂಗಾರದ ಪೂಜಾತಟ್ಟೆ ಜಾರಿ ನೆಲಕ್ಕೆ ಬಿತ್ತು. ಬೆಕ್ಕುಗಳು ಕಡಿದಾಡಿ ಚೀರುತ್ತ ಅಡ್ಡ ಬಂದವು. ಹಕ್ಕಿಗಳು ರಕ್ತಕಾರಿದವು. ಗೂಬೆಗಳು ಗುಬ್ಬಳಿಸಿದವು.

ಯಾವುದೇ ಕೃತ್ರಿಮವನ್ನು ಅರಿಯದ ಮದನನು ದುಶ್ಯಕುನಗಳನ್ನು ಲೆಕ್ಕಿಸದೆ ಮುಂದುವರಿದು, ಚಂದ್ರಹಾಸನಿಗೆ ಯಾವುದೇ ಭಯ ಶೋಕಾದಿಗಳು ಆಗದಿರಲಿ ಎಂದು ಪ್ರಾರ್ಥಿಸುತ್ತ ದೇವಾಲಯವನ್ನು ಹೊಕ್ಕನು.

ದುಷ್ಟಬುದ್ಧಿಯ ಆಜ್ಞೆಯಂತೆ ಮೊದಲೇ ಬಂದು, ಎಡ ಬಲದಲ್ಲಿ ಅಡಗಿಕೊಂಡಿದ್ದ ಕೊಲೆಗಡುಕ ಚಂಡಾಲರು ಒರೆದೆಗೆದ ಕತ್ತಿಗಳಿಂದ ಅವನನ್ನು ಕಡಿದುರುಳಿಸಿದರು.

ನಾರಾಯಣ ಸ್ಮರಣೆ ಮಾಡುತ್ತ ಅವನು ಪ್ರಾಣಬಿಟ್ಟನು.

**ಕುಂತಳ ರಾಜನಾದ ಚಂದ್ರಹಾಸ**

ಚಂದ್ರಹಾಸನು ತ್ವರಿತವಾಗಿ ಹೋಗಿ ರಾಜ ಕುಂತಳನ ಮುಂದೆ ಕಾಣಿಸಿಕೊಳ್ಳಲು, ರಾಜ ಹರ್ಷಗೊಂಡನು. ಚಂದ್ರಹಾಸನಿಗೆ ರಾಜ್ಯಕೊಟ್ಟು ಪಟ್ಟಕಟ್ಟಿದನು.

ಪುರೋಹಿತ ಗಾಲವನ ಅಭಿಪ್ರಾಯದಂತೆ ಮಗಳು ಚಂಪಕಮಾಲಿನಿಯನ್ನು ಗಾಂಧರ್ವ ವಿಧಿಯಲ್ಲಿ ಮದುವೆ ಮಾಡಿಕೊಟ್ಟನು. ಗೋಧೂಳಿ ಲಗ್ನದಲ್ಲಿ ತನ್ನ ಪತ್ನಿಯೊಡನೆ ಆತ್ಮಯೋಗ ಸಾಧನೆಗಾಗಿ ತಪೋವನಕ್ಕೆ ಹೋದನು.

ಪಟ್ಟದರಸನಾದ ಚಂದ್ರಹಾಸನು ಪಟ್ಟಣದ ಜನಗಳಿಗೆ ಅದು ತಿಳಿಯಲೆಂದು, ಪಟ್ಟದಾನೆಯ ಮೇಲೆ ಚಂಪಕಮಾಲಿನಿಯೊಡನೆ ಕುಳಿತು ಮೆರವಣಿಗೆ ಹೊರಟನು. ಮಂಗಳವಾದ್ಯ ಕೇಳಿದ ದುಷ್ಟಬುದ್ಧಿಗೆ ಮತ್ತೆ ಭಯ ಹೆಚ್ಚಿತು. ಇದೆಂತಹ ದೈವಲೀಲೆ ಎಂದು ಆಶ್ಚರ್ಯಚಕಿತನಾದನು! ನನ್ನನ್ನು ಕರೆಸದೆ ಚಂದ್ರಹಾಸನಿಗೆ ಪಟ್ಟ ಕಟ್ಟುವಾಗ– ಮಗ ಮದನನು ರಾಜ ಸನ್ನಿಧಿಯಲ್ಲಿದ್ದು ಏನು ಮಾಡುತ್ತಿದ್ದ ಎಂದು ಹಲ್ಲು ಕಡಿದು ವ್ಯಗ್ರನಾದನು. ಅಷ್ಟರಲ್ಲಿ ಮಾವನನ್ನು ನೋಡಲು ಆನೆಯಿಂದಿಳಿದು ಬಂದ ಚಂದ್ರಹಾಸನು ಚಂಪಕಮಾಲಿನಿಯೊಡನೆ ನಮಸ್ಕರಿಸಿದನು. ದುಷ್ಟಬುದ್ಧಿಯು ಉಕ್ಕಿ ಹರಿವ ರೋಷದಲ್ಲಿ ಕೇಳಿದನು.

'ವಂಶಾಚಾರದಂತೆ ಕಾಳಿಪೂಜೆಗೆ ಹೋಗುಎಂದು ಕಳಿಸಿದೆ, ನೀನು ಮಾಡಿದ್ದೇನು?'

'ಅಯ್ಯಾ, ನಾನು ಪೂಜೆಗೆ ಅಣಿಯಾಗಿ ಕಾಳಿದೇವಾಲಯಕ್ಕೆ ಹೋಗುತ್ತಿದ್ದೆ.

ಮಾರ್ಗ ಮಧ್ಯದಲ್ಲಿ ಬಂದ ನಿನ್ನಮಗ ಮದನನು ನನ್ನನ್ನು ತಕ್ಷಣ ಅರಮನೆಗೆ ಹೋಗಲು ಹೇಳಿದನು. ಪೂಜಾದ್ರವ್ಯಗಳನ್ನು ತೆಗೆದುಕೊಂಡು ತಾನೊಬ್ಬನೇ ಕಾಳಿ ದೇವಾಲಯಕ್ಕೆ ಹೋದನು.'

ಆ ಮಾತನ್ನು ಕೇಳಿ ತಳಮಳಗೊಂಡ ಅಮಾತ್ಯ ದುಷ್ಟಬುದ್ಧಿಗೆ ದುಃಖ ಒತ್ತೊತ್ತಿ ಬರಲು–ಒತ್ತಿಹಿಡಿದನು. ನಯದ ಮಾತುಗಳಿಂದ ಅಳಿಯನನ್ನು ಅರಮನೆಗೆ ಕಳುಹಿಸಿದನು.

ಅರಿದರಿದು ಪರಹಿಂಸೆಯಂ ಮಾಡಿ ಮಾನವಂ ಬಾಳ್ದಪನೆ; ದೀಪವನ್ನು ಆರಿಸಲು ಪ್ರಯತ್ನಿಸಿ ತಾನೇ ಸಾಯುವ ಪತಂಗದಂತೆ ಮನುಷ್ಯ ಸಾಯದಿರುವನೆ ಎಂದು ತನ್ನ ಉಪಾಯವೇ ತನಗೆ ಅಪಾಯ ತಂದೊಡ್ಡಿದ್ದರಿಂದ ಮನೆಗೆ ಹೋಗಿ, ದುಷ್ಟಬುದ್ಧಿಯು ಯಾರೂ ಅರಿಯದಂತೆ ದುಃಖಿಸಿದನು. ಕತ್ತಲೆಯಲ್ಲಿ ಕೋಟೆ ಏರಿ ಹೊರಬಿದ್ದನು. ಅತಿಯಾದ ಶೋಕದಲ್ಲಿ ಒಂದೆಡೆ ನಿಲ್ಲಲಾಗದೆ, ಚುಚ್ಚುವ ಮುಳ್ಳುಗಳನ್ನು ಲಕ್ಷಿಸದೆ, ಹಳ್ಳ ದಿಣ್ಣೆ ತಿಳಿಯದಂತೆ ಏಳುತ್ತ ಬೀಳುತ್ತ, ತಲೆಗೆದರಿಕೊಂಡು ಅಳುತ್ತ, ಅಗಳ್ತೆಯ ನೀರನ್ನು ದಾಟಿ ಕಾಳಿದೇವಾಲಯದ ಕಡೆ ಸಾಗಿದನು.

ಕಿತ್ತುಹೋದ ಹೂವಿನ ಸರಗಳ, ಬಗೆಬಗೆಯ ಬಣ್ಣಕೂಳುಗಳ, ಅರ್ಧ ಉರಿದ ಕೊಳ್ಳಿಗಳ, ಬೆಂದುಬೂದಿಯಾದ ಹೆಣಗಳ, ಮುರಿದ ಚಟ್ಟಗಳ, ಚಿತೆಯಲ್ಲಿ ಬೇಯುತ್ತಿರುವ ಹೆಣಗಳ, ಹರಡಿದ ಮೂಳೆಗಳ, ನರಿ ಗೂಗೆಗಳ ಕಠೋರ ಧ್ವನಿಯ, ಪಿಶಾಚಿ ಬೇತಾಳಗಳ ಸ್ಮಶಾನದಲ್ಲಿ ದುಷ್ಟಬುದ್ಧಿ ನಡೆದು ಸಾಗುತ್ತಿದ್ದನು. ಭೂತದಂತಿರುವ ಅವನನ್ನು ಕಂಡ ಪಿಶಾಚಿಗಳು–ಮಹಾಪಾತಕಮಾಡಿ ಪಿಶಾಚಿಗಳಾಗಿರುವ ನಮ್ಮಲ್ಲಿ ಇಂಥವನಿಲ್ಲ! ಇವನು ಹಿರಣ್ಯಕಶಿಪುವನ್ನು ಸೀಳಿದ ನರಸಿಂಹ ಮಂತ್ರ ಜಪಿಸುವವನಿಗಲ್ಲದೆ ಮತ್ತಾರಿಗೂ ಹೆದರುವವನಲ್ಲ! ಎಂದು ಮಾತಾಡಿಕೊಂಡವು.

ಇಂದ್ರತನಯ ಅರ್ಜುನನೇ ಕೇಳು. ವಿವೇಕ ಶೂನ್ಯನಾದ ದುಷ್ಟಬುದ್ಧಿಯು ಚಿತೆಯಲ್ಲಿ ಉರಿಯುತ್ತಿರುವ ಕೊಳ್ಳಿ ಹಿರಿದುಕೊಂಡು ಅದರ ಬೆಳಕಿನಲ್ಲಿ ದೇವಸ್ಥಾನಕ್ಕೆ ಹೋದನು. ಕೊಳ್ಳಿಯ ಬೆಳಕಿನಲ್ಲಿ, ಒಂದೇಏಟಿಗೆ ಸತ್ತು ರಕ್ತದಲ್ಲಿ ಬಿದ್ದಿರುವ ಕೆದರಿದ ತಲೆಗೊದಲ, ಸೆಟೆದಕಾಲುಗಳ ಮಗನನ್ನು ಕಂಡನು. ಅವನ ಮನೋರಥ ಒರಗಿಬಿದ್ದಂತೆ; ವಂಶವೃಕ್ಷ ಮುರಿದುಬಿದ್ದಂತೆ; ಸೌಭಾಗ್ಯಸೌಧವು ಬಿದ್ದು ನೆಲಸಮವಾದಂತೆ ಕಾಳಿಯಮುಂದೆ ಮಗ ಮದನ ಸತ್ತು ಬಿದ್ದಿದ್ದನು.

ಕೈಯಲ್ಲಿರುವ ಕೊಳ್ಳಿಯನ್ನೆಸೆದು ಮಗನನ್ನು ತಬ್ಬಿ ಮುದ್ದಿಸಿದನು. 'ಅಯ್ಯೋ ಮಗನೇ, ನಿನ್ನತಂದೆ ಬಂದಿರುವೆ. ಕುಂತಳರಾಜ ವಹಿಸಿದ ಕೆಲಸ ನನಗೆ ಹೇಳಬಾರದೇ? ಸುಮ್ಮನೇಕಿರುವೆ? ಇಗೋ ಚಂದ್ರಹಾಸ ಬಂದ. ತಂಗಿಯನ್ನು ಕೊಟ್ಟು ಮದುವೆ ಮಾಡು! ನಾನು ಬೈದುದಕ್ಕೆ ಕೋಪಗೊಳ್ಳಬೇಡ, ವೈಷ್ಣವ ದ್ರೋಹದಿಂದ ನನಗೆ ಈ ದುರವಸ್ಥೆಯಾಯಿತು! ನೀನು ವಿಷ್ಣು ಭಕ್ತ, ಶಿವನ ಆರಾಧಕ, ಗುರು ದೇವತಾಪ್ರಿಯನಾದ ನೀನು ಹೀಗೆ ಸಾಯಬಹುದೇ? ಮಗನೇ, ನಾನೇ ನಿನಗೆ ಶತ್ರುವಾದೆ' ಎಂದು ದುಃಖದಿಂದ ಗೋಳಾಡಿದನು. ತನ್ನ ಕಣ್ಣೀರಿನಿಂದ ಮದನನ ಮೈಯ ರಕ್ತ ತೊಳೆದನು. ಮಗ ಸತ್ತುಹೋದ ಬೇಗೆ ಬಹಳವಾಗಲು ಎಡಬಲದಲ್ಲಿರುವ ಕಂಬಗಳಿಗೆ ತಲೆ ಚಚ್ಚಿಕೊಂಡು; ಅದು ಕುಂಬಳಕಾಯಿಯಂತೆ ಬಿರಿಯಲು, ಸತ್ತು ನೆಲಕ್ಕೆ ಉರುಳಿದನು. ಅವರಿಬ್ಬರ ಸಾವು ಗಾಢ ಕತ್ತಲೆಯಲ್ಲಿ ಜಾರಿ ಹೋಯಿತು.

**ನಿಷ್ಕಪಟ ಹರಿಭಕ್ತ ಚಂದ್ರಹಾಸ**

ಸೂರ್ಯೋದಯವಾಗಲು ಪೂಜೆಗಾಗಿ ಅರಳಿದ ಹೂಗಳನ್ನು ಬಿಡಿಸಿಕೊಂಡು ಬಂದ ಪೂಜಾರಿ ತಂದೆಮಕ್ಕಳ ಶವಗಳನ್ನು ಕಂಡು ಹೆದರಿ, ಆಶ್ಚರ್ಯಗೊಂಡನು. ಇವರಿಬ್ಬರಿಗೆ ಕೇಡು ಬಗೆದವರಾರಿರಬಹುದೆಂದು ಚಿಂತಿಸುತ್ತ ಚಂದ್ರಹಾಸನಿಗೆ ಮೊರೆಯಿಟ್ಟನು. ರಾಜ ಚಂದ್ರಹಾಸ ತಕ್ಷಣ ಕಾಲ್ನಡಿಗೆಯಲ್ಲಿ ಬಂದು ಮಾವ ಮೈದುನರು ಸತ್ತುಬಿದ್ದಿರುವುದನ್ನು ಕಂಡು ತುಂಬಾ ದುಃಖಿಸಿದನು. ಕಾಳಿಮಹಾಮಾತೆಗೆ ಮೊರೆಯಿಟ್ಟನು.

'ತಾಯಿಯೇ, ನನ್ನ ಅದೃಷ್ಟವನ್ನು ಕೆಡಿಸಿದೆಯಲ್ಲಾ, ನಾನು ಮಾಡಿದ ತಪ್ಪೇನು? ನಿನ್ನನ್ನು ಬಹಳವಾಗಿ ಪ್ರಾರ್ಥಿಸಿ, ಪೀಡಿಸಿ–ಸತ್ತಿರುವವರನ್ನು ಬದುಕಿಸುವೆನು ಇಲ್ಲವಾದರೆ ಶ್ರೀಹರಿಯಲ್ಲಿ ಐಕ್ಯವಾಗುವೆನು' ಎಂದು ಹೇಳಿ, ಬಂಧು ಬಾಂಧವರಿಗೆ ಧೈರ್ಯವನ್ನು ಹೇಳುತ್ತ ಕಾಳಿಕಾಂಬೆಯ ಮುಂಭಾಗದಲ್ಲಿ ಚೌಕಾಕಾರವಾಗಿ ಅಗ್ನಿಕುಂಡ ತೆಗೆಸಿದನು. ಅಗ್ನಿಯನ್ನು ಪ್ರತಿಷ್ಠಾಪಿಸಿದನು. ಬ್ರಾಹ್ಮಣಮಂಡಲಿಯೊಡನೆ ಕುಳಿತು ಘೃತ, ಪಾಯಸಾಜ್ಯ, ತಿಲ ಹೋಮಗಳನ್ನು ಅರ್ಪಿಸಿದನು.

ಚಂದ್ರಹಾಸನು ಕತ್ತಿಯಿಂದ ತನ್ನದೇಹದ ಮಾಂಸವನ್ನು ಕೊಯ್ದು ಅಗ್ನಿಗೆ ಆಹುತಿಕೊಟ್ಟನು! ಪೂರ್ಣಾಹುತಿಗೆ ತನ್ನ ಶರೀರವನ್ನು ಕೊಯ್ದು ಹೋಮ ಮಾಡುವೆನೆಂದು ಕುತ್ತಿಗೆಗೆ ಕತ್ತಿ ಹೂಡಿ,

'ಎಲೈ ಕಾಳಿಕಾಂಬೆಯೇ, ನೀನು ಅಖಿಲ ಶಕ್ತಿಗಳ ದೇವತೆಯಾಗಿ, ಪರಮೇಶ್ವರನೊಡನೆ ರಮಿಸುವೆಯಲ್ಲವೇ? ಈಗ ನಾನು ಶ್ರೀಹರಿಗೆ ಸಮರ್ಪಿಸುವುದನ್ನು ನೀನು ಒಪ್ಪಿಸಿಕೊ' ಎಂದು ತಲೆಯನ್ನು ಕಡಿದುಕೊಳ್ಳಲು ಸಿದ್ಧನಾದನು. ಬೆಚ್ಚಿದ ತಾಯಿ ಕಾಳಿಯು ದಿವ್ಯ ಪೀಠದಿಂದೆದ್ದು ಬಂದು ಚಂದ್ರಹಾಸನ ಕೈಯಲ್ಲಿರುವ ಕತ್ತಿಯನ್ನು ಹಿಡಿದುಕೊಂಡು,

'ಎಲೈ ಕುಮಾರನೇ, ನಿನ್ನ ನಿಷ್ಕಪಟವಾದ ಹರಿಭಕ್ತಿಗೆ ನಾನು ಸಂತೋಷ ಗೊಂಡಿರುವೆನು. ಆತ್ಮವಧೆ ಮಾಡಿಕೊಳ್ಳಬೇಡ. ನೀನು ನನ್ನನ್ನು ಮೆಚ್ಚಿಸಿರುವೆ ಎರಡು ವರಗಳನ್ನು ಕೇಳು' ಎಂದಳು.

ದೇವಿಯ ಪಾದ ಕಮಲಗಳಿಗೆ ನಮಸ್ಕರಿಸಿ, ಕೈ ಮುಗಿದು ನಿಂತು ಚಂದ್ರಹಾಸನು ಪ್ರಾರ್ಥಿಸಿದನು:

'ಮಾತೆಯೇ, ನನಗೆ ಪ್ರತಿಜನ್ಮದಲ್ಲಿಯೂ ಶ್ರೀಹರಿಯ ಭಕ್ತಿಯುಂಟಾಗಲಿ ಎಂಬುದು ನಾನುಕೇಳುವ ಮೊದಲ ವರ. ಸತ್ತು ಬಿದ್ದಿರುವ ಮಂತ್ರಿ ಮತ್ತು ಅವನ ಮಗ ಬದುಕಲಿ ಎಂಬುದು ಎರಡನೇ ವರ. ಇದನ್ನು ಕರುಣಾದೃಷ್ಟಿಯಿಂದ ದಯಪಾಲಿಸು'.

ದೇವಿಯ ಚರಣಗಳಿಗೆ ಎರಗಿದನು. ದೇವಿಯು ಅವನ ಕೈಹಿಡಿದು ಎತ್ತಿ ಮೈಗಾಯಗಳು ಮಾಯವಾಗುವಂತೆ ಮೈದಡವಿ,

'ಎಲೈ ಪುತ್ರ ಚಂದ್ರಹಾಸನೇ, ಈ ಜಗದಲ್ಲಿ ಯಾರು ಮಹಾ ವಿಷ್ಣುಭಕ್ತರೋ, ಅವರು ನನಗೆ ಪ್ರಿಯರು. ನಿನ್ನ ಇಷ್ಟಾರ್ಥದಂತೆ ಆಗಲಿ.'

ದೇವಿ ಅಂತರ್ಮುಖಳಾಗಿ ನಿಂತು ಧ್ಯಾನಿಸಲು ಒಂದು ವೈಷ್ಣವಶಕ್ತಿ ಆಯುಧ ಸಮೇತ ಪ್ರತ್ಯಕ್ಷವಾಯಿತು. ಅದನ್ನು ಚಂದ್ರಹಾಸನಿಗೆ ಕೊಟ್ಟು, ಅವನ ನೆತ್ತಿಯ ಮೇಲೆ ಕೈಯಿಟ್ಟು ಕಿವಿಯಲ್ಲಿ ಗೂಢಮಂತ್ರವನ್ನು ಉಪದೇಶಿಸಿದಳು. ಚಂದ್ರಹಾಸನು ಕೈಮುಗಿದು,

'ತಾಯೇ ಪಾರ್ವತಿ, ಪರಮ ಕಲ್ಯಾಣಿ, ಶಂಕರ ಪ್ರಿಯೆ, ಸರ್ವೇಶ್ವರಿ, ಜಗನ್ಮಾತೆ, ಸನ್ನುತಚ್ಛಾಂಯೆ, ಸಾವಿತ್ರಿ, ಶಾರದೆ, ಸಕಲ ಶಕ್ತಿ ರೂಪಿಣಿ, ಕಾಳಿ, ಕಾತ್ಯಾಯಿನಿ, ಮಹಾಮಾಯೆ ರಕ್ಷಿಸು' ಎಂದು ಪ್ರಾರ್ಥಿಸಿದನು. ಆಗ ಆಕಾಶದಲ್ಲಿ ದೇವ ದುಂದುಭಿಗಳು ಮೊಳಗಿದವು. ದೇವತೆಗಳು ಹೂಮಳೆ ಸುರಿಸಿದರು. ಕಾಳಿಕಾಂಬೆಯು ಮಾಯವಾದಳು. ಮದನ, ದುಷ್ಟಬುದ್ಧಿಗಳ ಒಡಲಲ್ಲಿ ಪ್ರಾಣ ಪಸರಿಸಿತು. ಅವರಲ್ಲಿ ಬಲ, ರೂಪ, ಕಾಂತಿಗಳು ಮೊದಲಿನಂತೆ ಪ್ರಕಾಶಿಸಿದವು. ಮಲಗಿದ್ದವರು ಎದ್ದಂತೆ ಅವರು ಕಣ್ದೆರೆದು ಕುಳಿತುಕೊಂಡರು. ಚಂದ್ರಹಾಸನು ಪ್ರೀತಿಯಿಂದ ಮಾವನ ಅಡಿಗೆ ಎರಗಿದನು. ಮೈದುನನನ್ನು ತಬ್ಬಿಕೊಂಡನು.

'ಸತ್ತವರನ್ನು ಮತ್ತೆ ಬದುಕಿಸಿದ ನಿನ್ನಂಥಹವರು ಈ ಲೋಕದಲ್ಲಿರುವರೇ!' ಎಂದು ಕೊಂಡಾಡಿದ ಪುರಜನ ಹಾಗೂ ಪರಿಜನರಿಗೆ ಚಂದ್ರಹಾಸನು ಸಂತೋಷದಿಂದ,

'ಕೊಲ್ಲುವವರಾರು? ಕಾಯುವವರಾರು? ಸಾಯುವವರಾರು? ಉಳಿಯುವವರಾರು? ಇದೆಲ್ಲವೂ ವಿಷ್ಣುವಿನ ಲೀಲೆಯಿಂದ ತುಂಬಿದೆ. ನೀವೆಲ್ಲರೂ ಹರಿಧ್ಯಾನ ಮಾಡಿ' ಎಂದು ಎಲ್ಲರಿಗೂ ಸಾರಿ ಹೇಳಿದನು.

ದುಷ್ಟಬುದ್ಧಿಯ ಅನುಮತಿಯೊಂದಿಗೆ ಚಂದ್ರಹಾಸನು ಚಂದನಾವತಿಯಲ್ಲಿ ಸೆರೆಯಲ್ಲಿದ್ದ ಕುಳಿಂದನನ್ನು, ಮೇಧಾವಿನಿಯನ್ನು ಕರೆಸಿಕೊಂಡನು. ಕಳಿಂಗವನ್ನು ತಾನೇ ವಹಿಸಿಕೊಂಡನು. ವಿಷಯೆ ಮತ್ತು ಚಂಪಕಮಾಲಿನಿಯರೊಂದಿಗೆ ರಮಿಸುತ್ತ ಸುಖವಾಗಿದ್ದನು. ವಿಷಯೆಗೆ ಮಕರಧ್ವಜನೂ, ಚಂಪಕಮಾಲಿನಿಗೆ ಪದ್ಮಾಕ್ಷನೂ ಹುಟ್ಟಿದರು. ಅವರು ತಂದೆಗಿಂತ ಇಮ್ಮಡಿಯಷ್ಟು ಪರಾಕ್ರಮಿಗಳಾಗಿ ರಾಜ್ಯವಾಳುತ್ತಿರುವರು.

ಚಂದ್ರಹಾಸನು ಮುನ್ನೂರುವರ್ಷದ ವೃದ್ಧನಾಗಿದ್ದು, ಅವನಿಗೆ ಸಮನಾದ ದೊರೆಗಳು ಈ ಲೋಕದಲ್ಲಿಲ್ಲವೆಂದು ಖ್ಯಾತಿ ಹೊಂದಿದ್ದಾನೆ–ಎಂದು ನಾರದಮುನಿಯು ಚಂದ್ರಹಾಸನ ಅಪೂರ್ವ ಕಥೆ ಹೇಳಿದನು. ಅರ್ಜುನನಿಂದ ವಂದನೆಗೊಂಡು ಆಕಾಶಮಾರ್ಗವಾಗಿ ಹೊರಟುಹೋದನು.

**ಚಂದ್ರಹಾಸನ ಭಕ್ತಿಗೆ ಪ್ರಸನ್ನನಾದ ಶ್ರೀಕೃಷ್ಣ**

ಜನಮೇಜಯರಾಯನೇ, ಅರ್ಜುನನಿಗೆ ನಾರದಮಹರ್ಷಿ ಹೇಳಿದ ಕಥೆಯನ್ನು ಕೇಳಿದೆಯಲ್ಲಾ! ಅರ್ಜುನನಸೇನೆ ಚಂದ್ರಹಾಸನ ಕುಂತಳ ಪುರಾಭಿಮುಖವಾಗಿ ನಡೆಯಿತು. ಯಜ್ಞಾಶ್ವಗಳು ಆ ಪುರದ ಹೊರವಲಯದ ಉದ್ಯಾನದಲ್ಲಿ ಸ್ವೇಚ್ಛೆಯಾಗಿ ಸಂಚರಿಸುತ್ತಿದ್ದುವು. ಕಾವಲುಗಾರರಿಂದ ವಿಷಯತಿಳಿದ ಚಂದ್ರಹಾಸನ ಮಕ್ಕಳಾದ ಪದ್ಮಾಕ್ಷ, ಮಕರಧ್ವಜರು ಕುದುರೆಯನ್ನು ಹಿಡಿದು; ಅವುಗಳ ಶಿರದಲ್ಲಿರುವ ಪಟ್ಟದ ಲಿಪಿಯನ್ನು ಓದಿಕೊಂಡರು. ತಂದೆಗೆ ತಂದೊಪ್ಪಿಸಿ ನುಡಿದರು:

'ಸ್ವಾಮಿಯಾದ ಜನಕನೇ, ನಮ್ಮ ವಿಜ್ಞಾಪನೆಯನ್ನು ಕೇಳು. ಧರ್ಮರಾಜನ ಯಜ್ಞಾಶ್ವಗಳು ನಮ್ಮ ಕುಂತಳಕ್ಕೆ ಬಂದಿವೆ. ನಾವು ಕಟ್ಟಿಹಾಕಿದ್ದೇವೆ. ಇನ್ನು ಬಿಡಿಸಿಕೊಳ್ಳುವ ಶೂರರನ್ನು ಬಾಣಗಳ ಮೊನೆಯಲ್ಲಿ ಕಾಣಬೇಕಾಗಿದೆ. ಅಲ್ಲವೇ?'

ಅದನ್ನು ಕೇಳಿದ ಚಂದ್ರಹಾಸನು ಅವರನ್ನು ಅಕ್ಕರೆಯಿಂದ ತಬ್ಬಿಕೊಂಡು, ತನ್ನ ಅಭಿಪ್ರಾಯವನ್ನು ನಯವಾಗಿ ಹೇಳಿದನು:

'ಮಕ್ಕಳಿರಾ, ನಾನು ಚಿಕ್ಕಂದಿನಿಂದಲೂ ಬಿಡದೆ ಧ್ಯಾನಿಸುತ್ತಿರುವ ದೇವ ಶ್ರೀಹರಿಯು ಅರ್ಜುನನಸಹಾಯಕ್ಕಾಗಿ ಇಲ್ಲಿಗೆ ಬಂದಿರುವನು. ಯಾತಕ್ಕಾಗಿ ಪ್ರತ್ಯಕ್ಷನಾಗುತ್ತಿರುವನೋ, ನಾನು ಕಾಣೆ! ಅವನ ದರ್ಶನದ ಪುಣ್ಯವೇಸಾಕು. ಧರ್ಮರಾಯನ ಅಶ್ವಮೇಧ ಯಾಗಕ್ಕಾಗಿ ಸಂಚರಿಸುತ್ತಿರುವ ಕುದುರೆಗಳನ್ನು ಕಟ್ಟಿದರೆ ಫಲವೇನು?'

'ಅಪ್ಪಾ, ತಮ್ಮನುಡಿಯೇ ನಮಗೆಆದರ್ಶ.'

'ಅರ್ಜುನಾದಿಗಳು ಈ ಅಶ್ವಗಳನ್ನು ತುಂಬಾ ಶ್ರಮದಿಂದ ಸಂರಕ್ಷಿಸಿಕೊಂಡು ಬಂದಿದ್ದಾರೆ. ಅವುಗಳ ಸಂಚಾರದ ಒಂದು ವರ್ಷದ ಅವಧಿಯಲ್ಲಿ ಹತ್ತೂವರೆ ತಿಂಗಳು ಆಗಲೇ ಕಳೆದುಹೋಗಿವೆ. ಇಲ್ಲಿ ಕುದುರೆಗಳು ಸೆರೆಯಾದರೆ, ಯಾಗವು ಕೊನೆಯಾಗದೆ ನಿಂತುಹೋಗುತ್ತದೆ. ಆದಕಾರಣ ನೀವು ಪರಾಕ್ರಮದಿಂದ ಅಶ್ವಗಳು ಇತರರ ವಶವಾಗದಂತೆ ಕಾಪಾಡಿ, ಧರ್ಮರಾಯನಿಗೆ ಕೊಡಿ. ನಿಮಗೆ ಪುಣ್ಯ ಪ್ರಾಪ್ತಿಯಾಗುವುದು' ಎಂದು ಹೇಳಿ ಪದ್ಮಾಕ್ಷ, ಮಕರಧ್ವಜರನ್ನು ಸೇನೆ ಸಹಿತ ಕುದುರೆಗಳ ರಕ್ಷಣೆಗೆ ಕಳುಹಿಸಿಕೊಟ್ಟನು. ತಾನು ಮೂಲಬಲದೊಡನೆ ಪಟ್ಟಣದ ಹೊರವಲಯದಲ್ಲಿ ಶ್ರೀಕೃಷ್ಣನ ದರ್ಶನಾಕಾಂಕ್ಷಿಯಾಗಿ ನಿಂತನು.

ಮೇರೆ ಮೀರಿದ ಸಮುದ್ರದಂತೆ ಎದುರು ಬರುತ್ತಿರುವ ಅರ್ಜುನನ ಸೇನೆಯನ್ನು ಕಂಡು, ಅತಿಪರಾಕ್ರಮಿಯಾದ ಚಂದ್ರಹಾಸನು ಅದನ್ನು ಎದುರಿಸಲು ಮುನ್ನುಗ್ಗಿದನು. ಶ್ರೀಕೃಷ್ಣನು ಸಮಸ್ತ ದೊರೆಗಳನ್ನು ಅವರವರ ಪರಾಕ್ರಮವರಿತು ನಿಲ್ಲಿಸಿ, ತಾನು ಶಂಖ ಚಕ್ರ ಗದಾ ಪದ್ಮಗಳೊಡನೆ ಹೊಳೆಯುವ ಚತುರ್ಭುಜನಾಗಿ ದಿವ್ಯ ಸ್ವರೂಪದಲ್ಲಿ ಅರ್ಜುನನ ಸಾರಥಿಯಾಗಿ ರಥವನ್ನು ನಡೆಸಿದನು.

ಹರಿಧ್ಯಾನದಲ್ಲಿ ಮೂಡಿ ಮುಳುಗಿ, ಮುಕುಂದನನ್ನು ಪೂಜಿಸಿ ಅವನ ಪದತಲದ ತುಲಸಿಯನ್ನು ಮುಡಿದ ಕಲಿ ಚಂದ್ರಹಾಸನನ್ನು ಅರ್ಜುನ ನೋಡಿದನು. ತುಂಬಿ ಬಂದ ಗೌರವಗಳೊಡನೆ ಶ್ರೀಕೃಷ್ಣನಲ್ಲಿ ಬಿನ್ನವಿಸಿಕೊಂಡನು:

'ನನ್ನ ಪುಣ್ಯ ಫಲದಿಂದ ಜ್ಞಾನವೃದ್ಧನೂ, ತಪೋವೃದ್ಧನೂ, ವಯೋವೃದ್ಧನೂ ಆದ ಚಂದ್ರಹಾಸನನ್ನು ನೋಡಿದೆ. ಈತನನ್ನು ಜಯಿಸುವುದು ಹೇಗೆ?'

'ಚಿಕ್ಕಂದಿನಿಂದ ನನ್ನನ್ನೇ ಧ್ಯಾನಿಸುತ್ತಿರುವ ಈತನಿಗೆ ನಾನು ಪ್ರಸನ್ನನಾಗಿದ್ದೇನೆ'.

ಶ್ರೀಹರಿಯು ತನ್ನ ದಿವ್ಯ ಮಂಗಳರೂಪವನ್ನು ಭಾಗವತ ಶಿರೋಮಣಿ ಚಂದ್ರಹಾಸನಿಗೆ ತೋರಿಸಿದನು.

ಶಂಖ ಚಕ್ರ ಪದ್ಮ ಗದೆಗಳನ್ನು ಹಿಡಿದು, ಪೀತಾಂಬರವನ್ನುಟ್ಟು, ಕೌಸ್ತುಭರತ್ನಾಲಂಕೃತನಾಗಿ, ಸಕಲಾಭರಣಗಳಿಂದ ಭೂಷಿತನಾಗಿ, ದಿವ್ಯ ತುಲಸಿ ಮಾಲೆಯೊಡನೆ ಲಾವಣ್ಯಮಯ ದೇಹಕಾಂತಿಯಿಂದ, ಕರುಣರಸಭರಿತನಾಗಿರುವ, ಸಿರಿಮೊಗದ ಶ್ರೀಕೃಷ್ಣನನ್ನು ರಥಾಗ್ರದಲ್ಲಿ ಕಂಡು ಚಂದ್ರಹಾಸನು ಆನಂದಭರಿತನಾದನು. ಭಯಭಕ್ತಿಯಿಂದ ರಥದ ಬಳಿಗೆ ಓಡಿ ಶ್ರೀಹರಿಯ ಪವಿತ್ರ ಮಂಗಳ ಕೋಮಲ ಪಾದಪದ್ಮಗಳಿಗೆ ನಮಸ್ಕರಿಸಿ ಧನ್ಯಭಾವಕ್ಕೊಳಗಾದನು. ಮುರಹರಿಯು ಕೃಪೆದೋರಿ ತಬ್ಬಿಕೊಂಡನು. ಅರ್ಜುನನು ಪಾಪರಹಿತನಾದ ಚಂದ್ರಹಾಸನನ್ನು ಗಾಢವಾಗಿ ಆಲಂಗಿಸಿಕೊಂಡನು. ಚಂದ್ರಹಾಸನು ಆನಂದಾಶ್ರುಗಳೊಡನೆ,

'ನಮಗೆಲ್ಲರಿಗೂ ಶ್ರೀಹರಿಯು ಆಶ್ರಯಧಾತನಾಗಿರುವಾಗ; ಶೂರನಾದ ನಿನ್ನೊಡನೆ ಯುದ್ಧ ಮಾಡಿದರೆ, ಧರ್ಮರಾಯನ ಯಾಗ ಕೊನೆಯಾಗದೆ ನಿಂತು ಹೋಗುವುದು. ನಿನ್ನ ಅಶ್ವಗಳನ್ನು ತರಿಸಿಕೊಡುವೆನು' ಎಂದು ಹೇಳಿ ಕುದುರೆಗಾವಲಿಗೆ ಹೋಗಿದ್ದ ಮಕ್ಕಳನ್ನು ಬರಮಾಡಿಕೊಂಡು, ಕುದುರೆಗಳನ್ನು ಅರ್ಜುನನಿಗೆ ಒಪ್ಪಿಸಿದನು. ಪಟ್ಟಣವನ್ನು ಅಲಂಕರಿಸಿ ಎಲ್ಲರನ್ನೂ ಸಂಭ್ರಮದಿಂದ ಕುಂತಳಪುರಕ್ಕೆ ಕರೆದೊಯ್ದನು. ಚಂದ್ರಹಾಸನ ಪ್ರಜೆಗಳು ಶ್ರೀಕೃಷ್ಣನ ದರ್ಶನದಿಂದ ಪಾವನರಾದರು. ದುಷ್ಟಬುದ್ಧಿಯು ತನ್ನ ಮಗನೊಡನೆ ಬಂದು, ಭಕ್ತಿಯಿಂದ ಶರಣಾಗಿ ಪಾಪರಹಿತನಾದನು. ಪುರೋಹಿತ ಗಾಲವನು ಶ್ರೀಕೃಷ್ಣನನ್ನು ವಿಧಿವತ್ತಾಗಿ ಪೂಜಿಸಿದನು.

ಚಂದ್ರಹಾಸನು ಒಲ್ಮೆಯಿಂದ ತನ್ನ ರಾಜ್ಯವನ್ನು ಪೀತಾಂಬರಧಾರಿ ಶ್ರೀಕೃಷ್ಣನಿಗೆ ಸಮರ್ಪಿಸಿದನು. ಅರ್ಜುನನ ಸಮ್ಮತಿಯೊಡನೆ ಶ್ರೀಕೃಷ್ಣನು ಆ ರಾಜ್ಯವನ್ನು ವಿಷಯೆಯ ಮಗ ಮಕರಧ್ವಜನಿಗೆ ಕೊಟ್ಟನು. ಅಲ್ಲಿಯ ಅಮೂಲ್ಯ ವಸ್ತುಗಳನ್ನು ಹಸ್ತಿನಾಪುರಕ್ಕೆ ಕಳುಹಿಸಿದನು. ತಮ್ಮೊಡನೆ ಬಂದಿರುವ ರಾಜಮಂಡಲಿ ಸಹಿತ ಮೂರು ದಿನಗಳನ್ನು ಕುಂತಳ ನಗರದಲ್ಲಿ ಕಳೆದನು. ಚಂದ್ರಹಾಸನು 'ನಾನು ವೃದ್ಧನಾದೆ. ಶ್ರೀಹರಿ ದರ್ಶನವಾದ ಮೇಲೆ ಇನ್ನು ಮೋಕ್ಷ ತಪ್ಪದು. ಧರ್ಮರಾಜನ ಯಜ್ಞ ಪೂರ್ತಿ ಆದ ಬಳಿಕ, ನಾನು ಅಸುರಾರಿಗೆ ಈ ದೇಹವನ್ನು ಅರ್ಪಿಸಲು ತಪೋವನಕ್ಕೆ ಹೋಗುವೆನು' ಎಂದು ಹೇಳಿ ಅರ್ಜುನನೊಡನೆ ಹೋದನು.

# ಬಕದಾಲ್ಭ್ಯಮುನಿ

ಎಲೈ ಜನಮೇಜಯರಾಯನೇ ಮುಂದಿನ ಅಚ್ಚರಿಯನ್ನು ಕೇಳು. ಕುದುರೆಗಳು ವಾಯುವೇಗದಿಂದ ಉತ್ತರದಿಕ್ಕಿನ ಸಮುದ್ರವನ್ನುಹೊಕ್ಕು ನಡೆದವು. ಆ ಕುದುರೆಗಳೊಡನೆ ಸಮುದ್ರದಲ್ಲಿ ನಡೆದುಹೋಗುವ ಉಪಾಯವನ್ನು ಕಾಣದೆ ಅರ್ಜುನಾದಿಗಳು ಶ್ರೀಕೃಷ್ಣನನ್ನು ಕುರಿತು ಇದಕ್ಕೆ ಯುಕ್ತಮಾರ್ಗವೇನೆಂದು ಕೇಳಿದರು. ಶ್ರೀಕೃಷ್ಣನು ಎಲ್ಲರನ್ನುದ್ದೇಶಿಸಿ,

'ಅರ್ಜುನ, ಮಯೂರಧ್ವಜ, ಪ್ರದ್ಯುಮ್ನ, ಬಭ್ರುವಾಹನ, ಹಂಸಧ್ವಜ ಈ ಐದು ದೊರೆಗಳು ಇಂದ್ರನ ಹಾಗೆ ಹತ್ತು ದಿಕ್ಕುಗಳಲ್ಲಿಯೂ ರಥನಡೆಸಬಲ್ಲ ಪರಾಕ್ರಮಿಗಳು. ನನ್ನೊಡನೆ ಬರಲಿ' ಎಂದು ಹೇಳಿ ಆ ಐವರನ್ನು ಕರೆದುಕೊಂಡು ಸಮುದ್ರ ಹೊಕ್ಕನು. ಸಾಗರದ ಮಧ್ಯದಲ್ಲಿರುವ ನಡುಗಡ್ಡೆಗೆ ಆ ಕುದುರೆಗಳು ಅತಿವೇಗದಿಂದ ಹೋದವು. ಅಲ್ಲಿ ಅವರು, ಒಣಗಿ ಬಲೆಬಲೆಯಾದ ಆಲದಎಲೆಯನ್ನು ತಲೆಗೆ ಮರೆಯಾಗಿಟ್ಟುಕೊಂಡು ಆತ್ಮಧ್ಯಾನದಲ್ಲಿರುವ ಬಕದಾಲ್ಭ್ಯಋಷಿಯನ್ನು ಕಂಡರು.

ಅರ್ಜುನಾದಿಗಳು ರಥದಿಂದಿಳಿದು, ವಿನಯ ಪೂರ್ವಕವಾಗಿ ಋಷಿಯನ್ನು ಎಚ್ಚರಿಸಿ ನಮಸ್ಕರಿಸಿದರು. ಆತ ಕಣ್ಬಿಟ್ಟು ನುಡಿದನು:

'ಪುರುಷೋತ್ತಮನಾದ ಶ್ರೀಹರಿಯು ಕ್ಷಣಕಾಲ ಜೀವಿಸುವ ಐವರು ಮನುಷ್ಯರೊಡನೆ ಬಂದಿದ್ದಾನೆ!ಇನ್ನು ಇಲ್ಲಿ ಇರಲಾಗದು. ಇನ್ನು ಮುಂದೆ ಸುಖ ಉಂಟಾಗದು. ಅಲ್ಪವಾದ ಆಯಸ್ಸಿನಲ್ಲಿ ಏನು ಸಾಧಿಸಲಿ?'

ಆಶ್ಚರ್ಯ ಚಕಿತನಾದ ಅರ್ಜುನನು ಕೇಳಿದನು,

'ನಿಮ್ಮ ಮೊಣಕಾಲುಗಳಹತ್ತಿರ ಹುಟ್ಟಿ ಬೆಳೆದಿರುವ ಮುತ್ತುಗದ ಮರದ ಮೇಲೆ ಪಕ್ಷಿಗಳು ಗೂಡುಕಟ್ಟಿ ಜೀವಿಸುತ್ತಿವೆ. ಹುಲ್ಲೆಗಳು ನಿಮ್ಮ ದೇಹಕ್ಕೆ ತಮ್ಮ ಮೈಉಜ್ಜಿ ನವೆ ತೀರಿಸಿಕೊಳ್ಳುತ್ತಿವೆ, ನಿಮ್ಮ ಸುತ್ತಲೂ ಹುತ್ತಬೆಳೆದಿದೆ. ನಿಮ್ಮ ತೋಳುಗಳಬಳಿ ಸರ್ಪಗಳು ಆಡುತ್ತಿವೆ. ವಾಸಕ್ಕೊಂದುಮನೆ ಕಟ್ಟಿಕೊಳ್ಳದೆ, ನೀವೇಕೆ ಈ ಪತ್ರವನ್ನು ತಲೆಯಮೇಲೆ ಹಿಡಿದುಕೊಂಡಿರುವಿರಿ?'

'ಅಯ್ಯಾ, ಸ್ತ್ರೀ ಪರಿಗ್ರಹದಿಂದ ವೃದ್ಧಿ ಹೊಂದುವ ಮನುಷ್ಯನು ಒಳಿತು ಕೆಡಕನ್ನು ಯೋಚಿಸುತ್ತಾನೆಯೇ? ಅವನಿಗೆ ಮುಕ್ತಿ ಎಲ್ಲಿಂದ ಬಂದೀತು? ಕನಸಿನ ಸುಖಕ್ಕೆ ಆಸೆಪಟ್ಟು ಅಧೋಗತಿಗೆ ಬೀಳುತ್ತಾನೆ. ಈ ಪ್ರಪಂಚವು ವನಿತೆಯ ತೊಡಕಿನಿಂದ ಕೆಡುತ್ತಿದೆ. ಜನನ ಮರಣಗಳ ಆಯಾಸ ಅವನನ್ನು ಬಿಡುವುದಿಲ್ಲ! ಅದನ್ನು ಏನೆಂದು ವರ್ಣಿಸಲಿ!

'ಮದುವೆ ಒಲ್ಲದೆ, ಸ್ವಲ್ಪ ಕಾಲದಲ್ಲಿಯೇ ನಾಶವಾಗುವ ಈ ಕಾಯ ಹೇಗಿದ್ದರೆ ಏನು? ಎಂದು ವೈರಾಗ್ಯದಿಂದ ಕೂಡಿ, ನೆತ್ತಿಗೆ ತರಗೆಲೆಯನ್ನು ಮರೆಮಾಡಿಕೊಂಡು ಹೊತ್ತು ಕಳೆಯುತ್ತಿದ್ದೇನೆ.'

**ಆಲದೆಲೆಯ ಮೇಲೆ ಶ್ರೀಕೃಷ್ಣ**

'ಮುನಿವರ್ಯರೇ, ಮಹಾತ್ಮರಾದ ತಮಗೆ ಅಲ್ಪಾಯುಷ್ಯವೇ? ಶಿವ ಶಿವಾ! ನಿಮ್ಮ ನೆತ್ತಿಕಾಯುವ ತರಗೆಲೆ ಎಷ್ಟುದಿನಗಳಿಂದ ಅಲ್ಲಿದೆ?'

'ಮಾರ್ಕಂಡೇಯ, ರೋಮಶಋಷಿಗಳು ಬೇರೆಬೇರೆಯಾಗಿ ಅಳಿದು ಹೋದರು. ಆ ಋಷಿಗಳೆಷ್ಟು ಜನ ಎಂದು ತಿಳಿಯೆ! ಸತ್ಯ ಲೋಕವನ್ನಾಳಿದ ಇಪ್ಪತ್ತು ಜನ ಬ್ರಹ್ಮದೇವರು ಮಡಿದರು! ಚತುರ್ದಶಭುವನಗಳ ಸೃಷ್ಟಿಯೂ, ಪ್ರಳಯವೂ ಆಗುವಾಗ ಯಾವ ಪದವಿಯೂ ಶಾಶ್ವತವಲ್ಲ ಎಂದು ತಿಳಿದು ಈ ಬಯಲಿನಲ್ಲಿ ನಾನಿರುವೆನು!.

'ಬಾರಿಬಾರಿಗೆ ಆಗುವ ಮಹಾಪ್ರಳಯಗಳಲ್ಲಿ ಏನೂ ಇಲ್ಲದಿರಲು, ಅಸಂಖ್ಯಾತ ರೆಂಬೆಕೊಂಬೆಗಳಿಂದ ಕೂಡಿ ಚಿಗುರಿ ಶೋಭಿಸುವ ಒಂದು ಆಲದಮರ ಕಾಣಿಸುತ್ತಿತ್ತು. ಅದರ ಒಂದು ಎಲೆಯಮೇಲೆ ತನ್ನ ಮೃದುವಾದ ಪಾದಪದ್ಮದ ಹೆಬ್ಬೆರಳನ್ನು ತನ್ನ ಮನೋಹರ ಕೈಗಳಿಂದ ಹಿಡಿದು ಮುಖಕಮಲದಲ್ಲಿಟ್ಟುಕೊಂಡು ನಗುತ್ತ, ಅಳುತ್ತ ಬಾಲಲೀಲೆಯಿಂದಿರುವ ಬಾಲಕನು ಮಲಗಿಕೊಂಡಿರುವುದನ್ನು ನೋಡಿದೆನು!

'ಮಹಾಪ್ರಳಯದಲ್ಲಿ ಮುಳುಗಿಹೋದ ನನ್ನನ್ನು ಆ ಬಾಲಕ ಮೈದೋರಿ ಮಾತಾಡಿಸದೆ, ವಿಚಾರಿಸದೆ, ಸುಖದುಃಖ ಕೇಳದೆ ದೂರದಲ್ಲಿಯೇ ಇರುತ್ತಿದ್ದನು. ಇಂದು ನಿಮ್ಮೈವರನ್ನು ಕೂಡಿಕೊಂಡು ಇಲ್ಲಿಗೆ ಬಂದು ಶ್ರೀಮನ್ನಾರಾಯಣನು ಕೃಷ್ಣರೂಪದಿಂದ ಕರುಣಿಸಿದ್ದಾನೆ. ಈತನೇ ನನಗೆ ಆಶ್ರಯ, ಆಧಾರ, ಈತನನ್ನು ಬಿಡೆನು!'

ಎಲೈ ಜನಮೇಜಯರಾಯನೇ ಕೇಳು. ಹೀಗೆ ಹೇಳಿ ಹರ್ಷದಿಂದ ಬಂದ ಬಕದಾಲ್ಭ್ಯಮುನಿಯು ಶ್ರೀಕೃಷ್ಣನನ್ನು ತಬ್ಬಿಕೊಂಡನು. ಪಾವನಗೊಂಡ ಉತ್ಸಾಹದಲ್ಲಿ ಅರ್ಜುನನಿಗೆ,

'ಶ್ರೀಹರಿಯ ದೇಹವೇ ಸರ್ವಕಾಲಕ್ಕೂ ನನ್ನ ವಾಸದ ಮನೆ. ನನ್ನನ್ನು ಅನುಸರಿಸುವ ಬಾಳಸಂಗಾತಿ ಮುಕ್ತಿಕಾಂತೆ. ಅದಕ್ಕಾಗಿ ಆಸೆಪಟ್ಟು ತರಗೆಲೆ ಹಿಡಿದು ತಪೋನಿರತನಾಗಿದ್ದೆ.'

'ತಾವು ಮಹಾಪುರುಷರು, ತಾವಿಷ್ಟು ದಿನ ಬದುಕಿರುವುದು ಅಚ್ಚರಿ! ನಮಗೆಲ್ಲ ನೀವೇ ಪೂಜ್ಯರು. ತಾವು ಬಂದರೆ ಧರ್ಮರಾಜನ ಯಾಗ ಸಫಲವಾಗುವುದು.'

**ಕೋವಿದರ್ ಗರ್ವಮಂ ಮಾಡಲಾಗದು**

'ಎಲೈ ಪಾರ್ಥನೇ ಶ್ರೀಹರಿಯೇ ಸರ್ವವೇದದ ಮೂಲ. ಅವನ ಹೊರತಾಗಿ ಭೂಮಂಡಲದಲ್ಲಿ ಲೋಕವಂದ್ಯನೆಂಬ ಗುರುತ್ವದ ಹೆಮ್ಮೆ ಯಾರಿಗಿದೆ?'

'ತಮ್ಮ ಅನುಭವನುಡಿಯೇ ನಮಗೆ ಶ್ರೀಕೃಷ್ಣನನ್ನು ಅರಿಯುವ ಬೆಳಕು'.

'ಅರ್ಜುನನೇ ಕೇಳು. ನಾನು ಸಮುದ್ರದ ನಡುಗಡ್ಡೆಯಲ್ಲಿರಲು, ಮಹಾ ಪ್ರಳಯದಲ್ಲಿ ಪದ್ಮನೆಂಬ ನಲವತ್ತುವರ್ಷ ಪ್ರಾಯದವನಾದ ನಾಲ್ಕುಮುಖದ ಬ್ರಹ್ಮನಿದ್ದನು. ಅವನು ಹಂಸವೇರಿ ಬಂದು ನನ್ನೆದುರು ನಿಂದು ವರಪ್ರದಾನ ಮಾಡುವೆ ಕೇಳು ಎಂದನು. ನಾನು–ತೊಲಗತ್ತ, ನಾನು ನಿನ್ನಂಥವರನ್ನು ಸಾಕಷ್ಟು ಕಂಡಿರುವೆ. ವರವನ್ನು ಇತರರಿಗೆ ಕೊಡು ಎನ್ನಲು–ನನ್ನಂತಹ ನಾಲ್ಕು ಮುಖದವರನ್ನು ತೋರಿಸು ಎಂದನು. ಆಗ ಲೋಕನಡುಗಿಸುವ ಬಿರುಗಾಳಿ ಬಂದು ನಮ್ಮಿಬ್ಬರನ್ನು ಆಕಾಶದತ್ತ ಸೆಳೆದೊಯ್ದಿತು. ಶತಕೋಟಿ ಬ್ರಹ್ಮಾಂಡಗಳಲ್ಲಿ ಸುತ್ತುಹಾಕಿತು. ಅತ್ತಿಯ ಮರದಲ್ಲಿ ತುಂಬಿರುವ ಹಣ್ಣಿನ ಹಾಗೆ ಮಹಾವಿಷ್ಣುವಿನ ಮೈಯಲ್ಲಿ ತುಂಬಿಕೊಂಡಿರುವ ಅನಂತ ಬ್ರಹ್ಮಾಂಡಗಳನ್ನು ಸುತ್ತಿ ಕೊನೆಗೆ ಎಂಟು ಮುಖದ ಬ್ರಹ್ಮನ ಲೋಕದಲ್ಲಿ ಇಳಿದೆವು. ಅವನು–ನಿಮ್ಮನ್ನು ಸತ್ಕರಿಸಲು. ಶೌಚಾಲಯಕ್ಕೆ ನೀರನ್ನು ಒದಗಿಸುವ ನಿಮ್ಮ ಸಮಾನರಾದ ವಟುಗಳಿದ್ದಾರೆ ಎಂದನು.

'ಅವನು ನಮ್ಮನ್ನು ಹೀಯಾಳಿಸುವಷ್ಟರಲ್ಲಿ ಇನ್ನೊಂದು ಸುಳಿಗಾಳಿ ನಮ್ಮೆಲ್ಲರನ್ನು ಹೊತ್ತು ಹದಿನಾರು ಮುಖದ ಬ್ರಹ್ಮನಲ್ಲಿಗೆ ಹೋಯಿತು. ಅವನೂ ಅಹಂಕಾರಿ. ಅಲ್ಲಿ ನಮ್ಮನ್ನು ಕುರೂಪಿಗಳೆಂದು ಅಪಹಾಸ್ಯ ಮಾಡಿದರು. ಅಲ್ಲಿಂದ ಮತ್ತೊಂದು ಬಿರುಗಾಳಿ ನಮ್ಮೆಲ್ಲರನ್ನು ಮೂವತ್ತೆರಡು ಮುಖದ ಬ್ರಹ್ಮನತ್ತ ಕೊಂಡೊಯ್ದಿತು. ಅಲ್ಲಿ ನಾವು ತಲೆಕೆಳಗಾಗಿ ಪ್ರವೇಶಿಸಿದೆವು! ಅವನು ಸೂರ್ಯನ ಮುಂದೆ ಮಿಣುಕುಹುಳುಗಳು ಪ್ರಕಾಶಿಸಬಲ್ಲವೇ! ಎಂದು ಜರಿದನು.

'ಹೀಗೆ ದ್ವಿಗುಣವಾದ ಮುಖವುಳ್ಳ ಬ್ರಹ್ಮದೇವರ ಲೋಕಗಳನ್ನು ನೋಡಿದೆವು. ನಾನಾಲೋಕ ಸುತ್ತಿ–ದೇವರ್ಷಿಗಳು, ಸನಕಾದಿಗಳ ಸಮೂಹದಲ್ಲಿ ಪ್ರಕಾಶಿಸುತ್ತಿರುವ ಸಹಸ್ರಮುಖದ ಬ್ರಹ್ಮನನ್ನು ಕಂಡು ನಮಸ್ಕರಿಸಿದೆವು. ಆತ ನೀವು ಬಳಲಿರುವಿರಿ. ನಿಮ್ಮ ಕರುಣದಿಂದ ನಾನು ಇಲ್ಲಿರುವೆ' ಎಂದು ನಮ್ಮನ್ನು ಸಮಾಧಾನಪಡಿಸಿದನು. ನಿಗರ್ವಿಯಾಗಿ ಅಕ್ಕರೆಯಿಂದ ಆದರಿಸಿ ಕಳುಹಿಸಿದನು. ಅದು ಕನಸೋ, ಭ್ರಮೆಯೋ ಎಂಬಂತಾಗಿ ಇತರರು ತಮ್ಮ ಗರ್ವತೊರೆದು ತಮ್ಮ ತಮ್ಮ ಲೋಕಕ್ಕೆ ಹೋದರು. ನಾನು ಅಂದಿನಿಂದ ಇಂದಿನವರೆಗೆ, ಇಲ್ಲಿಯೇ ವಾಸವಾಗಿರುವೆನು.

'ಆದಕಾರಣ ಅರ್ಜುನನೇ, ಕೋವಿದರ್ ಗರ್ವಮಂ ಮಾಡಲಾಗದು. ಅಂದು ಕಂಡ ಸಹಸ್ರಮುಖದ ಪರಮಾತ್ಮನೇ, ಈಗ ಪ್ರಪಂಚದಲ್ಲಿ ಅವತಾರಿಯಾಗಿ ಗೋಚರಿಸುತ್ತಿರುವ ಶ್ರೀಕೃಷ್ಣ !'

ಅದನ್ನು ಕೇಳಿ ಅರ್ಜುನಾದಿಗಳು ಬಕದಾಲ್ಭ್ಯಮುನಿಯನ್ನು ಪೂಜಿಸಿದರು. ಭಗವಂತ ಶ್ರೀಕೃಷ್ಣನು ಮುನಿಯನ್ನು ಯಾಗಕ್ಕೆ ಬಿಜಯಂಗೈಸಬೇಕೆಂದು ಒಪ್ಪಿಸಿದನು. ಅವರೊಡನೆ ಎಲ್ಲರೂ ಸಮುದ್ರದ ತಡಿಗೆ ಬಂದರು. ಬಕದಾಲ್ಭ್ಯಮುನಿಯನ್ನು ಪಾಲಕಿಯಲ್ಲಿ ಹಸ್ತಿನಾವತಿಗೆ ಕಳುಹಿಸಿದರು.

**ಧೃತರಾಷ್ಟ್ರನ ಮಗಳು ದುಶ್ಶಳೆ**

ಎಲೈ ಜನಮೇಜಯನೇ ಕೇಳು. ಯಜ್ಞಾಶ್ವಗಳು ಸಿಂಧುದೇಶಕ್ಕೆ ಹೋದವು. ತಮ್ಮ ಪಟ್ಟಣಕ್ಕೆ ಕೃಷ್ಣಾರ್ಜುನರು ಬರುವ ವಾರ್ತೆಯನ್ನು ಕೇಳಿ ದುಶ್ಶಳೆಯ ಮಗ ಭಯದಿಂದ ಮೂರ್ಛೆಹೋದನು. ಮಂತ್ರಿಗಳು ಪುರಜನರು ತಲ್ಲಣಿಸಿದರು. ಗಾಂಧಾರಿಯ ಮಗಳು ದುಶ್ಶಳೆ ಬೆದರಿ ಕೃಷ್ಣಾರ್ಜುನರನ್ನು ಕಾಣಲು ಬಂದು,

'ಓ ಜಗನ್ನಾಥ, ಹೆಂಗಸಾದ ನನ್ನ ಮೊರೆಯನ್ನು ಲಾಲಿಸು. ಭಾರತಯುದ್ಧದಲ್ಲಿ ಅರ್ಜುನನು ನನ್ನಪತಿ ಜಯದ್ರಥನನ್ನು ಹಗೆಯೆಂದು ತಿಳಿದು ಸಂಹಾರಮಾಡಿದನು. ಈಗ ನನ್ನಮಗ ಭಯದಿಂದ ನಡುಗುತ್ತಿದ್ದಾನೆ. ಕಾಪಾಡು' ಎಂದು ಪ್ರಾರ್ಥಿಸಲು, ಅರ್ಜುನ ರಥದಿಂದಿಳಿದು ಅಕ್ಕ ದುಶ್ಶಳೆಯ ಪಾದಗಳಿಗೆ ನಮಿಸಿ,

'ಅಕ್ಕ ನಾನು ಮಾಡಿದ ಅನ್ಯಾಯವನ್ನು ಸೈರಿಸು, ನಿನ್ನ ಮಗನನ್ನು ನೋಯಿಸುವುದಿಲ್ಲ. ನಿನಗೆ ರಾಜ್ಯವನ್ನು, ಅಪಾರ ಕರಿ ತುರಗಗಳನ್ನು ಕೊಟ್ಟು ಅಶ್ವಮೇಧಯಾಗಕ್ಕೆ ಕರೆದು ಕೊಂಡು ಹೋಗುವೆ.'

ಅರ್ಜುನನ ನುಡಿಗೆ ಅವಳ ದುಃಖ ಇಮ್ಮಡಿಸಿತು. ಶ್ರೀಕೃಷ್ಣನ ಪಾದದ ಮೇಲೆ ಬಿದ್ದು ಕಂಬನಿದುಂಬಿ,

'ದೇವ, ಸಕಲ ಪ್ರಾಣಿಗಳ ಹೃದಯದಲ್ಲಿ ನೀನಿರುವೆ. ದ್ರೌಪದಿಯ ಮಾನವನ್ನು ಕಾಪಾಡಿದ, ಭಕ್ತರ ದುಃಖನಿವಾರಕ ನೀನಾಗಿರುವೆ. ನನ್ನನ್ನು ಶೋಕಾಗ್ನಿ ಸುಡುತ್ತಿದೆ. ವಿಧವೆಯಾದ ನಾನು ಯಾಗಕ್ಕೆ ಬರಬಹುದೇ? ಆನೆ ಕುದುರೆಗಳನ್ನು ಕಾಪಾಡತಕ್ಕವರು ಯಾರು? ನನ್ನ ಮಗನಿನ್ನೂ ಬಾಲಕ. ನೀನೇ ಸಂರಕ್ಷಿಸಬೇಕು.'

ಶ್ರೀಕೃಷ್ಣನು ಆಕೆಯನ್ನು ಹಿಡಿದೆತ್ತಿ ಸಮಾಧಾನಪಡಿಸಿ ಅರ್ಜುನನೊಡನೆ ಜಯದ್ರಥನ ನಗರ ಪ್ರವೇಶ ಮಾಡಿದನು. ಶ್ರೀಹರಿಯು ದುಶ್ಶಳೆಯ ಮಗನನ್ನು ಮೈದಡವಿ ಮುದ್ದಿಸಿದನು. ಸಮಸ್ತ ಜನರು ಪಾಪಪರಿಹಾರಕ ಶ್ರೀಕೃಷ್ಣನನ್ನು ಕಂಡರು. ನಗರ ಗುಡಿತೋರಣಗಳಿಂದ ಶೃಂಗಾರಗೊಂಡು, ಮಂಗಳವಾದ್ಯಗಳು ಮೊಳಗಿದುವು. ಅರ್ಜುನನು ದುಖದಿಂದ ಕಣ್ಣೀರು ಕರೆದು,

'ಅಕ್ಕ ಯಾಗಕ್ಕೆ ನಿನ್ನ ಮಗನೊಡನೆ ಬಂದು. ಕುಂತಿ ದ್ರೌಪದಿಯರನ್ನು ನೋಡು' ಎಂದು ಸಮಾಧಾನಪಡಿಸಿದನು. ಕೃಷ್ಣಾರ್ಜುನರು ಸತ್ಕೃತರಾದರು. ದುಶ್ಶಳೆಯು ಮತ್ತೆ ಕೃಷ್ಣನನ್ನು,

'ಯಾವತೆರನಾಗಿ ನಿನ್ನ ಭಕ್ತರನ್ನು ಉದ್ಧರಿಸುವೆಯೋ ಹಾಗೆ ನನ್ನನ್ನು ಉದ್ಧಾರ ಮಾಡು' ಎಂದು ಪ್ರಯಾಣಕ್ಕೆ ಸಿದ್ಧಳಾದಳು. ಸಿಂಧೂದೇಶದ ಅಮೂಲ್ಯ ವಸ್ತುಗಳೊಡನೆ ದುಶ್ಶಳೆಯನ್ನು ಕರೆದುಕೊಂಡು, ಎಲ್ಲ ರಾಜರೊಡಗೂಡಿ ಕೃಷ್ಣಾರ್ಜುನರು ಹಸ್ತಿನಾಪುರಕ್ಕೆ ಬಂದು ಒಂದುಗಾವುದ ದೂರದಲ್ಲಿ ತಂಗಿದರು.

**ಯಾಗಮಂಟಪದಲ್ಲಿ ಧರ್ಮರಾಯನ ದರ್ಶನ**

ಜನಮೇಜಯರಾಯನೇ ಕೇಳು, ಶ್ರೀಕೃಷ್ಣನು ಎಲ್ಲಾ ದೊರೆಗಳನ್ನೂ, ಅವರವರ ಪಡೆಗಳನ್ನು ಬೇರೆಬೇರೆಯಾಗಿ ನಿಲ್ಲಿಸಿದನು. ಅವರೆಲ್ಲರೂ ಗಂಧ ಹೂ ವಸ್ತ್ರ ಆಭರಣಗಳಿಂದ ಅಲಂಕೃತರಾಗಿ ವೈಭವದಿಂದ ಬರಬೇಕೆಂದು ಹೇಳಿದನು. ತಾನು ಧರ್ಮರಾಯನನ್ನು ನೋಡಲು ಮುಂದಾಗಿ ಹಸ್ತಿನಾವತಿಗೆ ಹೊರಟನು.

ಗಂಗಾನದಿತೀರದ ಪುಣ್ಯಕ್ಷೇತ್ರದಲ್ಲಿ ವಿಸ್ತಾರವಾಗಿ ಕಟ್ಟಿದ ರತ್ನಖಚಿತ ಯಾಗಶಾಲೆಯಲ್ಲಿ ಅಷ್ಟಾಂಗಯೋಗನಿರತನಾಗಿ, ಪತ್ನಿಸಮೇತ ಯಜ್ಞದೀಕ್ಷೆವಹಿಸಿ ನೆಲದ ಮೇಲೆ ಕುಳಿತಿದ್ದ ಧರ್ಮರಾಜನನ್ನು ಕಂಡನು. ಸಭಾಜನರು ಶ್ರೀಕೃಷ್ಣನಿಗೆ ಭಕ್ತಿಯಿಂದ ವಂದಿಸಿದರು. ಮುರಾಂತಕನು ಭೀಮನನ್ನು ಬಿಗಿದಪ್ಪಿಕೊಂಡನು. ನಕುಲಸಹದೇವರನ್ನು ಅಪ್ಪಿ ಮುದ್ದಾಡಿದನು. ದೇವಕಿ ಯಶೋದೆ ಕುಂತಿಯರಿಗೆ ನಮಸ್ಕರಿಸಿದನು. ಗಾಂಧಾರಿಯನ್ನು ಸಂತೈಸಿದನು. ದ್ರೌಪದಿ ಸುಭದ್ರೆಯರು ತನ್ನ ಪಾದಗಳಿಗೆ ಎರಗಲು, ಬಾಗಿ ಮೇಲಕ್ಕೆತ್ತಿ ನಗುಮುಖದಲ್ಲಿ ಹರಸಿದನು. ಋಷಿ ಸಮೂಹಕ್ಕೆ ವಂದಿಸಿ, ಧರ್ಮರಾಯನನ್ನು ಕುರಿತು,

'ಎಲೈ ಧರ್ಮರಾಯನೇ, ನಿನ್ನ ಅಶ್ವಮೇಧಯಾಗದ ಕುದುರೆಯು ಒಂದು ವರ್ಷದೊಳಗಾಗಿ ಭೂಮಂಡಲವನ್ನು ಸುತ್ತಿಬಂದಿದೆ. ಅದರ ಸಂಗಡ ಪ್ರಪಂಚದ ದೊರೆಗಳೆಲ್ಲರೂ ಬಂದಿದ್ದಾರೆ. ಅರ್ಜುನನ ಪ್ರತಾಪದ ಹರಹಿಗೆ ಭೂಲೋಕ ಸಾಲದಾಗಿದೆ. ಅವನು ಸಂಪಾದಿಸಿತಂದ ಐಶ್ವರ್ಯ ಮೇರುಪರ್ವತಕ್ಕಿಂತ ಎತ್ತರವಾಗಿದೆ. ಬಕದಾಲ್ಭ್ಯ ಮೊದಲಾದ ಋಷಿಗಳು ಬಂದು ಸೇರಿದ್ದಾರೆ. ಇನ್ನು ಯಜ್ಞ ಮಾಡಬಹುದು.'

'ಎಲೈ ಭಗವಂತನೇ, ನಿನ್ನ ಕರುಣಾಮೇಘದಿಂದ ಅರ್ಜುನನ ಪ್ರತಾಪವೆಂಬ ಹೊಲ

ಬೆಳೆದಿದೆ ! ರೋಮರೋಮಗಳಲ್ಲಿ ಕೋಟಿಬ್ರಹ್ಮಾಂಡಗಳಿರುವ ಮಹಾ ಮಹಿಮನಾದ ನೀನು, ಅರ್ಜುನನೊಡನೆ ಮನುಷ್ಯಾವತಾರದಲ್ಲಿ ತಿರುಗುತ್ತಿರುವೆ ! ಭಕ್ತರ ಪಾಲನೆಗೆ ನಿನ್ನ ಜೀವನವಿದೆ !

'ಸ್ವಾಮಿ, ನೀವು ಭೂಮಂಡಲದ ದೊರೆಗಳನ್ನು ಹೇಗೆ ಜಯಿಸಿದಿರಿ ಎಂಬುದನ್ನು ತಿಳಿಸಿ.'

ರುಕ್ಮಿಣೀರಮಣ ಶ್ರೀಕೃಷ್ಣನು ರಾಜಧಾನಿ ಹಸ್ತಿನಾವತಿಯನ್ನು ಬಿಟ್ಟ ದಿನದಿಂದ ಪ್ರಾರಂಭಿಸಿ, ಯಜ್ಞದ ಕುದುರೆಗಳು ಹಿಂದಿರುಗಿದವರೆಗಿನ ಎಲ್ಲ ವೃತ್ತಾಂತವನ್ನು ವಿವರಿಸಿ ಹೇಳಿದನು.

ಅನಂತರ ಧರ್ಮರಾಯನಿಂದ ಬೀಳ್ಕೊಂಡು ಭೀಮನೊಡನೆ ತನ್ನ ರಾಣಿ ವಾಸಕ್ಕೆ ಹೋದನು. ಸತ್ಯಭಾಮಾದಿಗಳು ಅಕ್ಕರೆಯಿಂದ ಆರತಿಬೆಳಗಿ ನಸುನಕ್ಕರು. ಅವರು ಸರಸದ ಮಾತುಗಳಾಡುತ್ತಿರುವಾಗ, ಸಾರಥಿಯು ಬಂದನು. ಅರ್ಜುನನು ಸಕಲ ಭೂಪಾಲರೊಡಗೂಡಿ ಹಸ್ತಿನಾಪುರದ ಸಮೀಪಕ್ಕೆ ಬಂದಿರುವುದನ್ನು ತಿಳಿಸಿದನು. ಶ್ರೀಕೃಷ್ಣನು ಯಾಗಮಂಟಪಕ್ಕೆ ಬಂದನು. ಧರ್ಮರಾಜನಿಗೆ ಅಲ್ಲಿಯೇ ಇರಲು ತಿಳಿಸಿದನು. ತಾನು ರಾಜಸಮೂಹವನ್ನೂ, ಬಕದಾಲ್ಭ್ಯಮುನಿಯನ್ನೂ ಕರೆತರುವೆನೆಂದು ಹೇಳಿದನು. ಧೃತರಾಷ್ಟ್ರ, ವಿದುರ, ಬ್ರಾಹ್ಮಣರನ್ನೊಳಗೊಂಡು ಉತ್ಸಾಹದಿಂದ ಹೊರಟನು.

ಶ್ರೀಕೃಷ್ಣನ ಆಜ್ಞೆಯಿಂದ ಪಟ್ಟಣದ ಬೀದಿಗಳು ಗುಡಿತೋರಣಗಳಿಂದ ಅಲಂಕೃತ ಗೊಂಡವು. ಕುಸುಮ ಗಂಧ ಕತ್ತುರಿಯ ಕಂಪಿನೊಡನೆ, ಪನ್ನೀರ ಸಿಂಪರಣೆ ಸೇರಿ, ಧೂಪವಾಸನೆ ಆವರಿಸಿಕೊಂಡು ನಗರ ಪರಿಮಳದಿಂದ ತುಂಬಿತು. ಕರ್ಪೂರ ತೈಲದ ಸೊಡರುಗಳಕಂಪು ರಂಜಿಸಿತು.

ಹಸ್ತಿನಾವತಿಯಜನ ಅರ್ಜುನನನ್ನು ಎದುರುಗೊಳ್ಳಲು ಆಭರಣಗಳನ್ನು ಧರಿಸಿ ಅಲಂಕೃತರಾಗಿ ಸಂಭ್ರಮಗೊಂಡು ನಡೆದರು. ನಟರು, ನರ್ತಕಿಯರು, ಮೃದಂಗಾದಿಗಳನ್ನು ನುಡಿಸುತ್ತ ಹಾಡುತ್ತ, ವಿಲಾಸಿನಿಯರು ಗುಂಪುಗೂಡಿ ನಲಿಯುತ್ತ ಸಾಗಿದರು. ರುಕ್ಮಿಣಿದೇವಿ, ಸತ್ಯಭಾಮೆ, ಜಾಂಬವತಿಯರು ಪಾಲಕಿಗಳಲ್ಲಿ ಸಂತಸದಿಂದ ಹೊರಟರು. ಸತ್ಯಭಾಮೆ ಮುಡಿದ ನವಪಾರಿಜಾತದ ಪರಿಮಳಕ್ಕೆ ದುಂಬಿಗಳು ಝೇಂಕರಿಸಿ ಹಿಂಬಾಲಿಸಿದವು !

ಎಡಬಲಗಳಲ್ಲಿ ಚತುರಂಗಸೇನೆಯು ಶಿಸ್ತಿನಿಂದ ನಿಂತಿತು. ಕೃಷ್ಣಾರ್ಜುನರು ಒಬ್ಬರನ್ನೊಬ್ಬರು ಎದುರುಗೊಂಡರು. ಎರಡು ಕುದುರೆಗಳೊಡನೆ ಬಂದ ಅರ್ಜುನನಿಗೆ ಸ್ತ್ರೀಯರು ಚಂದನ, ಮುತ್ತು, ಅಕ್ಷತೆ, ಕುಂಕುಮಮಿಶ್ರಿತವಾದ ಅರಳು, ಮೊಸರು, ಗರಿಕೆಗಳಿಂದ ಹೊಳೆವ ಚಿನ್ನದ ತಟ್ಟೆಹಿಡಿದು ಆರತಿಬೆಳಗಿದರು. ಮಸ್ತಕಕ್ಕೆ ಸೇಸೆದಳಿದರು.

ಅರ್ಜುನ, ಮನ್ಮಥ, ಯೌವನಾಶ್ವ, ಸಾತ್ಯಕಿ, ವೃಷಕೇತು, ಸಾಂಬ, ಕೃತವರ್ಮ, ಮೇಘನಾದ, ಅನುಸಾಲ್ವ, ಸುವೇಗ, ಅನಿರುದ್ಧಾದಿಗಳು ಧೃತರಾಷ್ಟ್ರ ಭೂಪತಿಯನ್ನು ಕಂಡರು. ಅನಂತರ ಹಂಸಧ್ವಜ, ಮಯೂರಧ್ವಜ, ತಾಮ್ರಧ್ವಜ, ಚಂದ್ರಹಾಸ, ಬಭ್ರುವಾಹನರು ಉಚಿತರೀತಿಯಲ್ಲಿ ದರ್ಶನಮಾಡಿದರು. ಸರ್ವರೂ ಬಕದಾಲ್ಭ್ಯಮುನಿಗೆ ನಮಸ್ಕರಿಸಿದರು. ಶ್ರೀಕೃಷ್ಣನ ನೇಮದಂತೆ ಎಲ್ಲರೂ ಅಂದಣಗಳಿಂದ ಇಳಿದು ಧರ್ಮರಾಯನನ್ನು ಕಾಣಲು ಗೋಧೂಳಿಲಗ್ನದಲ್ಲಿ ಯಾಗಶಾಲೆಗೆ ಬಂದರು.

ಮುಂಭಾಗದಲ್ಲಿ ಕುದುರೆಗಳು. ಅದರ ಹಿಂದೆ ಸಮಸ್ತ ಯಾದವ ಸೇನೆ. ತನ್ನ ಎಡಬಲದಲ್ಲಿ ಅರ್ಜುನ, ವೃಷಕೇತು, ಅವರ ಹಿಂದೆ ಹಂಸಧ್ವಜ, ಮಯೂರಧ್ವಜಾದಿ ನೃಪರು ಸಂದಣಿಸಿ ಬರುತ್ತಿರಲು; ಕರ್ಪೂರತೈಲದಿಂದುರಿವ ಶತಕೋಟಿ ಕೈ ದೀವಟಿಗೆಗಳ ಬೆಳಕಿನಲ್ಲಿ ಗೋಧೂಳಿಲಗ್ನದಲ್ಲಿ ಯುಧಿಷ್ಠಿರನನ್ನು ಕಾಣಲು ಶ್ರೀಕೃಷ್ಣನು ಬಂದನು.

ಯಜ್ಞದೀಕ್ಷಿತನಾದ ಧರ್ಮರಾಯನಿಗೆ ಅರ್ಜುನನು ಕುದುರೆಗಳನ್ನು ಒಪ್ಪಿಸಿ, ನಮಸ್ಕರಿಸಿದನು. ಅವನು ಅರ್ಜುನನನ್ನು ಅಕ್ಕರೆಯಿಂದ ಬಿಗಿದಪ್ಪಿಕೊಂಡನು. ವೃಷಕೇತು, ಪ್ರದ್ಯುಮ್ನಾದಿಗಳನ್ನು ಆನಂದದಿಂದ ಮನ್ನಿಸಿದನು.

ಶ್ರೀಕೃಷ್ಣನು ಧರ್ಮರಾಜನಿಗೆ ಹಂಸಧ್ವಜ, ವೀರವರ್ಮ, ನೀಲಧ್ವಜ, ಮಯೂರ ಧ್ವಜ, ಚಂದ್ರಹಾಸ, ಬಭ್ರುವಾಹನ ಮೊದಲಾದ ರಾಜರನ್ನು ಪರಿಚಯಿಸುತ್ತ,

'ಇವರೆಲ್ಲರೂ ನನಗೆ ಸರಿಸಮನಾದ ಪರಾಕ್ರಮಿಗಳು, ಇವರನ್ನು ಆದರದಿಂದ ಉಪಚರಿಸು' ಎಂದು ಹೇಳಿದನು. ಅವರ ಮಕ್ಕಳು, ಸಹೋದರರು, ಪ್ರಧಾನಿಗಳನ್ನು ಪರಿಚಯಿಸಿದನು. ಕಣ್ಣೆದುರು ಮೇರುಪರ್ವತದಂತೆ ರಾಶಿರಾಶಿಯಾಗಿದ್ದ ರತ್ನಾಭರಣಗಳನ್ನು ತೋರಿಸಿ, ಧರ್ಮರಾಯನಿಗೆ ಒಪ್ಪಿಸಿದನು. ರಾಜರೆಲ್ಲರೂ ಶ್ರೀಕೃಷ್ಣನನ್ನು ಬಳಸಿನಿಂತುಕೊಂಡು ಹೇಳಿದರು:

'ಎಲೈ ದೇವ, ನಿನ್ನ ದರ್ಶನದಿಂದ ಇಪ್ಪತ್ತು ಚತುರ್ಮುಖಬ್ರಹ್ಮರನ್ನು ಕಂಡ ಬಕದಾಲ್ಭ್ಯಋಷಿಯನ್ನು ನೋಡಿದೆವು. ಕುದುರೆಯೊಡನೆ ಸಂಚರಿಸಿ ದೇಶದೇಶಗಳನ್ನು ಕಂಡೆವು. ಪುಣ್ಯನಿಧಿ ಧರ್ಮರಾಯನನ್ನು ನೋಡಿದೆವು. ಧನ್ಯರಾದೆವು'.

ಅವರ ನುಡಿಗೆ ನಸುನಕ್ಕು ಶ್ರೀಕೃಷ್ಣನು, ಆ ರಾಜರೆಲ್ಲರನ್ನೂ ಸತ್ಕರಿಸಲು ಧರ್ಮಜನಿಗೆ ಆಜ್ಞಾಪಿಸಿದನು. ಧರ್ಮರಾಯನು ಅವರೆಲ್ಲರನ್ನೂ ವಿವಿಧೋಪಚಾರಗಳಿಂದ ಸತ್ಕರಿಸಿದನು. ಬಕದಾಲ್ಭ್ಯಮಹರ್ಷಿಯನ್ನು ಪೂಜಿಸಿದನು. ಸಕಲಋಷಿಗಣದಿಂದೊಡಗೂಡಿ ಯಜ್ಞೋಪಕ್ರಮಕ್ಕೆ ಸಂಕಲ್ಪಿಸಿದನು. ಶಾಸ್ತ್ರೋಕ್ತ ಕ್ರಮದಿಂದ ಇಟ್ಟಿಗೆಗಳಿಂದ ಕಟ್ಟುವ ಯಜ್ಞವೇದಿಯನ್ನು ಮಾಡಿಸಿದನು.

**ಯಾಗಕ್ಕೆ ಬಕದಾಲ್ಭ್ಯ ಬ್ರಹ್ಮ, ವ್ಯಾಸಆಚಾರ್ಯ**

ಧರ್ಮರಾಯನು ಯಾಗಭೂಮಿಯನ್ನು ನಿಶ್ಚಯಿಸಿ ನೇಗಿಲಿಗೆ ಎತ್ತುಗಳನ್ನು ಹೂಡಿ ಉತ್ತನು. ಇತರರು ಅದನ್ನು ಪರಿಮಳಯುಕ್ತ ನೀರು ಚಿಮುಕಿಸಿ ಶುದ್ಧ ಗೊಳಿಸಿದರು. ವೇದಮಂತ್ರಗಳು ವಿಧಿಸಿದಂತೆ ವ್ಯಾಸ ಬಕದಾಲ್ಭ್ಯರ ಅನುಮತಿ ಪಡೆದು ಗರುಡಾಕಾರವಾಗಿರುವ ಪಂಚವೇದಿಕೆಗಳನ್ನು ನಿರ್ಮಿಸಿದರು. ಸುತ್ತಲೂ ಎಂಟುಬಾಗಿಲುಗಳ ಮಹಾಮಂಟಪ ರಚಿಸಿದರು. ಅದನ್ನು ಗುಡಿತೋರಣ ಪತಾಕೆಗಳಿಂದ ಅಲಂಕರಿಸಿದರು. ಉಳಿದ ಇಟ್ಟಿಗೆಗಳಿಂದ ಎಂಟು ಮೂಲೆಗಳಲ್ಲಿ ಎಂಟುಯಜ್ಞಕುಂಡಗಳನ್ನು ನಿರ್ಮಿಸಿದರು. ಮುತ್ತುಗ, ಕಗ್ಗಲಿ, ಬಿಲ್ವ, ಬೇಲಗಳಿಂದ ಇಪ್ಪತ್ತೊಂದು ಯೂಪಸ್ತಂಭಗಳು ಹೋಮಸೂತ್ರದಿಂದಾವೃತವಾಗಿ ಕೆಳಗೆ ಲೋಹದ ಬಳೆಗಳನ್ನು ಹೊಂದಿದ್ದವು.

ಯಾಗಶಾಲೆಯು ಎಲ್ಲ ಅವಶ್ಯ ಯಾಗೋಪಕರಣಗಳೊಡನೆ, ಯಾಗದ ಸಕಲ ಸಾಧನಗಳ ಎಲ್ಲ ವಸ್ತುಧಾನ್ಯಗಳ ಉಗ್ರಾಣಗಳಿಂದ ಕೂಡಿ ಶ್ರೇಷ್ಠ ದರ್ಭಾಸನಗಳಿಂದ ಮನೋಹರವಾಗಿತ್ತು.

ಆ ಉತ್ತಮಾಧ್ವರಕ್ಕೆ ಬಕದಾಲ್ಭ್ಯನು ಬ್ರಹ್ಮನಾಗಿ, ವೇದವ್ಯಾಸನು ಆಚಾರ್ಯನಾದನು. ವಾಮದೇವ, ವಶಿಷ್ಠ, ಅತ್ರಿ, ಪರಾಶರ, ಭಾರದ್ವಾಜ, ಕೌಂಡಿನ್ಯ, ಗಾಲವ, ಸೌಭರಿ, ರೋಮಶ ಮೊದಲಾದವರು ಅಧ್ವರ್ಯು ಮುಂತಾದ ಋತ್ವಿಜರಾಗಿ ನಿಯಮಿತರಾದರು.

ವಿಶ್ವಾಮಿತ್ರ, ವಾಯುಭಕ್ಷ, ಪುಲಸ್ತ್ಯ, ಮಧುಚ್ಛಂದ, ಧೌಮ್ಯ, ಉಪಮನ್ಯು, ಕಪಿಲನೇತ್ರರು ಎಂಟುಬಾಗಿಲುಗಳಲ್ಲಿ ರಕ್ಷೋಘ್ನಮಂತ್ರವನ್ನು ಜಪಿಸುತ್ತ ರಕ್ಷಕರಾಗಿದ್ದರು. ಋಷಿಗಳೆಲ್ಲರೂ ನಿಯತವಾದ ಪೂಜೆಗಳನ್ನು ಮಾಡುತ್ತಿರಲು ಅವರ ಸಮಕ್ಷಮದಲ್ಲಿ ಧರ್ಮರಾಯನು ಜಿಂಕೆಯ ಕೊಂಬನ್ನು ಧರಿಸಿ ಯಾಗಕ್ಕೆ ಯಜಮಾನನಾದನು.

**ರಾಣಿಯರ ಮಂದಿರದೊಳೆಲ್ಲಿಯುಂ ಕೃಷ್ಣನಿಹನು.**

ವ್ಯಾಸಮುನಿಯು ಸಿಂಹಾಸನಾರೂಢನಾದ ಶ್ರೀಕೃಷ್ಣನನ್ನೂ, ಧರ್ಮರಾಯನನ್ನೂ, ಉಳಿದ ರಾಜರನ್ನೂ ಕುರಿತು ಯಜ್ಞನಿಮಿತ್ತವಾಗಿ ಅರುವತ್ತುನಾಲ್ಕುಜನ ದಂಪತಿಗಳು ಗಂಗಾಜಲವನ್ನು ತರಬೇಕೆಂದು ಹೇಳಿದನು.

ಜನಮೇಜಯನೇ ಕೇಳು, ಆಗ ಅನಸೂಯೆ–ಅತ್ರಿ. ಅರುಂಧತಿ–ವಶಿಷ್ಠ, ರುಕ್ಮಿಣಿ–ಶ್ರೀಕೃಷ್ಣ, ಸುಭದ್ರೆ–ಅರ್ಜುನ, ರತಿ–ಮನ್ಮಥ, ಉಷೆ–ಅನಿರುದ್ಧ, ಹಿಡಿಂಬಿ–ಭೀಮ, ಪ್ರಭದ್ರೆ–ವೃಷಕೇತು ಚಿಗುರೆಲೆಗಳಿಂದ ಅಲಂಕೃತವಾದ ರತ್ನ ಕಲಶಗಳನ್ನು ಹೊತ್ತುನಿಂತರು.

ಲೀಲಾವತಿ–ಮಯೂರಧ್ವಜ, ಸುನಂದೆ–ನೀಲಧ್ವಜ, ಪ್ರಭಾವತಿ–ಯೌವನಾಶ್ವ, ಧಮಿಲ್ಲೆ–ಅನುಸಾಲ್ವ; ಹಂಸಧ್ವಜ, ಬಭ್ರುವಾಹನ, ಚಂದ್ರಹಾಸ, ವೀರವರ್ಮ, ತಾಮ್ರ ಧ್ವಜಾದಿಗಳು ತಮ್ಮತಮ್ಮ ಪಟ್ಟಮಹಿಷಿಯರೊಡನೆ ಗಂಗಾಜಲವನ್ನು ತರಲು ಕಲಶಗಳನ್ನು ಹೊತ್ತುಹೊರಟರು. ಅವರೊಡನೆ ಅಂಗರಕ್ಷಕ ಪರಿವಾರದವರು, ವೇದಘೋಷಮಾಡುವ ಬ್ರಾಹ್ಮಣರು, ವಂದಿಮಾಗಧರು, ಸಂಗೀತ ವಾದ್ಯಗಾರರು ಕೂಡಿ ಸಾಗಿದ ಸಂಭ್ರಮ ಸೊಗಸಾಗಿತ್ತು.

ಶ್ರೀಕೃಷ್ಣನು ತಾನಾಗಿಯೇ ಮುಂದೆಹೊರಡಲು ದೇವದುಂದುಭಿಗಳು ಮೊಳಗಿದುವು. ಗಗನದಿಂದ ಹೂಮಳೆ ಸುರಿಯಿತು. ಶ್ರೀಕೃಷ್ಣನ ಲೀಲೆಯನ್ನು ನೋಡಿ ಕುಂತಿ ಮತ್ತು ದೇವಕಿಯರು ಶ್ರೀಕೃಷ್ಣನ ವಸ್ತ್ರದ ಕೊನೆಗೆ ರುಕ್ಮಿಣಿಯ ಸೆರಗನ್ನು ಬಿಗಿದುಕಟ್ಟಿದರು.

ಆ ಕೌತುಕವನ್ನು ಕಂಡ ನಾರದನು ಸತ್ಯಭಾಮೆಯ ಬಳಿಗೆಹೋಗಿ ರುಕ್ಮಿಣಿಗಿರುವ ಭಾಗ್ಯ ನಿನಗಿಲ್ಲ ಎನ್ನಲು, ಆಕೆ ಶ್ರೀಕೃಷ್ಣನು ತನ್ನ ಮನೆಯಲ್ಲಿರುವನೆಂದು ಶ್ರೀಕೃಷ್ಣನನ್ನು ತೋರಿಸಿದಳು. ಅಲ್ಲಿ ರುಕ್ಮಿಣಿಯೊಡನಿದ್ದವನು ಇಲ್ಲಿ ಮೋಹನ ರೂಪದಿಂದಿರುವುದನ್ನು ಕಂಡು ನಾರದ ಬೆರಗಾದನು. ಶ್ರೀಕೃಷ್ಣನಿಗೆ ನಮಸ್ಕರಿಸಿ ಜಾಂಬವತಿ ಮನೆಗೆ ಹೋದನು. ರುಕ್ಮಿಣಿಯ ಸಂಭ್ರಮ ನಿನಗಿಲ್ಲ ಎಂದನು. ಆಕೆ ಶ್ರೀಕೃಷ್ಣನು ನನ್ನೊಡನಿರಲು ನನಗೇಕೆ ರುಕ್ಮಿಣಿಯೊಡನೆ ಮತ್ಸರ ಎಂದಳು. ಮರಳಿ ನಾರದನು ಯಜ್ಞಶಾಲೆಗೆ ಬಂದು ನೋಡಲು ರುಕ್ಮಿಣೀಸಹಿತ ಶ್ರೀಕೃಷ್ಣನಿದ್ದನು. ಋತ್ವಿಜ, ಋಷಿಗಳಿಂದ ಹೊಗಳಿಸಿಕೊಳ್ಳುತ್ತಿದ್ದನು. ಅದನ್ನು ಕಂಡು ಆಶ್ಚರ್ಯಚಕಿತನಾದ ನಾರದನು ಶ್ರೀಲಕ್ಷ್ಮೀಕಾಂತನನ್ನು ವೇದಮಂತ್ರಗಳಿಂದ ಸ್ತುತಿಸಿದನು.

* * *

# ಅಶ್ವಮೇಧ ಯಾಗ

ಅರಸ ಜನಮೇಜಯನೇ ಕೇಳು, ವ್ಯಾಸಮುನಿಯು ಗಂಗಾತಟದಲ್ಲಿ ಋತ್ವಿಜರಿಂದ ಕೂಡಿ, ಅರುವತ್ತುನಾಲ್ಕುದಂಪತಿಗಳೊಡನೆ ಜಲದೇವತೆಗಳನ್ನು ಪೂಜಿಸಿದನು. ಹೂ, ಚಿಗುರುಗಳಿಂದ ಅಲಂಕೃತವಾದ ಕಲಶಗಳಿಗೆ ಮಂತ್ರಿಸಿದ ಜಲವನ್ನು ತುಂಬಿ ಅನಸೂಯಾದೇವಿಗೆ ಕೊಟ್ಟನು. ಅವಳು ಅದನ್ನು ಅರುಂಧತಿಯ ತಲೆಯ ಮೇಲಿಟ್ಟಳು. ಅರುಂಧತಿ ಆ ಕಲಶವನ್ನು ರುಕ್ಮಿಣಿಯ ಸುಂದರತಲೆಯ ಮೇಲಿಡುತ್ತ ನಸುನಕ್ಕು ಹೇಳಿದಳು:

'ಎಲೌ ದೇವಿ, ನಿನ್ನ ಸಿರಿಮುಡಿಗೆ ಹೂವೇ ಭಾರವಾಗುವಾಗ, ನೀರುತುಂಬಿದ ಕಳಸ ಭಾರವಾಗುವುದಿಲ್ಲವೆ!'

'ತಾಯಿ, ಗೋವರ್ಧನಧಾರಿಯಾಗಿ, ಬ್ರಹ್ಮಾಂಡವನ್ನು ಉದರದಲ್ಲಿಟ್ಟು ಕೊಂಡಿರುವ – ಶ್ರೀಕೃಷ್ಣನನ್ನೇ ಸದಾ ಹೃದಯದಲ್ಲಿಟ್ಟು ಕೊಂಡಿರುವ ನನಗೆ ಇದು ಭಾರವೇ? ಇದು ಪತಿವ್ರತೆಯರ ಧರ್ಮ. ಇದಕ್ಕೇಕೆ ಅಳುಕಲಿ!' ಎಂದು ಹುಸಿನಕ್ಕು ಮಾತು ಮುಂದುವರಿಸಿದಳು. 'ಅಮ್ಮಾ ಸುಭದ್ರೆಯ ವಿಶೇಷ ಗುಣ ಹೇಳಲು ನನಗೆ ಅಂಜಿಕೆ ಯಾಗುತ್ತಿದೆ. ಅವಳು ನಮ್ಮಹಾಗೆ ಗಂಡನನ್ನು ಸದಾ ಹೃದಯದಲ್ಲಿಟ್ಟು ಕೊಳ್ಳುವವಳಲ್ಲ! ಪ್ರೀತಿ ಹೊಮ್ಮಲು ವಿಚಾರಿಸುವಳು. ಅಲ್ಲದೊಡೆ ಅವನ ಗೊಡವೆಗೆ ಹೋಗಳು!'.

ಹೀಗೆ ಸರಸವಾಡುತ್ತ ಮುತ್ತೈದೆಯರು ಸುವರ್ಣಕಳಸಗಳನ್ನು ಹೊತ್ತು ಯಾಗಶಾಲೆಗೆ ಬಂದರು. ಮಂಗಳವಾದ್ಯಗಳು ಮೊಳಗಿದುವು. ಎಲ್ಲರ ಮೇಲೆ ಮುತ್ತುಗಳಮಳೆ ಸುರಿದವು. ಆ ಕೌತುಕವನ್ನು ನೋಡಲು ಆಕಾಶದಲ್ಲಿ ದೇವತೆಗಳು ನೆರೆದರು. ಭೂಲೋಕದಲ್ಲಿ ಮಹಾಜನರು ಗುಂಪುಗೂಡಿದರು.

ಆ ಪುಣ್ಯಜಲವನ್ನು ಪ್ರೋಕ್ಷಿಸಿ ಪಾವನ ಕುದುರೆಯನ್ನು ಯೂಪಸ್ತಂಭಕ್ಕೆ ಕಟ್ಟಿ, ಪೂಜಿಸಿದರು. ಧರ್ಮರಾಯನೂ ದ್ರೌಪದಿಯೂ ಪುಣ್ಯೋದಕದಿಂದ ಅಭಿಷಿಕ್ತರಾದರು. ಪ್ರಾಜ್ಞರಾದ ಋಷಿಗಳು ಸಮ್ಮತಿಸಿದ ವಿಧಿವಿಧಾನಗಳಿಂದ ಯಾವುದೇ ಲೋಪವಿಲ್ಲದೆ ಮಹಾಯಜ್ಞವು ನಡೆಯತೊಡಗಿತು.

ಶ್ರೀಕೃಷ್ಣನು ಯಜ್ಞಕ್ಕಾಗಿ ಬಂದ ಋಷಿಗಳ ಪಾದಗಳನ್ನು ತೊಳೆದು ಪೂಜಿಸಿದನು. ಸಾತ್ಯಕಿ ಕುಳಿತುಕೊಳ್ಳಲು ಆಸನಗಳನ್ನು ನೀಡಿದನು. ಪ್ರದ್ಯುಮ್ನನು ಚಂದನ, ಹೂ, ತಾಂಬೂಲಗಳನ್ನು ಕೊಟ್ಟನು. ಸಹದೇವನು ಅವರ ಬಿಡಾರಕ್ಕೆ ಬೇಕಾದ ವಸ್ತುಗಳನ್ನು ಒದಗಿಸಿದನು. ನಕುಲನು ಅವರ ಯೋಗ್ಯತಾನುಸಾರ ಉಪಚಾರಮಾಡಿದನು. ವೃಷಕೇತುವು ಪರಿಮಳೋದಕಗಳ ವ್ಯವಸ್ಥೆ ಮಾಡಿದನು. ಮೇಘವರ್ಣನು ಎಲ್ಲರ ಆರೈಕೆ ನೋಡಿಕೊಂಡನು. ಅನಿರುದ್ಧನು ದವಸಧಾನ್ಯಗಳ ಮೇಲ್ವಿಚಾರಕನಾದನು. ಕೃತವರ್ಮನು ಪಾಕಶಾಲೆಯ ನಿರ್ವಹಣೆಗೆ ನಿಂತನು. ಮೂರುಗಾವುದ ಉದ್ದದ ಯಜ್ಞಶಾಲೆಯಲ್ಲಿ ನೆರೆದ ಮಹಾಜನಕ್ಕೆ ಷಡ್ರಸ ಮೃಷ್ಟಾನ್ನಭೋಜನ ವ್ಯವಸ್ಥೆಯನ್ನು ಸಾಂಬ ಮೊದಲಾದವರು ನೋಡಿಕೊಂಡರು.

ಶ್ರೀಕೃಷ್ಣನ ಸಾನ್ನಿಧ್ಯದಲ್ಲಿ ಧರ್ಮರಾಯನು ನಡೆಸಿದಯಾಗವು ಸಾಂಗವಾಗಿ ನೆರವೇರುವುದು ಆಶ್ಚರ್ಯವೇ? ಅಷ್ಟಕ್ಕೂ ಶ್ರೀಕೃಷ್ಣನೇ ಯಜ್ಞಪುರುಷನಲ್ಲವೇ? ಹೇಳು ಜನಮೇಜಯ ಎಂದು ಜೈಮಿನಿ ಕೇಳಿದನು.

ಶ್ರೀಹರಿ ಎಂಬ ಕಾಮಧೇನು ಹತ್ತಿರದಲ್ಲಿರುವಾಗ ಅಸಾಧ್ಯವಾವುದು ಎಂಬಂತೆ ಧರ್ಮರಾಯನ ಯಾಗದಲ್ಲಿ ಜನರು ಉಂಡು ತೃಪ್ತಿಪಟ್ಟರು. ಭೀಮಾರ್ಜುನರು ಉಲ್ಲಾಸದಿಂದ ಗೌರವಿಸಿ ನೀಡುವ ತಾಂಬೂಲ ಹೂ, ವಸ್ತ್ರ, ಆಭರಣಗಳಿಂದ ಮಹಾಜನರು ತೃಪ್ತರಾದರು. ಯಜ್ಞಶಾಲೆಯಲ್ಲಿ ನೆರೆದ ರಾಜರು ಮತ್ತು ಋಷಿಗಳನ್ನು ಕಂಡು ಸಂತೋಷಪಟ್ಟರು.

ಚಿನ್ನ, ವಸ್ತ್ರ, ಆಭರಣ, ಮುತ್ತಿನ ಹಾರಗಳನ್ನೂ; ಆನೆ, ಕುದುರೆ, ಹಸು, ಎಮ್ಮೆಗಳನ್ನೂ; ದಾಸ, ದಾಸಿಯರನ್ನೂ; ಕೃಷ್ಣಾಜಿನ, ಶಾಲುಗಳನ್ನೂ; ಛತ್ರ, ಚಾಮರ, ವಾಹನಗಳನ್ನೂ; ಹೊಲ, ಗದ್ದೆ, ಮನೆಗಳನ್ನೂ ಭೀಮಾರ್ಜುನರು ಅಕ್ಕರೆಯಿಂದ ಯಾಚಕಾವಳಿ ತೃಪ್ತರಾಗುವಂತೆ ದಾನ ಮಾಡಿದರು.

* * *

ಯಾಗದೀಕ್ಷೆಯನ್ನು ಕೈಗೊಂಡಿರುವ ಧರ್ಮರಾಯನು ಮಂತ್ರಪೂತವಾದ ನೀರಿನಿಂದ ಸ್ನಾನಮಾಡಿದನು. ಯಜ್ಞವೇದಿಯಹತ್ತಿರಕ್ಕೆ ಹೋಗಿ ಕುದುರೆಯನ್ನು ತರಿಸಿದನು. ವೇದಮಂತ್ರಗಳನ್ನು ಪಠಿಸುತ್ತ ಯಜ್ಞಕ್ಕೆ ಆಹುತಿದೊರೆಯಿತೆಂದು ಹಿಗ್ಗಿ,

'ಎಲೈ ಕುದುರೆಯೇ ಹೋಗು. ಈ ಕ್ಷಣವೇ ನಿನಗೆ ಕುದುರೆಗಳ ಸಮೂಹದಲ್ಲಿ ಅಮರ ಪದವಿ ಉಂಟಾಗುವುದು. ಅಳಿವಿಲ್ಲದ ಶ್ರೇಷ್ಠಸ್ವರ್ಗವನ್ನು ಹೊಂದು' ಎಂದು ನುಡಿಯಲು, ಕುದುರೆಯು ಶ್ರೀಕೃಷ್ಣನನ್ನು ನೋಡುತ್ತ ತಲೆಕೊಡವಿತು. ಅದರ ಅಭಿಪ್ರಾಯ ತಿಳಿಸೆಂದು ಧರ್ಮರಾಯನು ನಕುಲನನ್ನು ಕೇಳಿದನು. ಕುದುರೆಯ ಮನೋಭಾವವನ್ನು ತಿಳಿದ ನಕುಲನು, ಕುದುರೆಯು ತಾನು ಸ್ವರ್ಗಲೋಕವನ್ನು ಒಲ್ಲೆ, ಶ್ರೀಕೃಷ್ಣನ ಸಾನ್ನಿಧ್ಯವೂ, ಈಶ್ವರಾರ್ಪಣವೂ ಇಲ್ಲದ ಅನ್ಯಯಜ್ಞಗಳಲ್ಲಿ ಮಡಿದ ಪಶುಗಳು ಸ್ವರ್ಗಫಲ ಹೊಂದುವುವು. ಈ ಅಧ್ವರಕ್ಕೆ ಶ್ರೀಕೃಷ್ಣನೇ ಫಲರೂಪಿಯಾಗಿರುವುದರಿಂದ ನಾನು ಅವನ ಶರೀರವನ್ನು ಪ್ರವೇಶಿಸುವೆ – ಎಂದು ನನ್ನೊಡನೆ ಹೇಳುತ್ತಿದೆ ಎಂದನು.

ಅದನ್ನು ಕೇಳಿ, ಆ ಆಶ್ಚರ್ಯವನ್ನು ನೋಡಲು ಸಕಲ ರಾಜರು, ಋಷಿಗಳು, ಸ್ತ್ರೀಯರು ಅಲ್ಲಿಗೆ ಬಂದರು.

**ಯಜ್ಞಾಶ್ವದ ಎಡಗಿವಿಯಿಂದ ಹಾಲಿನ ಮಹಾಧಾರೆ**

ಋಷಿಗಳು ಕುದುರೆಯನ್ನು ಯೂಪಸ್ತಂಭಕ್ಕೆ ಕಟ್ಟಿ ಅಭಿಮಂತ್ರಿಸಿದರು. ಧೌಮ್ಯನು ಭೀಮನನ್ನು ಕರೆದು 'ಭೀಮ ಕತ್ತಿಹಿಡಿದು ಸ್ಥಿರಮನಸ್ಕನಾಗಿ ಒಂದುಕ್ಷಣ ನಿಲ್ಲು' ಎಂದು ಹೇಳಿದನು. ಅನಂತರ,

'ಎಲ್ಲರೂ ನೋಡಿ! ಈ ಕುದುರೆಯನ್ನು ನಾನು ಪರೀಕ್ಷಿಸುವೆ!' ಎಂದು ಮಂತ್ರ ಜಲವನ್ನು ಚಿಮುಕಿಸಿ, ಅದರ ಎಡಗಿವಿಯನ್ನು ಅವನು ಕಷ್ಟಪಟ್ಟುಹಿಂಡಿದನು. ಅದರಿಂದ ರಕ್ತವು ಬಾರದೆ, ಹಾಲಿನ ಮಹಾಧಾರೆ ಹರಿಯಿತು!.

ಬಳಿಕ ಧೌಮ್ಯನು ಭೀಮನಿಗೆ 'ಶ್ರೀಹರಿಯು ತೃಪ್ತನಾಗುವ ಹಾಗೆ ಈ ಕುದುರೆಯ ತಲೆಯನ್ನು ಕತ್ತರಿಸು' ಎಂದು ಹೇಳಿದನು. ವೇದಘೋಷಗಳಾಗುತ್ತಿರಲು, ನವಿಲು ಗರಿಗಳಿಂದ ಅಲಂಕೃತವಾದ ಕುದುರೆಯ ತಲೆಯನ್ನು ಭೀಮನು ಕತ್ತರಿಸಿದನು. ಕಡಿದ ತಲೆ ನೆಲಕ್ಕೆಬೀಳದೆ ಆಕಾಶಕ್ಕೆಹಾರಿ ಸೂರ್ಯಮಂಡಲದಲ್ಲಿ ಅಡಗಿಕೊಂಡಿತು!

ಆ ಕುದುರೆ ಪಾವನವೆಂದು ಶ್ರೀಹರಿ ಅದರ ಎದೆಯನ್ನು ಹೊಡೆದನು. ಅದು ಭೂಮಿಗೆ ಬಿದ್ದಿತು. ಅದರ ಜೀವರೂಪ ಶ್ರೀಹರಿಯ ಮುಖದಲ್ಲಿ ಅಡಗಿತು. ಅದನ್ನು ಕಂಡ ಮುನಿಗಳೆಲ್ಲರೂ ಧರ್ಮರಾಯನನ್ನುದ್ದೇಶಿಸಿ ಹೇಳಿದರು,

'ಎಲೈ ಧರ್ಮರಾಯನೇ, ಪೂರ್ವಯುಗಗಳಲ್ಲಿ ನಡೆದ ಯಾಗಗಳಲ್ಲಿ ಇಂತಹ ಪಶು ಕಾಣಲಿಲ್ಲ. ಪವಿತ್ರವಾದ ಪಶುವು ದೊರೆತು ನಿನ್ನ ಯಜ್ಞ ಸಫಲವಾಯಿತು'.

ಜನಮೇಜಯರಾಯನೇ ಅನಂತರದ ಆಶ್ಚರ್ಯವನ್ನು ಏನೆಂದು ಹೇಳಲಿ!

ಕುದುರೆಯ ಕಳೇವರವು ಅತಿ ಶುಭ್ರವಾದ ಕರ್ಪೂರವಾಯಿತು. ಆಗ ಮುನಿಗಳು ಅದು ಶ್ರೀಕೃಷ್ಣನ ಮಹಿಮೆಯೆಂದು ವಿಸ್ಮಿತರಾದರು!

ಧರ್ಮರಾಯನು ದ್ರೌಪದಿಸಮೇತನಾಗಿ ಬಂಧುಬಾಂಧವರೊಡನೆ ಆ ಕರ್ಪೂರದಿಂದ ಹೋಮವನ್ನು ಮಾಡಲು ಕುಳಿತನು. ವೇದವ್ಯಾಸಋಷಿ ಆ ಕರ್ಪೂರವನ್ನು ಹೋಮ ಮಾಡುವ ಸೌಟಿನಿಂದ ತೆಗೆದುಕೊಂಡು, ದೇವೇಂದ್ರನನ್ನು ಆಹ್ವಾನಿಸಿದನು.

'ದೇವೇಂದ್ರನೇ, ಚಂದ್ರವಂಶ ತಿಳಕನಾದ ಧರ್ಮರಾಯನು ಈ ಯಾಗದಲ್ಲಿ ಕೊಡುವ ಆಹುತಿಯನ್ನು ಸ್ವೀಕರಿಸು. ಮುಂದೆ ಕಲಿಯುಗದಲ್ಲಿ ಈ ರೀತಿಯಲ್ಲಿ ಆಹುತಿ ಕೊಡುವವರಿಲ್ಲ.'

ಅದನ್ನು ಕೇಳಿ ಇಂದ್ರನು ಪ್ರತ್ಯಕ್ಷನಾಗಿ ನುಡಿದನು:

'ಎಲೈ ಬಾದರಾಯಣನೇ, ಇಂದು ಆಶ್ಲೇಷಾನಕ್ಷತ್ರ ಗುರುವಾರವಾಗಿದೆ, ದೊರೆ ಧರ್ಮರಾಯನು ಸಮರ್ಪಿಸುವ ಕರ್ಪೂರಆಹುತಿಯನ್ನು ನೀನು ಅಗ್ನಿಮುಖದಿಂದ ಕೊಟ್ಟರೆ, ನಾನು ಬಹಳ ಸಂತುಷ್ಟನಾಗಿ ಸ್ವೀಕರಿಸುವೆ.'

ಪ್ರತ್ಯಕ್ಷವಾದ ಇಂದ್ರಾದಿದೇವತೆಗಳಿಗೆ ವ್ಯಾಸನು ವೇದಮಂತ್ರಗಳಿಂದ ಕರ್ಪೂರವಾದ ಕುದುರೆಯ ಒಡಲನ್ನು ಸುವ್ರದಿಂದ ತೆಗೆದು ಆಹುತಿಕೊಟ್ಟನು. ಸವನ ಸಮಯದಲ್ಲಿ ಮಾಡಬೇಕಾದ ಕಾರ್ಯವೆಲ್ಲವೂ ಸಾಂಗವಾಗಿ ನಡೆಯಿತು. ತ್ರಿಜಗದ ಚರಾಚರಗಳು ತೃಪ್ತಿ ಹೊಂದಿದವು.

ಎಲೈ ಜನಮೇಜಯನೇ, ಯಜ್ಞರೂಪನಾದ ಅಂತರ್ಯಾಮಿ ಶ್ರೀಹರಿಯೇ ಈ ಯಜ್ಞವನ್ನು ನಡೆಸುವವನು, ವೇದಕರ್ಮ ನಿಪುಣ ಧೌಮ್ಯನೇ ಕರ್ತೃ, ಇಪ್ಪತ್ತು ಬ್ರಹ್ಮಪಟ್ಟವನ್ನು ನೋಡಿದ ಬಕದಾಲ್ಭ್ಯನೇ ಬ್ರಹ್ಮ, ಬ್ರಾಹ್ಮಣೋತ್ತಮನಾದ ವೇದವ್ಯಾಸನೇ ಪುರೋಹಿತ, ಧರ್ಮರಾಯನೇ ಯಜ್ಞದೀಕ್ಷಿತ, ಮಹರ್ಷಿಗಳೇ ಋತ್ವಿಜರಾಗಿರುವಾಗ ಈ ಯಜ್ಞವು ಹೊಸತು ಎನಿಸದಿರುವುದೇ?

ಆಹುತಿಗಳನ್ನು ಸ್ವೀಕರಿಸಿ ಮಹಾತೇಜಸ್ಸಿನಿಂದ ರಾರಾಜಿಸುತ್ತಿರುವ ಅಗ್ನಿಯ ದರ್ಶನದಿಂದ, ಹೋಮಧೂಮದ ಸಂಸ್ಪರ್ಶನದಿಂದ, ಯಾಗದಲ್ಲಿ ಸವಿದ ಸೋಮಪಾನದಿಂದ, ಹೋತ್ರನು ಉಚ್ಚರಿಸುವ ಮಂತ್ರಘೋಷದ ಶ್ರವಣದಿಂದ ಹವಿಸ್ಸಿನ ಸುವಾಸನೆಯ ಆಘ್ರಾಣದಿಂದ, ಚಂದ್ರವಂಶತಿಲಕ ಧರ್ಮರಾಯನು ಪವಿತ್ರಭಾವದಲ್ಲಿ ಹರ್ಷಗೊಂಡನು.

ಅಶ್ವಮೇಧಯಾಗದಿಂದ ಭೂಲೋಕವು ತಣಿದು ಪಾವನವಾಯಿತು, ದೇವತಾವಳಿ ಹವಿರ್ಭಾಗದಿಂದ ತೃಪ್ತರಾದರು. ಶ್ರೀಕೃಷ್ಣನು ಅಕ್ಕರೆಯಿಂದ ಧರ್ಮರಾಯನನ್ನು ಆಲಂಗಿಸಿಕೊಂಡು ಹೇಳಿದನು:

'ಅಯ್ಯಾ ದೊರೆಯೇ, ನಿನ್ನ ಯಾಗವು ಸಾಂಗವಾಗಿ ಸಂಪೂರ್ಣವಾಯಿತು. ಇನ್ನು ಗಂಗಾಜಲದಲ್ಲಿ ಅವಭೃತಸ್ನಾನವನ್ನು ಮಾಡು.'

ಬ್ರಹ್ಮಹತ್ಯಾ ಮೊದಲಾದ ಸಂಚಿತಮಹಾಪಾಪಗಳು ನಾಶವಾಗಿ, ಜನ್ಮಪಾವನವಾಗುತ್ತದೆ ಎಂದು ವೇದಪ್ರಮಾಣದಿಂದ ವ್ಯಾಸಮುನಿಗಳು ಅವಭೃತ ಸ್ನಾನವನ್ನು ಮಾಡಿಸಿದರು. ಶ್ರೀಕೃಷ್ಣನು ಪ್ರಸನ್ನನಾದನು. ಯಜ್ಞ ಮುಗಿಯಲು ರಾಜರ್ಷಿಗಳ ಮಧ್ಯೆ ಯುದಿಷ್ಠಿರನು ಶೋಭಿಸಿದನು.

ಧರ್ಮರಾಯನು ದ್ರೌಪದಿಯೊಡನೆ ಪಟ್ಟಾಭಿಷಿಕ್ತನಾದನು. ಎಲ್ಲರೂ ಸೋಮಪಾನ ಮಾಡಿದರು. ವಂಧಿಮಾಗಧರು ಕೊಂಡಾಡಿದರು. ವೀಣಾದಿವಾದ್ಯಗಳ ಸಂಗೀತ ಮೇಳೈಸಿತು. ನಟರು ನರ್ತಿಸಿದರು. ಧರ್ಮಜನು ರತ್ನಭೂಷಿತವಾದ ಚಿನ್ನದ ವೃಷಭವನ್ನು ಬಕದಾಲ್ಭ್ಯಮುನಿಗೆ ಕೊಟ್ಟನು. ಎಲ್ಲ ಋತ್ವಿಜರಿಗೆ ಒಂದೊಂದುರಥ, ಒಂದೊಂದುಆನೆ, ಹತ್ತುಕುದುರೆಗಳನ್ನು ನಾಲ್ವರುಸೇವಕರನ್ನು, ಒಂದುಕೊಳಗ ಮುತ್ತು, ನೂರುಭಾರದ ಬಂಗಾರ, ಸುವರ್ಣಾಲಂಕೃತವಾದ ನೂರುಗೋವುಗಳನ್ನು ನೀಡಿ ಗೌರವಿಸಿದನು. ಎಲ್ಲ ದ್ವಾರಪಾಲಕರನ್ನು ಆದರಿಸಿದನು. ಉಳಿದ ಋಷಿಗಳಿಗೆ ಅವರು ಕೇಳಿದ ವಸ್ತುಗಳನ್ನು ಕೊಟ್ಟು, ಎಲ್ಲ ಬ್ರಾಹ್ಮಣರನ್ನು ಮಹಾದಾನದಿಂದ ತೃಪ್ತಿಪಡಿಸಿದನು. ಅನಂತರ ಚಂದ್ರಹಾಸ ಮುಂತಾದ ರಾಜಮಂಡಲಿಯನ್ನು ಉಪಚರಿಸಿದನು.

ಸಾವಿರಕುದುರೆ, ಹತ್ತುಸಾವಿರ ಆನೆ, ಕೋಟಿದ್ರವ್ಯ, ಮಣಿಮಯಕಿರೀಟ, ಆಭರಣಗಳನ್ನು ಕೊಟ್ಟು ಎಲ್ಲ ರಾಜರನ್ನು ಮರ್ಯಾದೆಯಿಂದ ಆದರಿಸಿದನು. ರುಕ್ಮಿಣಿ ಮೊದಲಾದ ಮುತ್ತೈದೆಯರಿಗೆ ರತ್ನಾಭರಣ, ವಸ್ತ್ರಾದಿಗಳನ್ನು ನೀಡಿ ಸತ್ಕರಿಸಿದನು.

**ಶ್ರೀಕೃಷ್ಣನಿಗೆ ಯಾಗದ ಫಲ ಅರ್ಪಣೆ**

ಧರ್ಮರಾಯನು ಎಲ್ಲ ರಾಜರಿಂದ, ಋಷಿಗಳಿಂದ, ಸಮಸ್ತ ಜನಗಳಿಂದ ತುಂಬಿದ ಸಭಾ ಮಧ್ಯದಲ್ಲಿ ಸಿಂಹಾಸನದ ಮೇಲೆ ಶ್ರೀಕೃಷ್ಣನನ್ನು ಕೂರಿಸಿ ಪೂಜಿಸಿದನು. ಅಶ್ವಮೇಧಯಾಗದ ಫಲವನ್ನು ಭಕ್ತಿಪ್ರೀತಿಗಳಿಂದ ಸಮರ್ಪಿಸಿದನು. ಮೂರುಲೋಕಗಳು ಜಯಕಾರ ಮಾಡಿ ಹೂಮಳೆಗರೆದವು. ದೇವದುಂದುಭಿಗಳು ಮೊಳಗಿದುವು.

ಉಳಿದ ಯೂಪಸ್ತಂಭಗಳಲ್ಲಿದ್ದ ಪಶುಗಳನ್ನು ಬಿಡಿಸಿ ಧರ್ಮರಾಜನು ಇಂದ್ರ ತೇಜದಿಂದ ಬೆಳಗಿದನು. ಶ್ರೀಕೃಷ್ಣನ ಮಹಿಮೆ, ಧರ್ಮರಾಯನ ನಿಷ್ಠೆ, ಭೀಮನ ವಿಶೇಷಗುಣ, ಅರ್ಜುನನ ಶೌರ್ಯ,. ನಕುಲನ ವಿವೇಕ, ಸಹದೇವನ ಔಚಿತ್ಯಪ್ರಜ್ಞೆ, ಧೌಮ್ಯನ ಸಾಮರ್ಥ್ಯ, ಮುನಿವರರ ಶ್ರೇಷ್ಠತೆಯನ್ನು ಬ್ರಾಹ್ಮಣರು ಕೊಂಡಾಡಿದರು.

ರಾಜ ಶ್ರೇಷ್ಠನಾದ ಧರ್ಮರಾಜನು ಬಕದಾಲ್ಭ್ಯ ಮೊದಲಾದ ಋಷಿಗಳಿಂದ ಸತ್ಕತೆಗಳನ್ನು ಕೇಳಿ, ಸಂತೋಷಗೊಂಡನು. ಮಹಾ ವೈಭವ ಸಂಭ್ರಮಗಳೊಂದಿಗೆ ಹಸ್ತಿನಾಪುರವನ್ನು ಪ್ರವೇಶಿಸಿದನು.

ಮೃಷ್ಟಾನ್ನಭೋಜನ, ಭೂರಿದಕ್ಷಿಣೆ, ಇಷ್ಟದಾನದಿಂದ ಸಂತುಷ್ಟರಾದ ಬ್ರಾಹ್ಮಣರು ಧರ್ಮರಾಜನನ್ನು ಆಶೀರ್ವದಿಸಿದರು. ಅಶ್ವಮೇಧಯಾಗವನ್ನು ಹೊಗಳಿದರು. ಸಂತೋಷದಿಂದ ತಮ್ಮತಮ್ಮ ರಾಜ್ಯಗಳಿಗೆ ತೆರಳಿದರು.

ರೋಮಶ, ವಶಿಷ್ಠ, ಬಕದಾಲ್ಭ್ಯ, ವೇದವ್ಯಾಸ, ವಾಮದೇವಾದಿ ಋಷಿಗಳು

ಧರ್ಮರಾಯನಿಂದ ಸತ್ಕೃತರಾದರು. ಅವನನ್ನು ಪ್ರೀತಿಯಿಂದ ಆಶೀರ್ವದಿಸಿ ತಮ್ಮ ತಮ್ಮ ಆಶ್ರಮಗಳಿಗೆ ಹೋದರು. ಧರ್ಮರಾಯನು ಶ್ರೀಕೃಷ್ಣನನ್ನು, ಸಮಸ್ತಯಾದವರನ್ನು, ಉಳಿದ ಎಲ್ಲ ರಾಜರನ್ನು ಸತ್ಕರಿಸಿದನು. ಭೀಮಾರ್ಜುನರ ಜೊತೆಮಾಡಿ ಅವರವರ ನಗರಗಳಿಗೆ ಕಳುಹಿಸಿದನು.

ಭಾರತಾಗ್ರಣಿಯಾದ ಯುಧಿಷ್ಠಿರನು ದೇವಪುರದ ಲಕ್ಷ್ಮೀಶನ ಅಪ್ಪಣೆಯಂತೆ ಅಶ್ವಮೇಧಯಾಗದಲ್ಲಿ ಎಲ್ಲರನ್ನೂ ತೃಪ್ತಿಪಡಿಸಿದನು. ಅರ್ಜುನನು ಪ್ರಮೀಳೆಯೊಡನೆ ಸುಖವಾಗಿರಲು ಅನುಮತಿಸಿದನು. ತಾಯಿ ಕುಂತಿ ಹಾಗೂ ಸಹೋದರರೊಡನೆ ತೊಂಬತ್ತುವರ್ಷಕಾಲ ಚಕ್ರವರ್ತಿಯಾಗಿ ಭೂಮಂಡಲವನ್ನು ಆಳಿದನು.

**ಕಾವ್ಯರಸಿಕರ ಕಿವಿಯಾಭರಣ**

ಮನುಷ್ಯ ಲೀಲೆಯಿಂದ ಅವತರಿಸಿ, ಯಾದವಸಾರ್ವಭೌಮನಾದ ಶ್ರೀಕೃಷ್ಣನು ಪಾಂಡವಸಂಸ್ಥಾಪನಾಚಾರ್ಯ ಎಂಬ ಬಿರುದೇ ಶ್ರೇಷ್ಠವೆಂದು, ಭಕ್ತರಕೀರ್ತಿ ಪ್ರಖ್ಯಾತ ವಾಗುವಂತೆ ಮಾಡುತ್ತಿರುವನು. ಅದು ಕವಿಲಕ್ಷ್ಮೀಶನ ಮನಕ್ಕೆ ಗೋಚರಿಸಲು ತನ್ನ ಕೃತಿಗೆ ದೇವಪುರದ ಲಕ್ಷ್ಮೀಕಾಂತನನ್ನೇ ನಾಯಕನನ್ನಾಗಿಸಿರುವನು.

ಈ ರೀತಿಯಾಗಿ ಜೈಮಿನಿ ಮುನೀಶ್ವರನು ಭೂಪಾಲತಿಲಕನಾದ ಜನಮೇಜಯರಾಯನಿಗೆ ಮಹಾಭಾರತದ ಅಶ್ವಮೇಧ ಪರ್ವದ ಸತ್ಕಥೆಯನ್ನು ಹೇಳಿದನು. ಅದನ್ನು ಕನ್ನಡಭಾಷೆಯಲ್ಲಿ ಅಣ್ಣಮಾಂಕನ ಮಗನಾದ ಲಕ್ಷ್ಮೀಶನ ಮೂಲಕವಾಗಿ ದೇವಪುರದೊಡೆಯ ಲಕ್ಷ್ಮೀಕಾಂತನು ರಚಿಸಿದನು.

ಈ ಜೈಮಿನಿ ಭಾರತ ಕಥೆಯನ್ನು ಒಲವಿನಿಂದ ಹೇಳಿದವರಿಗೆ ಮತ್ತು ಕೇಳಿದವರಿಗೆ ಶ್ರೀಹರಿಯು ಶೋಕ ಭಯ ಸಂತಾಪವನ್ನು ನಿರ್ಮೂಲನೆ ಮಾಡುವನು. ನಿರ್ಮಲ ಸುಬುದ್ಧಿಯನ್ನು ಸಿದ್ಧಿಯನ್ನು ದಯಪಾಲಿಸುವನು.

ಶ್ರೀಕೃಷ್ಣಚರಿತಾಮೃತವಾದ ಈ ಕಾವ್ಯವು ಪುಣ್ಯಕರವಾದುದು, ಸತ್ಕವಿಗಳ ಗಣನೆಗೆ ಅರ್ಹವಾದುದು. ಇದು ಶೃಂಗಾರ ಕುಸುಮಗಳಿಂದ ನಿಬಿಡವಾದ ನಂದನವನ. ನವರಸಗಳ ಪ್ರೌಢಿಮೆಯ ಲಾಲಿತ್ಯದ ಹಲವು ವಿಚಿತ್ರಾರ್ಥಗಳ ಗಣಿ.

ಶಾರದಾದೇವಿಯ ಸಮ್ಮೋಹನಾಂಗ ಲಾವಣ್ಯ, ಕಾವ್ಯರಸಿಕರ ಕಿವಿಯಾಭರಣ ಎನ್ನುವಂತೆ ಲಕ್ಷ್ಮೀಶ ಕವಿಯು ಈ ಮಹಾಕಾವ್ಯವನ್ನು ರಚಿಸಿರುವನು.

* * *

# ಅನುಬಂಧ

## ಅಭಿಪ್ರಾಯಗಳು

'ಮತ್ತೆ ಮಹಾಭಾರತ' ಲಕ್ಷ್ಮೀಶ ಕವಿಯ ಜೈಮಿನಿ ಭಾರತದ ಒಂದು ಸರಳ ಅನನ್ಯ ಪ್ರಯೋಗವೆನಿಸಿದೆ. ಮನೋಹರ್ ಅವರ ಚಿತ್ರಗಳು ಬಹಳ ಸೊಗಸಾಗಿ ಮೂಡಿ ಬರುತ್ತಿದೆ.

**– ಎಸ್. ಕುಮಾರಸ್ವಾಮಿ, ಮೇಗರವಳ್ಳಿ. ಆರ್. ಲಕ್ಷ್ಮಮ್ಮ ಶಿವಮೊಗ್ಗ. ಆರ್. ಕೃಷ್ಣಮೂರ್ತಿ, ಮಂಡ್ಯ.**

ಪಂಡಿತರಿಗೆ ಮೀಸಲಾಗಿದ್ದ ಲಕ್ಷ್ಮೀಶನ 'ಜೈಮಿನಿ ಭಾರತ'ವನ್ನು ಸರಳಗನ್ನಡದಲ್ಲಿ ಪಾಮರರಿಗೆ ತಲುಪಿಸಿದ ಕೀರ್ತಿ 'ಸುಧಾ' ವಾರ ಪತ್ರಿಕೆಯದು. ಮಹಾಕಾವ್ಯಗಳು ನಮ್ಮ ದೇಶದ ಸಾಹಿತ್ಯ ಲೋಕದ ರಾಯಭಾರಿಗಳಾಗಿದ್ದು, ಸದಾಕಾಲಕ್ಕೂ ಪ್ರಸ್ತುತವಾಗಿದೆ. ಬೇಂದ್ರೆ ಶಿಷ್ಯ ಜಿ. ಕೃಷ್ಣಪ್ಪನವರ ಶೈಲಿ ಸುಲಲಿತವಾಗಿ ಓದಿಸಿಕೊಂಡು ಹೋಗುತ್ತಿದೆ.

**– ಎಂ. ಪುಟ್ಟತಾಯಮ್ಮ, ಗುಂಡ್ಲುಪೇಟೆ. ರುದ್ರೇಶ್ ಅಂದರಣೆ, ಕೋಲಾರ. ಎಂ. ಆಶಾರಾಣಿ, ಶಿವಮೊಗ್ಗ.**

ಮಹಾಭಾರತವನ್ನು ಎಷ್ಟುಬಾರಿ ಸವಿದರೂ ಹೊಸ ರುಚಿಯೇ, ಬಾಲ್ಯದಲ್ಲಿ ಕೇಳಿ ಮರೆತು ಹೋಗಿದ್ದನ್ನು 'ಮತ್ತೆಮಹಾಭಾರತ' ಎಂಬ ಹೆಸರಿನಲ್ಲಿ ಪ್ರಕಟಿಸುತ್ತಿರುವುದು ಅರ್ಥಪೂರ್ಣ. ಮನೋಹರ್ ಚಿತ್ರಗಳು ಅದ್ಭುತವಾಗಿವೆ.

**– ತರಂಗಿಣಿ, ತುಮಕೂರು. ನಂ. ನಾಗಭೂಷಣ, ಬೆಂಗಳೂರು. ಸು.ವಿಜಯಲಕ್ಷ್ಮಿ, ಶಿವಮೊಗ್ಗ.**

ಕರ್ನಾಟಕ ಕವಿಚೂತವನಚೈತ್ರನೆಂದೆ ಪ್ರಖ್ಯಾತನಾದ ಕವಿ ಲಕ್ಷ್ಮೀಶನ ಜೈಮಿನಿ ಭಾರತವನ್ನು ಡಾ. ಜಿ. ಕೃಷ್ಣಪ್ಪನವರು ಸೊಗಸಾದ ಗದ್ಯದಲ್ಲಿ ನಿರೂಪಿಸಿದ್ದಾರೆ. ಜೈಮಿನಿ ಭಾರತ ಹಾಗೂ ಲಕ್ಷ್ಮೀಶನ ಕವಿಯನ್ನು ಮರೆಯಬಾರದೆಂಬ 'ಸುಧಾ' ಪತ್ರಿಕೆಯ ಹಾಗೂ ಕೃಷ್ಣಪ್ಪನವರ ಕಕ್ಕುಲತೆಗೆ ಅಭಿನಂದನೆಗಳು. ಕಥೆಗೆ ತಕ್ಕ ಕಲಾಸ್ಪರ್ಶವನ್ನು ಮನೋಹರ್ ಚಿತ್ರಗಳು ನೀಡಿದೆ.

**– ಎ.ಡಿ. ನಂಜುಂಡಸ್ವಾಮಿ, ಚಿಕ್ಕಮಗಳೂರು. ಡಾ. ಭತಮುರ್ಗೆ ಚಂದ್ರಪ್ಪ ಬೀದರ. ಕೋ.ಸು.ನರಸಿಂಹಮೂರ್ತಿ, ಮೈಸೂರು.**

ಇಂದಿನ ಯುವಪೀಳಿಗೆಗೆ ಇಂತಹ ಮಹಾಕಾವ್ಯಗಳು ಅವಶ್ಯಕ.

**– ಎನ್. ಶೈಲಜಾ, ಸುಶೀಲಾಸೋಮಶೇಖರ್, ಹಾಸನ.**

ಕವಿ ಲಕ್ಷ್ಮೀಶನ ಜೈಮಿನಿ ಭಾರತ ಆಧಾರಿತ ಗದ್ಯ ನಿರೂಪಣೆ 'ಮತ್ತೆಮಹಾಭಾರತ' ಬೇಂದ್ರೆಯವರ ಅಭಿಮಾನಿ ಶಿಷ್ಯ ಡಾ.ಜಿ. ಕೃಷ್ಣಪ್ಪನವರಿಂದ ಸರಳವಾಗಿ, ಮೂಲಕಥೆಗೆ ಭಂಗ ಉಂಟಾಗದಹಾಗೆ ನಿರೂಪಿತವಾಗಿರುವದು 'ಸುಧಾ' ಪತ್ರಿಕೆಯ ಹೆಮ್ಮೆಯ ಕೊಡುಗೆ. ಕಥೆಗೆ ತಕ್ಕಹಾಗೆ ಮನೋಹರ್ ಚಿತ್ರಗಳು ಅರ್ಥ ಪೂರ್ಣವಾಗಿವೆ.

**– ಯು.ಎನ್. ಸಂಗನಾಳಮಠ, ಹೊನ್ನಾಳಿ.**

ಚಂಡಿ ಕಥೆ ಮತ್ತು ಸುಧನ್ವನ ಕಾಳಗಗಳು ಚಿಕ್ಕಂದಿನಲ್ಲಿ ನೋಡುತ್ತಿದ್ದ ಯಕ್ಷಗಾನಗಳನ್ನು ನೆನಪಿಸುತ್ತವೆ.

**– ಪಿ.ವಿ. ದೇವರಾಯಮಲ್ಯ, ಎಚ್. ವಿದ್ಯಾ, ಮೈಸೂರು.**

'ಮತ್ತೆ ಮಹಾಭಾರತ' ವನ್ನು ಈಗಿನ ಆಡಳಿತ ಪಕ್ಷದ ಧುರೀಣರು ಮತ್ತೆಮತ್ತೆ ಓದಿ ರಾಜ್ಯವನ್ನು ಹೇಗೆ ನಡೆಸಬೇಕೆಂದು ತಿಳಿಯಬೇಕು.

**– ಎಂ. ಎಲ್. ಲಕ್ಷ್ಮಣರಾವ್. ದಾವಣಗೆರೆ.**

ಸೊಗಸಾದ ಧಾರಾವಾಹಿ ಡಾಕ್ಟರ್ ಜಿ.ಕೃಷ್ಣಪ್ಪ ಸರಳಗನ್ನಡದಲ್ಲಿ ಪುನರ್‌ರಚಿಸಿದ ಲಕ್ಷ್ಮೀಶ ಕವಿಯ ಜೈಮಿನಿಭಾರತವು 'ಮತ್ತೆ ಮಹಾಭಾರತ' ಹೆಸರಿನಲ್ಲಿ ಹೆಮ್ಮೆಯ 'ಸುಧಾ' ವಾರ ಪತ್ರಿಕೆಯಲ್ಲಿ ೧೩ ವಾರ ಕಾಲ ಸೊಗಸಾಗಿಮೂಡಿ ಬಂತು. ಲಕ್ಷ್ಮೀಶನ ಕಾವ್ಯದ ಸ್ವಾರಸ್ಯ ಕಡಿಮೆಯಾಗದೆ, ಮೂಲಕ್ಕೆ ಚ್ಯುತಿ ತಾರದೆ, ಈಗಿನವರಿಗೆ ಮನಮುಟ್ಟುವಂತೆ ನಿರೂಪಿಸಲಾಗಿದೆ.

**– ಎಸ್. ಎಸ್. ರಮೇಶ್, ಮೈಸೂರು. ಸು. ವಿಜಯಲಕ್ಷ್ಮೀ, ಶಿವಮೊಗ್ಗ. ಜಿ. ಗಿರಿಜ, ಜಿ. ಶಿವಮೂರ್ತಿ, ದಾವಣಗೆರೆ.**

ಎಲ್ಲಾ ಕಾಲಕ್ಕೂ ಭಾರತೀಯರ ಭಾವನೆಗಳನ್ನು ಒಂದಾಗಿಸಿ ಸ್ಪಂದಿಸುವಂತಹವು ರಾಮಾಯಣ, ಮಹಾಭಾರತ ಕಾವ್ಯಗಳು. ಯುವಕರಲ್ಲಿ ನವ ಚೈತನ್ಯ ತುಂಬಲು ಇಂತಹ ಧಾರಾವಾಹಿಗಳು ಆಗಾಗ ಪ್ರಕಟವಾಗುವುದು ಅವಶ್ಯ.

**– ನರಗುಂದ ರುದ್ರಪ್ಪ, ಹಾವೇರಿ, ರಾಜಶೇಖರ ಎಸ್. ಬಡಿಗೇರ, ಜೇವರಗಿ. ಸುಶೀಲ ಪಾಟೀಲ, ಶಂಭು, ವೀರಮ್ಮ ದಿವಟರ, ಕೊಪ್ಪಳ.**

'ಜೈಮಿನಿ ಭಾರತ' ದ ಉಪಸಂಹಾರದ ಕತೆ ಓದಿ ವಿಷಾದ ಆವರಿಸಿತು. ಪಾಂಡವರ ದಿಗ್ವಿಜಯಕ್ಕೆ, ವೈಭವಕ್ಕೆ ಕಾರಣವಾದ ಯಜ್ಞಾಶ್ವವನ್ನು ವಿಧ್ಯುಕ್ತವಾಗಿ ಸಂಹರಿಸಿ, ಅದಕ್ಕೆ ಮೋಕ್ಷ (ಶ್ರೀ ಹರಿಯಲ್ಲಿ ಐಕ್ಯ!) ಕೊಡಿಸಿದರಲ್ಲಾ ಪುರೋಹಿತರು! ಯಜ್ಞಾಶ್ವಗೈದ ತಪ್ಪೇನು? ಅನ್ಯಾಯವೇನು?

ಶಿಷ್ಟರ ರಕ್ಷಣೆಗೆ ಅವತಾರ ಎತ್ತುವ ವಿಷ್ಣು ದುಷ್ಟ ಸಂಹಾರ ಮಾಡುವುದು ಧರ್ಮ. ಆದರೆ ಅಂಥವನೇ ಸುಂದರ ರೂಪದ ಸಾಹಸಿಯಾದ ಅಶ್ವಮೇಧದ ಕುದುರೆಯನ್ನು ಇನ್ನಿಲ್ಲದಂತೆ ಸಂಹರಿಸಲು ಬ್ರಾಹ್ಮಣರಿಗೆ ಅಪ್ಪಣೆಕೊಡಿಸಿದ್ದು, ಕಲಿಯುಗ ಪೂರ್ವದ ಧರ್ಮವೆ? ಮಹಾಭಾರತವನ್ನು ಕನ್ನಡಕ್ಕೆ ತಂದ ಲಕ್ಷ್ಮೀಶನಾದರೂ ಪ್ರಾಣಿ ಹಿಂಸೆಯನ್ನು ವಿಮರ್ಶಿಸಬಹುದಿತ್ತಲ್ಲವೆ?

**– ಸರ್ವಜಿತ, ಹುಬ್ಬಳ್ಳಿ.**

ಸುಲಲಿತ ಕನ್ನಡ, ಸರ್ವರಿಗೂ ಆನಂದದಾಯಕ, ಇಷ್ಟು ಬೇಗ ಮಹಾಭಾರತ ಮುಗಿದಿದ್ದು ಸಿಹಿ ಚಪ್ಪರಿಸುತ್ತಿದ್ದ ಮಗುವಿನ ಬಾಯಿಂದ ಸಿಹಿಯನ್ನು ಕಿತ್ತುಕೊಂಡ ಹಾಗಾಯಿತು. ೧೩ ವಾರಕ್ಕೇ ಮುಗಿದೇ ಹೋಗಿಬಿಟ್ಟಿತಲ್ಲಾ? ಮರೆತು ಹೋದ ಮಹಾಭಾರತ ಹಾಗೂ ಗೊತ್ತಿಲ್ಲದ ಕೆಲವುಸಂಗತಿ ತಿಳಿಸಿದ್ದಕ್ಕೆ ಧನ್ಯವಾದಗಳು.

**– ನಟರಾಜ, ಮೈಸೂರು. ತರಂಗಿಣಿ, ತುಮಕೂರು. ಬಿ. ಮೊಹಿದ್ದಿನ್ ಖಾನ್ ಚಿತ್ರದುರ್ಗ. ನಾರಾಯಣಯಾಜಿ, ಶಿರಾಲಿ.**

ನಾನು ಇದುವರೆಗೆ ಕೇಳಿರದ ಸುಂದರ ಅಪರೂಪದ ಹೆಸರುಗಳು, ಈಗಿನ ಮಕ್ಕಳಿಗೆ ಅರ್ಥವಿಲ್ಲದ ಹೆಸರಿಡುವ ಬದಲು, ಈ ಕೃತಿಯಿಂದ ಹೆಸರುಗಳನ್ನು ಆಯ್ದು ಕೊಳ್ಳಬಹುದು.

**– ವಾಣಿನಾರಾಯಣ್, ಮಂಗಳೂರು.**

'ಮತ್ತೆಮಹಾಭಾರತ' ಪ್ರಕಟವಾಗುತ್ತಿದ್ದಾಗ ಪ್ರತಿವಾರವೂ 'ಸುಧಾ' ಪತ್ರಿಕೆಯನ್ನು ಬಕಪಕ್ಷಿಯಂತೆ ಕಾಯುವ ಹಾಗಿತ್ತು.

**– ಎಂ.ಇ. ಅಹ್ಮದ್ ಖಾನ್, ಬೆಂಗಳೂರು.**

ಲಕ್ಷ್ಮೀಶನ 'ಜೈಮಿನಿ ಭಾರತ' ಮೂಲ ಕೃತಿಯನ್ನು ಓದದ ನನ್ನಂಥವರಿಗೆ ರಸದೌತಣ ನೀಡಿತು. ಜಿ. ಕೃಷ್ಣಪ್ಪನವರ ಸರಳಗದ್ಯದಲ್ಲಿ, ನಿರರ್ಗಳವಾಗಿ ಹರಿದುಬಂತು ಉತ್ತರ ಮಹಾಭಾರತ. ಪ್ರಾಚೀನ ಕಾವ್ಯವನ್ನು ಗದ್ಯದಲ್ಲಿ ಭಟ್ಟಿ ಇಳಿಸಿದ ಕೃತಿಗಳು 'ಸುಧಾ' ಪತ್ರಿಕೆಯಲ್ಲಿ ಹೆಚ್ಚಾಗಿ ಬರಲಿ.

**– ವೀರೇಂದ್ರ ಸಿಂಪಿ, ಬೀದರ.**

ಉಪಶೀರ್ಷಿಕೆಗಳು ಆಕರ್ಷಕವಾಗಿದ್ದವು. ವೀರವರ್ಮನ ಸಾಹಸದ ಬಣ್ಣನೆ, ವಿಷಯೆಯ ಮದುವೆಯಲ್ಲಿ ಮದುವಣಗಿತ್ತಿಯನ್ನು ಅಲಂಕರಿಸಿದ ಬಣ್ಣನೆ, ದುಷ್ಟಬುದ್ಧಿಯ ಕುತಂತ್ರದ ಚಿತ್ರಣ – ಅಷ್ಟೇ ಏಕೆ? ಧಾರಾವಾಹಿಯ ಪ್ರತಿ ವಿವರವೂ ಕಣ್ಣಿಗೆ ಕಟ್ಟಿದಂತೆ ಚಿತ್ರಿಸಲಾಗಿತ್ತು.

**– ಡಾ. ಕೂಡ್ಲೂರು ವೆಂಕಟಪ್ಪ, ಬೆಂಗಳೂರು.**

ಪುರಾತನ ಮಹಾಕಾವ್ಯಗಳು, ಈ ಕಾಲದಲ್ಲಿ ಓದುಗವಲಯ ಸೃಷ್ಟಿಸಿ ಕೊಳ್ಳಲಾರದೆಂಬ ಮಾತನ್ನು 'ಸುಧಾ' ಪತ್ರಿಕೆ ಸುಳ್ಳಾಗಿಸಿತು.

**– ಕೊಹಿಮ, ಬಸರಕೋಡು.**

# ಪ್ರಶ್ನೆ – ಸ್ಪಷ್ಟನೆ

1. ಡಾ॥ ಜಿ. ಕೃಷ್ಣಪ್ಪ ಅವರು ಸಾರವತ್ತಾಗಿ ಬರೆದಿರುವ ಲಕ್ಷ್ಮೀಶ ಕವಿಯ 'ಜೈಮಿನಿ ಭಾರತ' ಮತ್ತೆ ಅದಕ್ಕೆ 'ಸುಧಾ' ಪತ್ರಿಕೆಯವರು ಮರುನಾಮಕರಣ ಮಾಡಿರುವ 'ಮತ್ತೆ ಮಹಾಭಾರತ'ದಲ್ಲಿ ಉಪಕಥೆಗಳ ಅನಾವರಣ ಚೆನ್ನಾಗಿ ಆಗುತ್ತಿದೆ. ಇದರಲ್ಲಿ ಸೀತಾಪರಿತ್ಯಾಗ ನಡೆದದ್ದು ಒಬ್ಬ ಅಗಸನ ಮಾತಿನಿಂದ ಎಂದಿದೆ. ಆದರೆ ಎಲ್. ರಂಗನಾಥಶರ್ಮಾರ ಚಾಮರಾಜೋಕ್ತಿವಿಲಾಸ ಎಂಬ 'ಕನ್ನಡ ರಾಮಾಯಣ'ದಲ್ಲಿ ಸೀತಾದೇವಿಗೆ ಅಪವಾದ ಬಂದದ್ದು ಪುರಜನರಿಂದ ಎಂದಿದೆ. ಅಗಸನ ಪ್ರಸ್ತಾಪ ಎಲ್ಲೂ ಬಂದಿಲ್ಲ.

   **– ಎನ್ಕೆ ಶಂಕರಪ್ಪ, ಭದ್ರಾವತಿ.**

2. ಸೀತಾದೇವಿಯನ್ನು ವಾಲ್ಮೀಕಿ ಕವಿ ಅಯೋಧ್ಯೆಗೆ ಮರಳಿಕಳಿಸಿದನಂತರ ಶ್ರೀರಾಮನು ಸೀತೆಯೊಂದಿಗೆ ರಾಜ್ಯಭಾರ ಮಾಡಿದ ಎಂದು 'ಮತ್ತೆ ಮಹಾಭಾರತ'ದಲ್ಲಿ ಪ್ರಸ್ತಾಪಿಸಲಾಗಿದೆ. ಆದರೆ ವಾಲ್ಮೀಕಿ ರಾಮಾಯಣದಲ್ಲಿ ಸೀತೆರಾಮನೊಂದಿಗೆ ತೆರಳದೇ ಭೂಮಿಯಲ್ಲಿ ವಿಲೀನಳಾಗುತ್ತಾಳೆ ಎಂದು ಶಾಲೆಯ ದಿನಗಳಲ್ಲಿ ಓದಿದ ನೆನಪು. ಲಕ್ಷ್ಮೀಶ ಯಾಕೆ ಈ ಮಾರ್ಪಾಡು ಮಾಡಿದ. ಹಾಗಾದರೆ ಯಾವುದು ಸರಿ?

   **– ಸುಮತಿ ಕೃಷ್ಣರಾವ್, ತುಮಕೂರು.**

1. ಲಕ್ಷ್ಮೀಶನ ಕಾವ್ಯದಲ್ಲಿ ಅಗಸನ ಪ್ರಸ್ತಾಪವಿದೆ.
2. ವಾಲ್ಮೀಕಿ ರಾಮಾಯಣ ಶ್ರೀರಾಮನ ಪಟ್ಟಾಭಿಷೇಕದಲ್ಲಿ ಕೊನೆಯಾಗುತ್ತದೆ. ಲಕ್ಷ್ಮೀಶಕವಿ ಉತ್ತರ ರಾಮಾಯಣವನ್ನು ಕಾವ್ಯವಾಗಿ ನೀಡಿದ್ದಾನೆ. ಇಲ್ಲಿ ಸೀತಾಪರಿತ್ಯಾಗ, ಶ್ರೀರಾಮ – ಕುಶಲವರ ಯುದ್ಧ ಇದೆ. ರಾಮಾಯಣ ಕಥೆಯು ಕಾಲಾನುಕಾಲದಲ್ಲಿ ಹಲವು ರೂಪಗಳನ್ನು ಪಡೆದಿದೆ. ಲಕ್ಷ್ಮೀಶನ ಕಾವ್ಯದಲ್ಲಿ ಇರುವುದನ್ನು ನಾನು ಸರಳಕಥೆಯಾಗಿ ನೀಡಿದ್ದೇನೆ.

**– ಡಾ॥ ಜಿ. ಕೃಷ್ಣಪ್ಪ.**

# ಲೇಖಕರ ಕೃತಿಗಳು

೧. ಹಾಡುಹಕ್ಕಿ ಅಂಬಿಕಾತನಯದತ್ತ (೧೯೯೫)
ಮೂರನೆ ಆವೃತ್ತಿ ೨೦೧೨

೨. ಡಿ.ಆರ್. ಬೇಂದ್ರೆ (೧೯೯೭)
ಮೈಸೂರು ವಿಶ್ವವಿದ್ಯಾನಿಲಯವು ಪ್ರಕಟಿಸಿರುವ ಆಂಗ್ಲಕೃತಿ

೩. ನಾಕುತಂತಿ – ಒಂದು ಟಿಪ್ಪಣಿ (೨೦೦೦)
ಎರಡನೆ ಆವೃತ್ತಿ ೨೦೧೦

೪. ರಸ್ತೆ ನಿಯಮಗಳು (೨೦೦೦)
ಮೈಸೂರು ವಿಶ್ವವಿದ್ಯಾನಿಯವು ಪ್ರಕಟಿಸಿರುವ ಕೃತಿ
ಮೂರನೆ ಆವೃತ್ತಿ ೨೦೧೧

೫. ಹೂತಽದ ಹುಣಸಿ (೨೦೦೦)
(ದ.ರಾ. ಬೇಂದ್ರೆ ಕಾವ್ಯ ವಿಮರ್ಶೆ)
ಎರಡನೆ ಆವೃತ್ತಿ ೨೦೧೧

೬. ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ – ಒಂದು ಅಧ್ಯಯನ (೨೦೦೧)
(ಪಿಎಚ್.ಡಿ., ಮಹಾಪ್ರಬಂಧ)
ಎರಡನೆ ಆವೃತ್ತಿ ೨೦೧೨

೭. ಬರೆಹದಲ್ಲಿ ಬೇಂದ್ರೆಯವರ ಬದುಕು (೨೦೦೮)
ದ.ರಾ. ಬೇಂದ್ರೆ ರಾಷ್ಟ್ರೀಯ ಟ್ರಸ್ಟ್, ಧಾರವಾಡ ಪ್ರಕಟಿಸಿರುವ ಕೃತಿ

೮. ಅಂತರಂಗದತ್ತ ನಯನ (೨೦೧೦)



ಕೃಷ್ಣಪ್ಪನವರು ಈಗಾಗಲೇ ಜೈಮಿನೀ ಭಾರತವನ್ನು ಲಕ್ಷಲಕ್ಷ ಸಾಹಿತ್ಯಾಸಕ್ತರಿಗೆ ಮುಟ್ಟಿಸುವ ಕೈಂಕರ್ಯವನ್ನು 'ಮತ್ತೆ ಮಹಾಭಾರತ' ಎಂಬ ಶೀರ್ಷಿಕೆಯಲ್ಲಿ 'ಸುಧಾ' ವಾರಪತ್ರಿಕೆಯ ಮೂಲಕ ನೆರವೇರಿಸಿ, ಪರಿಪೂರ್ಣವಾದ ಯಶಸ್ಸನ್ನು ಗಳಿಸಿದ್ದಾರೆ. ಚೇತೋಹಾರಿಯಾದ ಗದ್ಯಾನುವಾದದ ಮೂಲಕ ವಿದ್ವಾಂಸರ ವಿಶ್ವಾಸಕ್ಕೆ ಮಾತ್ರವಲ್ಲದೆ, ಶ್ರೀಸಾಮಾನ್ಯರ ವಿಶ್ವಾಸಕ್ಕೂ ಅವರು ಪಾತ್ರರಾಗಿದ್ದಾರೆ.

'ಸುಧಾ' ಪತ್ರಿಕೆಯಲ್ಲಿ ಸಂಕ್ಷಿಪ್ತವಾಗಿ ಪ್ರಕಟವಾಗಿದ್ದ ಕಥಾನಕವನ್ನು ಕೃಷ್ಣಪ್ಪನವರು, ಮೂಲವನ್ನು ಅನುಸರಿಸಿ ಮತ್ತಷ್ಟು ವಿಸ್ತರಿಸಿ 'ವಚನ ಜೈಮಿನಿಭಾರತ' ಎಂಬ ಹೊಸ ಶೀರ್ಷಿಕೆಯಲ್ಲೀಗ ಪ್ರಕಟಿಸಿದ್ದಾರೆ. ಅದು ಎ.ಆರ್. ಕೃಷ್ಣಶಾಸ್ತ್ರಿಗಳ 'ವಚನಭಾರತ' ಎಂಬ ಶೀರ್ಷಿಕೆಯನ್ನು ನೆನಪಿಗೆ ತರುವಂತಿದೆ. ಅಷ್ಟು ಮಾತ್ರವಲ್ಲ, ಕಥೆಯ ನಿರೂಪಣೆಯಲ್ಲಾಗಲಿ, ಸಂಗ್ರಹಕೌಶಲದಲ್ಲಾಗಲಿ, ಗದ್ಯಶೈಲಿಯ ಸರಸತೆಯಲ್ಲಾಗಲಿ, ಲವಲವಿಕೆಯಿಂದ ಕೂಡಿದ ಮುನ್ನಡೆಯಲ್ಲಾಗಲಿ ಆ ಗ್ರಂಥದ ಆದರ್ಶಗಳೇ ಇಲ್ಲಿಯೂ ಕೆಲಸ ಮಾಡಿ, ಕೃಷ್ಣಪ್ಪನವರನ್ನು ವಿಜಯದ ಹಾದಿಯಲ್ಲಿ ಮುನ್ನಡೆಸಿವೆ. ಅವರು ಕೃಷ್ಣಶಾಸ್ತ್ರಿಗಳಾದರೆ, ಇವರು ಕೃಷ್ಣಪ್ಪನವರು; ಅದೂ ಕೃಷ್ಣಕಥೆಯೇ, ಇದೂ ಕೃಷ್ಣಕಥೆಯೇ! ಅದೂ ಸಚಿತ್ರ, ಇದೂ ಸಚಿತ್ರ!

ಡಾ॥ ಕೆ. ಅನಂತರಾಮು



ಕಾಮಧೇನು
ಪುಸ್ತಕ ಭವನ
5/1, ನಾಗಪ್ಪ ರಸ್ತೆ, ಶೇಷಾದ್ರಿಪುರ, ಬೆಂಗಳೂರು-20



₹ 150/-